ನಾನು ಅಧ್ಯಕ್ಷನಾಗುವ ವೇಳೆಗೆ ಸರಿಯಾಗಿ ಶ್ರೀ ಮೀನಾಕ್ಷಿ ಸುಂದರಂ ಅವರು ಇಲಾಖೆಯ ಮುಖ್ಯಸ್ಥರಾಗಿದ್ದರು. ಇವರ ನನ್ನ ಸಂಬಂಧ ಜಗಳದಿಂದಲೇ ಮೊದಲಾಯಿತು. ತುಮಕೂರಿನಲ್ಲಿ ಇವರು ಜಿಲ್ಲಾಧಿಕಾರಿಯಾಗಿದ್ದರು. ಆಗ ನಾನು ಸರ್ಕಾರಿ ವಕೀಲನಾಗಿದ್ದೆ. ಯಾವುದೋ ವಿಷಯದಲ್ಲಿ ನನ್ನಿಂದ ಕೆಲವು ಮಾಹಿತಿ ಕೇಳಿದ್ದರು. ನಾನು ನಿಮ್ಮಲ್ಲಿಯೇ ಇದೆ, ತೆಗೆದು ನೋಡಿ ಎಂದು ಬರೆದೆ. ಜಿಲ್ಲಾಧಿಕಾರಿಗಳು ತಾನೆ? ಸರ್ಕಾರಕ್ಕೆ ನಿಮ್ಮ ಮೇಲೆ ವರದಿ ಮಾಡುತ್ತೇನೆ ಎಂದು ನನಗೆ ಬೆದರಿಕೆ ಪತ್ರ ಬರೆದರು? ಪತ್ರ ಓದಿ ನಕ್ಕು, ಉತ್ತರ ಬರೆದೆ. ದಯಮಾಡಿ ಆ ಕೆಲಸ ಮಾಡಿ, ಅದಕ್ಕಿಂತ ಮೊದಲು Please ascertain from your predessor, under what circumstances I accepted this Dirty job ಎಂದು ಬರೆದು Dirty job ಎನ್ನುವುದನ್ನು ಅಂಡರಲೈನ್ ಮಾಡಿದ್ದೆ. ಈ ಪತ್ರವನ್ನು ಓದಿ ಕಿಡಿ ಕಾರಿದರಂತೆ. ತುಮಕೂರಿನ ಆಗಿನ ಸರ್ಕಾರಿ ವಕೀಲರಾದ ಕಡಬಾದ ಗರುಡಾಚಾರರನ್ನು ಕರೆದು ಪತ್ರ ಅವರ ಮುಂದಿಟ್ಟು ನನ್ನ ಉದ್ಧಟತನದ ಬಗ್ಗೆ ಹಾರಾಡಿದರಂತೆ.

ಅವರಿಗಿಂತ ಮೊದಲಿದ್ದ ಜಿಲ್ಲಾಧಿಕಾರಿಗಳಾದ ಶ್ರೀ ಎಸ್. ದೊರೈರಾಜ್‌ರವರು ಬಲವಂತದಿಂದ ಈ ಸರ್ಕಾರಿ ವಕೀಲಿಗಿರಿಯನ್ನು ನನ್ನ ತಲೆಗೆ ಕಟ್ಟಿದ್ದರೆಂದೂ, "ನೀವು ಇಡೀ ಒಂದು ವರ್ಷದಲ್ಲಿ ಕೊಡುವ ಫೀಸಿನ ಹಣವನ್ನು ಅವನು ಒಂದು ದಿನದಲ್ಲಿಯೇ ಸಂಪಾದಿಸುತ್ತಾನೆ" ಎಂದು ಶ್ರೀ ಗರುಡಾಚಾರ್ ಅವರು ಅವರ ಮಾಮೂಲಿ ದೇಶಾವರಿ ನಗೆ ನಗುತ್ತಾ, ಅವರ ಫಾರಿನ್ ಶರ್ಟಿಗೆ ಸುತ್ತಿದ್ದ ದೇಶೀಯ ಟೈ ಸರಿಮಾಡಿಕೊಂಡು ತಿಳಿಸಿದರಂತೆ. ಅಲ್ಲಿಗೆ ಆ ವಿಷಯ ಮರೆತಿದ್ದೆ. ಬೇಕೆಂತಲೇ ಇಲ್ಲಿ ನನ್ನ ರಾಜಕೀಯ ಚಟುವಟಿಕೆಗಳನ್ನು ನಿಮ್ಮಿಂದ ಮರೆ ಮಾಚುತ್ತಿದ್ದೇನೆ. ಮೂಲತಃ ಕಾಂಗ್ರೆಸ್‌ನಲ್ಲಿ ಬೆಳೆದ ನಾನು ೧೯೬೯ ರಲ್ಲಿ ಕಾಂಗ್ರೆಸ್ ಇಬ್ಭಾಗವಾದಾಗ "ಓ" ಕಾಂಗ್ರೆಸ್‌ನಲ್ಲಿ ಉಳಿದೆ. ೧೯೭೭ನೇ ಮೇ ಒಂದನೇ ತಾರೀಕು ಜೆ. ಪಿ. ಅವರ ಕರೆಯಂತೆ, ಎಲ್ಲಾ ವಿರೋಧ ಪಕ್ಷಗಳ ಜೊತೆ "ಓ" ಕಾಂಗ್ರೆಸ್ ಜನತಾ ಪಕ್ಷ ಸೇರಿದಾಗ ನಾನು ಜನತಾ ಪಕ್ಷ ಸೇರಿದೆ. ಇಂದಿಗೂ (21. 9. 1991) ಜನತಾ ಪಕ್ಷದಲ್ಲಿಯೇ ಉಳಿದಿದ್ದೇನೆ. ಇಷ್ಟು ಸಾಕು ನನ್ನ ರಾಜಕೀಯ.

೧೯೭೫- ೭೬, ಈ ರಾಷ್ಟ್ರದ ಚರಿತ್ರೆಯಲ್ಲಿ ಬಲು ಪ್ರಮುಖವಾದ ವರ್ಷಗಳು. ಅಂದಿನ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರು ತಮ್ಮ ಅಧಿಕಾರ ಉಳಿಸಿಕೊಳ್ಳುವ ಒಂದೇ ಆಸೆಯಿಂದ, ಈ ದೇಶದಲ್ಲಿ ತುರ್ತು ಪರಿಸ್ಥಿತಿಯನ್ನು ಘೋಷಿಸಿ, ಸಾವಿರಾರು ಜನ ನಿರಪರಾಧಿಗಳನ್ನು ಕಾರಾಗೃಹಕ್ಕೆ ಹಾಕಿ, ಪ್ರಜಾಪ್ರಭುತ್ವದ ಸಮಾಧಿ ಮಾಡಿ, ಆ ಸಮಾಧಿಯ ಮೇಲೆ ಕುಳಿತು ಅಧಿಕಾರ ಮಾಡಿದರು. ಜೆ. ಪಿ. ಭ್ರಷ್ಟತೆಯ ವಿರುದ್ಧ ಕರೆ ಕೊಟ್ಟರು. ಯುವಕರು ಸಿಡಿದೆದ್ದರು. ಎಲ್ಲಾ ಕಡೆ ಸಂಘರ್ಷ ಸಮಿತಿಯ ಮುಂದಾಳುತನ ವಹಿಸಿದೆ. ಈ ಒಂದೇ ಒಂದು ಅಪರಾಧಕ್ಕಾಗಿ ಪೊಲೀಸರು ನನ್ನನ್ನು ಬಂಧಿಸಿದರು. ನಾನು ವಕೀಲಿಗಿರಿ ಮಾಡುವ ಕೋರ್ಟಿನ ಕಟಕಟೆಯಲ್ಲಿಯೇ ನಿಲ್ಲಿಸಿದರು. ಜಾಮೀನು ಕೊಡಲು ನಾನು ನಿರಾಕರಿಸಿದೆ. ಆದರೆ "ಕೋರ್ಟಿನಲ್ಲಿರುವ ಎಲ್ಲಾ ಕೇಸುಗಳಲ್ಲಿಯೂ ಇವರು ವಕಾಲತ್ತು

ವಹಿಸಿದ್ದಾರೆ. ಇವರನ್ನು ಜೈಲಿಗೆ ಕಳುಹಿಸಿದರೆ ಕೋರ್ಟಿನ ಕೆಲಸಕ್ಕೆ ತೊಂದರೆಯಾಗುತ್ತದೆಂದು" ಸ್ವಂತ ಮುಚ್ಚಳಿಕೆಯ ಮೇಲೆ ಬಿಡುಗಡೆ ಮಾಡಿದರು. ಅಲ್ಲಿಗೂ ಆಗಿನ ಅಧಿಕಾರ ರೂಢ ಜನರಿಗೆ ಸಮಾಧಾನವಾಗದೆ ಮೀಸಾ ಕೆಳಗೆ ನನ್ನನ್ನು ಬಂಧಿಸಿ ಜೈಲಿಗೆ ಕಳುಹಿಸುವ ಉನ್ನಾರ ಮಾಡಿದರು. ಆದರೆ ಅವರ ಉನ್ನಾರ ಸಫಲವಾಗಲಿಲ್ಲ. ಕಾರಣ ಮುಂದೆ ನಿಮಗೆ ತಿಳಿಯುತ್ತೆ.

ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷನಾಗಿ, ಎಲ್ಲದಕ್ಕೂ ಇಲಾಖೆಯ ನಿರ್ದೇಶಕರಾದ ಶ್ರೀ ಮೀನಾಕ್ಷಿ ಸುಂದರಂ ಅವರನ್ನು ನೋಡಲು ಶ್ರೀ ಯಶವಂತರಾವ್ ಅವರಿಗೆ ಹೇಳಿ ಭೇಟಿಯ ಕಾಲ ಗೊತ್ತು ಮಾಡಿಕೊಂಡು, ಬಹು ಅಂತಸ್ತುಗಳ ಕಟ್ಟಡದಲ್ಲಿರುವ ಅವರ ಸುಸಜ್ಜಿತ ಕೊಠಡಿಗೆ ಹೋದೆ. ಅವರೇ ಎದ್ದು ಬಂದು ಹಸ್ತಲಾಘವವನಿತ್ತು ಗೌರವದಿಂದ ಕರೆದು ಕೂರಿಸಿಕೊಂಡರು. ಸಂಘದ ಬಗೆಗೆ, ಇಲಾಖೆಯಿಂದ ಆಗಬೇಕಾಗಿರುವ ಸಹಾಯ, ಸಹಕಾರಗಳ ಬಗೆಗೆ ಚರ್ಚಿಸಿದೆವು. ಅವರ ಮಾತಿನಲ್ಲಿ, ನಡತೆಯಲ್ಲಿ ಸ್ನೇಹಪರತೆ ಇತ್ತು. ಐ.ಎ.ಎಸ್. ಅಧಿಕಾರಗಳಲ್ಲಿ ಸಹಜವಾಗಿ ಕಾಣುವ "ಅಹಂ" ಇರಲಿಲ್ಲ. ನನಗೆ ಆಶ್ಚರ್ಯ, ಸರ್ಕಾರಿ ವಕೀಲನಾಗಿ, ಒರಟುತನದಿಂದ ನಾನು ನಡೆದುಕೊಂಡ ಜಿಲ್ಲಾಧಿಕಾರಿ ಇವರೇನಾ? ಎಂದು. ಹೌದು ಅದೇ ವ್ಯಕ್ತಿ. ನನ್ನ ಉದ್ಧಟತನದ ಘಟನೆ ನಡೆದ ಮೇಲೆ ನಾನು ಸರ್ಕಾರಿ ವಕೀಲಗಿರಿಗೆ ರಾಜೀನಾಮೆ ಕೊಟ್ಟೆ. ಆಮೇಲೆ ಅವರು ನನ್ನ ಬಗೆಗೆ ಎಲ್ಲವನ್ನು ತಿಳಿದುಕೊಂಡು, ಅರ್ಥಮಾಡಿಕೊಂಡಿದ್ದರು. ಮಾತು ಮುಗಿಸಿ ಎದ್ದು ಬರುವಾಗ ನಾನೇ ಹೇಳಿದೆ "ನನಗೆ ಜೈಲಿಗೆ ಹೋಗಲು ಅವಕಾಶಮಾಡಿಕೊಡದೆ ಅನ್ಯಾಯ ಮಾಡಿದ್ದೀರಿ" ಎಂದು . ಅವರಿಗೆ ಮೊದಲು ಅರ್ಥವಾಗದಿದ್ದರೂ, ತುಸು ಯೋಚಿಸಿ ನಕ್ಕು ನುಡಿದರು. "ಹೋ, ಅದೇ, ಆ ಕೆಟ್ಟ ದಿನಗಳ ಬಗ್ಗೆ ಚರ್ಚೆ ಈಗೇಕೆ" ಎಂದರು.

ನಾನಾಗಲೇ ಹೇಳಿದೆ, ನನ್ನನ್ನು ಮೀಸಾದಲ್ಲಿ ಜೈಲಿಗೆ ಹಾಕಬೇಕು ಎಂದು ಹುನ್ನಾರ ನಡೆಯಿತೆಂದು, ಅದು ಸಫಲವಾಗದೆ ಹೋದದ್ದು ಜಿಲ್ಲಾಧಿಕಾರಿ ಶ್ರೀ ಮೀನಾಕ್ಷಿ ಸುಂದರಂ ಅವರಿಂದ. "ಮೀಸಾದಲ್ಲಿ ಬಂಧಿಸಿ ಜೈಲಿಗೆ ಕಳುಹಿಸುವಂಥ, ದೇಶದ್ರೋಹದ ಕೆಲಸವನ್ನು ಅವರೇನೂ ಮಾಡಿಲ್ಲ" ಎಂದು ಹೇಳಿ "ಮೀಸಾ ವಾರೆಂಟ್" ರುಜು ಮಾಡಲು ಇವರು ನಿರಾಕರಿಸಿ ರಾಷ್ಟ್ರದ ಕೆಲಸಕ್ಕೆ ನಾನು ಜೈಲಿಗೆ ಹೋಗಲು ಸಿಕ್ಕಿದ್ದ ಸದಾವಕಾಶವನ್ನು ತಪ್ಪಿಸಿ ನನಗೆ ಅನ್ಯಾಯ ಮಾಡಿದರೆಂದು ನನಗೆ ಆಮೇಲೆ ತಿಳಿಯಿತು. ಹೀಗೆ ಮೊದಲಾದ ನಮ್ಮ ಸಂಬಂಧ ಸ್ನೇಹವಾಗಿ, ಇಂದಿಗೂ ನಾನು ದೆಹಲಿಗೆ ಹೋದರೂ ಅವರನ್ನು ನೋಡದೆ ಬರಲಾಗದಷ್ಟು ನಿಕಟವಾಗಿದೆ. ನಾನು ಅಧಿಕಾರಕ್ಕೆ ಬಂದಾಗ ದೂರವಾಣಿಯ ಮುಖಾಂತರ ಅವರು ತಿಳಿಸಿದರು. "ಅಧಿಕಾರ ನಿಮ್ಮಲ್ಲಿ ಬದಲಾವಣೆ ತಂದಿಲ್ಲವೆಂದು ಕೇಳಿ ತುಂಬಾ ಸಂತೋಷವಾಯಿತು" ಎಂದು. ರೈತರ ಬಗ್ಗೆ ಅವರಿಗೆ ಇರುವ ಪ್ರಶ್ನಾತೀತ ಕಳಕಳಿ ಮತ್ತು ಸರಳತೆ ಅವರಲ್ಲಿ ನನಗೆ ಗೌರವ ತಂದಿದೆ. ಇಷ್ಟೆಲ್ಲಾ ಏಕೆ ಹೇಳಿದೆನೆಂದರೆ, ಈ ಹಿನ್ನೆಲೆಯಲ್ಲಿ ಇಂತಹ ಇಲಾಖೆಯ ಮುಖ್ಯಸ್ಥರೊಡನೆ ನಾನು ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷನಾಗಿ ಕೆಲಸ ಮಾಡಬೇಕಾಯಿತೆಂದು ನಿಮಗೆ ಅರಿವು ಮಾಡಿಕೊಡುವ ಉದ್ದೇಶದಿಂದ.

ಸಂಘದ ಸದಸ್ಯತ್ವವನ್ನು ಹೆಚ್ಚಿಸಿದೆ. ಅದರ ಮೂಲಕ ಹಣ ಕೂಡಿಸಿಟ್ಟೆ. ಇಲಾಖೆಯ ಅಧಿಕಾರಿಗಳಿಂದಿಡಿದು ನೌಕರರವರೆಗೆ ಸಾಮರಸ್ಯ, ಬಾಂಧವ್ಯ ಕೂಡಿಸುವುದರಲ್ಲಿ ಯಶಸ್ವಿಯಾಗಿದ್ದೆ. ಕುಳಿತುಕೊಳ್ಳಲು ಕಚೇರಿ ಮಾಡಿದೆವು. ಕಚೇರಿ ನಡೆಸಲು ಸಿಬ್ಬಂದಿ ಕೂಡಾ ನೇಮಕವಾಗಿತ್ತು. ಇಷ್ಟೇ ನನ್ನ ಗುರಿಯಾಗಿರಲಿಲ್ಲ. ಈ ಸಂಘದ ಮೂಲಕ ಉದ್ಯಮದ ಎಲ್ಲಾ ಹಿತಾಸಕ್ತಿಗಳನ್ನು ಅದರಲ್ಲಿಯೂ ಬೆಳೆಗಾರರನ್ನು ಸಂಘಟಿಸಿ, ಅವರಿಗೆ ಸಹಜವಾಗಿ ಸಲ್ಲಬೇಕಾಗಿರುವ ಸವಲತ್ತುಗಳನ್ನು ಅಧಿಕಾರಯುತವಾಗಿ ಕೇಳುವ "ದನಿ" ಕೊಡಬೇಕಾಗಿತ್ತು. ಎಲ್ಲಾ ಜಿಲ್ಲೆಗಳಲ್ಲಿಯೂ ರೇಷ್ಮೆ ಬೆಳೆಗಾರರ ಸಮ್ಮೇಳನವನ್ನು ಏರ್ಪಡಿಸಿ, ಅಲ್ಲಿಯೂ ರೈತರನ್ನು ಸಂಘಟಿಸುವ ತೀರ್ಮಾನ ಮಾಡಿದೆವು.

೭

ಬಳ್ಳಾರಿ ಜಿಲ್ಲೆಯ ಕೊಟ್ಟೂರಿನ ಶ್ರೀ ಬಿ. ಎಸ್. ವೀರಭದ್ರಪ್ಪನವರು ಆಗ ಸಂಘದ ಸಕ್ರಿಯ ಆಡಳಿತ ಸಮಿತಿಯ ಸದಸ್ಯರಾಗಿದ್ದರು. ಆಗ ಬೆಳೆದ ನಮ್ಮ ಬಾಂಧವ್ಯ ಮುಂದೆ ಅವರು ಶಾಸಕರಾಗಿ ನನ್ನ ಜೊತೆ ವಿಧಾನಸಭೆಗೆ ಬಂದಾಗ ಒಂದೇ ರಾಜಕೀಯ ಪಕ್ಷದಲ್ಲಿದ್ದ ನಾವು ಅತಿ ನಿಕಟವಾಗಿ ಕೆಲಸ ಮಾಡುವಂತಾಯಿತು. ದಿನಾಂಕ ೧೦.೧೦.೧೯೮೨ರಂದು ಕೊಟ್ಟೂರಿನಲ್ಲಿ ಅವರು ಏರ್ಪಡಿಸಿದ, ಬಳ್ಳಾರಿ ಜಿಲ್ಲೆಯ ರೈತರ ಸಮ್ಮೇಳನ, ಹೊಸ ಮೈಸೂರು ಪ್ರದೇಶದ ರೇಷ್ಮೆ ಬೆಳೆಗಾರರಿಗೆ ಅವರ ಬೇಡಿಕೆಗಳನ್ನು, ಸಮಸ್ಯೆಗಳನ್ನು ಸಂಬಂಧಪಟ್ಟವರ ಮುಂದಿಡಲು ಸದವಕಾಶ ಕಲ್ಪಿಸಿತು. ಸಾವಿರಾರು ರೈತರು ಭಾಗವಹಿಸಿದ್ದ ಸಭೆ ಬಹಳ ಅದ್ದೂರಿಯಾಗಿ ನಡೆಯಿತು. "ಈ ಸಭೆಯನ್ನು ಸಂಘಟಿಸಿ ಏರ್ಪಾಡು ಮಾಡಿದುದರಿಂದ ಮುಂದೆ ನಾನು ವಿಧಾನಸಭೆಗೆ ಆರಿಸಿ ಹೋಗಲು ಸಾಧ್ಯವಾಯಿತು" ಎಂದು ಅನೇಕ ಸಾರಿ ಶ್ರೀ ವೀರಭದ್ರಪ್ಪನವರು ನನಗೆ ತಿಳಿಸಿದರು. ಇಡೀ ದಿನ ನಡೆದ ಸಮಾರಂಭದಲ್ಲಿ ಅನೇಕ ಉಪಯುಕ್ತ ವಿಷಯಗಳ ಚರ್ಚೆ ಆಯಿತು. ಆಗ ಹಿಂದೆ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ ಬಾಲಸುಬ್ರಹ್ಮಣ್ಯಂ ಅವರು ಗುಲ್ಬರ್ಗಾ ವಿಭಾಗಾಧಿಕಾರಿಗಳಾಗಿದ್ದರು. ರೇಷ್ಮೆ ಇಲಾಖೆಯು ದೊಡ್ಡದಾಗಿ ಬೆಳೆಯಲು ಕಾರಣಕರ್ತರಾದ ಇವರು ಹಳ್ಳಿಗಳಿಗೆ ಹೋದರೆ, ತಮ್ಮ ರೆವಿನ್ಯೂ ಇಲಾಖೆಯ ಕೆಲಸ ಮರೆತು, ರೇಷ್ಮೆ ಇಲಾಖೆಯ ಬಗೆಗೆ ವಿಚಾರಿಸುತ್ತಾರೆಂದು ಅಂದು ವಿಚಾರ ಸಂಕಿರಣದಲ್ಲಿ ಭಾಗವಹಿಸಿದ್ದ ಬೆಳೆಗಾರರೊಬ್ಬರು ತಿಳಿಸಿದರು.

ಈ ಇಲಾಖೆಯ ಪ್ರಗತಿಗೆ, ವಿಶ್ವಬ್ಯಾಂಕಿನ ನೆರವು ಪಡೆದು ಯೋಜನೆಯನ್ನು ನಿರೂಪಿಸಿ, ಕಾರ್ಯಗತ ಮಾಡುವಲ್ಲಿ, ಕರ್ನಾಟಕ ಸಿಲ್ಕ್ ಮಾರ್ಕೆಟಿಂಗ್ ಬೋರ್ಡ್ ಮತ್ತು ಸಿಲ್ಕ್ ಎಕ್ಸ್‌ಚೇಂಜ್‌ಗಳನ್ನು ಸ್ಥಾಪಿಸಿ ರೇಷ್ಮೆ ದಾರದ ವ್ಯಾಪಾರಿಗಳ ಅವ್ಯವಹಾರವನ್ನು ನಿಯಂತ್ರಿಸುವಲ್ಲಿ ಯಶಸ್ವಿಯಾಗಿದ್ದ ಶ್ರೀ. ವಿ. ಬಾಲಸುಬ್ರಹ್ಮಣ್ಯಂ ಅವರು ಅಂದು ಗುಂಡೂರಾಯರ ಮಂತ್ರಿಮಂಡಲದಲ್ಲಿ ರೇಷ್ಮೆ ಖಾತೆ ಸಚಿವರಾಗಿದ್ದ ಶ್ರೀಮತಿ ರೇಣುಕಾ ರಾಜೇಂದ್ರನ್ ಅವರ ಆಡಳಿತ ವೈಖರಿಯನ್ನು ವಿರೋಧಿಸಿ ಸಡ್ಡು ಹೊಡೆದು ನಿಂತು ಸರಕಾರದ

ಅವಕೃಪೆಗೆ ಒಳಗಾಗಿ, ಗುಲ್ಬರ್ಗಾಕ್ಕೆ ವರ್ಗವಾದರು. ಕೊಟ್ಟೂರಿನಲ್ಲಿ ಅವರು ನನಗೆ ಹೇಳಿದರು "ಅದಕ್ಕಿಂತ ಮುಂದಕ್ಕೆ ನನ್ನನ್ನು ವರ್ಗ ಮಾಡಲು ಅವರಿಗೆ ಸಾಧ್ಯವಿಲ್ಲ" ಎಂದು. (ದೆ ಕೆನಾಟ್ ಪೋಸ್ಟ್ ಮಿ ಬಿಹ್ಯಾಂಡ್ ದಟ್). ಅಂದಿನ ಸಭೆಯಲ್ಲಿ ಅವರು ಮಾತನಾಡಿ ರೇಷ್ಮೆ ಬೆಳೆಗಾರರ ಸಂಘಟನೆಯನ್ನು ರಾಷ್ಟ್ರ ವ್ಯಾಪ್ತಿ ಮಾಡುವ ಹೊಣೆಗಾರಿಕೆಯನ್ನು ಈ ಸಂಘ ಹೊರಬೇಕೆಂದು ಅದಕ್ಕಾಗಿ ರಾಜ್ಯಮಟ್ಟದ ಹಾಗೂ ರಾಷ್ಟ್ರಮಟ್ಟದಲ್ಲಿ ಬೆಳೆಗಾರರ ಸಮ್ಮೇಳನಗಳನ್ನು ನಡೆಸಬೇಕೆಂದು ಅಭಿಪ್ರಾಯಪಟ್ಟರು. ರೇಷ್ಮೆ ಇಲಾಖೆಯಲ್ಲಿ ಕೆಲಸ ಮಾಡಿದ ಐ.ಎ.ಎಸ್. ಅಧಿಕಾರಿಗಳಲ್ಲಿ ಪ್ರಮುಖವಾಗಿ ನೆನಪಿನಲ್ಲಿ ಇರಬೇಕಾದ ಹೆಸರುಗಳು ಮೂರು- ಶ್ರೀ. ವಿ. ಬಾಲಸುಬ್ರಹ್ಮಣ್ಯಂ, ಶ್ರೀ ಎಸ್. ಎಸ್, ಮೀನಾಕ್ಷಿ ಸುಂದರಂ ಹಾಗೂ ಶ್ರೀ ಬಿ.ಕೆ. ದಾಸ್. ಶ್ರೀ ಬಾಲಸುಬ್ರಹ್ಮಣ್ಯಂ ಬಗ್ಗೆ ನನ್ನದು ಮಿಶ್ರ ಪ್ರತಿಕ್ರಿಯೆ. ಬೆಳೆಗಾರರ ಬಗ್ಗೆ ಅವರಿಗಿದ್ದ ಪ್ರಶ್ನಾತೀತ ಕಳಕಳಿ, ಅವರಿಗಾಗಿ ಏನಾದರೂ ಮಾಡಬೇಕೆಂಬ ಉತ್ಕಟ ಆಕಾಂಕ್ಷೆ, ಆಡಳಿತದಲ್ಲಿನ ನಿಷ್ಠುರತೆ,ಇಲಾಖೆಯನ್ನು ಪ್ರಗತಿ ಪಥದಲ್ಲಿ ಒಯ್ಯಲು ಅವರು ಪಟ್ಟಶ್ರಮ, ಇವನ್ನು ಮೆಚ್ಚಿದವನು ನಾನು. ಈ ಉದ್ಯಮದ ವ್ಯಾಪಾರದಲ್ಲಿದ್ದ ಮಧ್ಯವರ್ತಿಗಳನ್ನು ಮಟ್ಟ ಹಾಕುವುದರಲ್ಲಿ ಇವರ ಪಾತ್ರ ಹಿರಿದಾದುದು. ಆದರೆ ಇಲಾಖೆಯ ಒಳಗು- ಹೊರಗುಗಳನ್ನು, ತಾಂತ್ರಿಕ ವಿಷಯಗಳನ್ನು ಆಗ ಇವರು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಕೆಲವು ಅನರ್ಥಗಳಿಗೆ ಕಾರಣರಾದರೆಂದು ನನ್ನ ಅಭಿಪ್ರಾಯ. ಇವರ "ನಾನು ಹೇಳಿದ್ದು ಸರಿ" ಎಂಬ ಪ್ರವೃತ್ತಿ ಇಲಾಖೆಯ ಅನುಭವಿ ಹಾಗೂ ನುರಿತ ಹಿರಿಯ ಅಧಿಕಾರಿಗಳಿಗೆ ನುಂಗಲಾರದ ತುತ್ತಾಯಿತು. ತಾಂತ್ರಿಕ ವಿಷಯದಲ್ಲಿ ಇವರಿಗಿದ್ದ ತಾಂತ್ರಿಕ ಸಲಹೆಗಾರರು ಇವರನ್ನು ತಾಂತ್ರಿಕವಾಗಿ ಸರಿಯಾಗಿ ಮಾರ್ಗದರ್ಶನ ಮಾಡದೆ ಇದ್ದುದೇ ಕಾರಣ ಇರಬಹುದು. ಶ್ರೀ ಮಹದೇವಪ್ಪ ಮತ್ತು ಇತರರು ವಿಧಿಯಿಲ್ಲದೆ ಹೊಂದಿಕೊಂಡರು. ಆದರೆ ದಿವಂಗತ ಶ್ರೀ ಷಣ್ಮುಗಪ್ಪ ಮತ್ತು ಶ್ರೀ ಕೆ. ವೀರಯ್ಯನಂತಹವರು ಅವರ ಅವಕೃಪೆಗೆ ಒಳಗಾಗಿ ಬೆಂಗಳೂರಿನಿಂದ ಹೊರಗೆ ಹೋಗುವ ವರ್ಗದ ಶಿಕ್ಷೆ ಅನುಭವಿಸಿದರು. ಕೆಲವು ಸಾರಿ ಪ್ರಾಮಾಣಿಕ ಪ್ರಯತ್ನಗಳು ಕೆಟ್ಟ ಫಲಿತಾಂಶ ಕೊಡುತ್ತವೆ ಎನ್ನುವುದಕ್ಕೆ ಇದು ನಿದರ್ಶನ. ಆ ದಿನದ ಸಭೆಯಲ್ಲಿ ಭಾಗವಹಿಸಿ ಮಾತನಾಡಿದವರಲ್ಲಿ ಅಂದಿನ ಕರ್ನಾಟಕ ಸಿಲ್ಕ್ ಮಾರ್ಕೆಟಿಂಗ್ ಬೋರ್ಡಿನ ಆಡಳಿತ ನಿರ್ವಾಹಕ ನಿರ್ದೇಶಕರಾಗಿದ್ದ ಶ್ರೀ ಕೆ. ಜಯರಾಜ್. ಮುಂದೆ ಅವರು ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿ ಆದರು. ನಾನು ಜಿಲ್ಲಾ ಉಸ್ತುವಾರಿ ಸಚಿವ. ಆಗ ನನಗೆ ತಿಳಿಯಿತು ಅವ ಕಪ್ಪು ಬಣ್ಣದ ಶರೀರದಲ್ಲಿ ಅಡಗಿರುವ ಸ್ವಚ್ಛ ಹೃದಯ. ಇಂದಿಗೂ ನಾವು ಆತ್ಮೀಯರು. ರೇಷ್ಮೆ ಎಲ್ಲದರ ಜೊತೆಗೆ, ನನಗೆ ಅಪಾರ ಜನ ಸ್ನೇಹಿತರನ್ನು ಪಡೆಯಲು ಅವಕಾಶ ಮಾಡಿತು. ಕಾನಾಮಡಲು ಉಪಾಧ್ಯಾಯರಾದ ಶ್ರೀ ಎ. ಸಿದ್ಧಪ್ಪನವರ ಪ್ರಾರ್ಥನೆಯೊಡನೆ ಮೊದಲಾದ ಸಭೆ, ಶ್ರೀ ನೀಲಕಂಠಪ್ಪನವರ ವಂದನಾರ್ಪಣೆಯವರೆಗೆ ಗಂಭೀರವಾಗಿ ನಡೆದು, ಅನೇಕ ಉಪಯುಕ್ತ ಚರ್ಚೆಯ ಕಮ್ಮಟವಾಗಿತ್ತು. ಅಂದು ಭಾಗವಹಿಸಿದ ಇತರರು ಎಂದರೆ ಆಗ ರೇಷ್ಮೆ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ ಮೀನಾಕ್ಷಿ ಸುಂದರಂ, ಆಗ ಬಳ್ಳಾರಿ ಜಿಲ್ಲೆಯ ಜಿಲ್ಲಾಧಿಕಾರಿಯಾಗಿದ್ದ, ಮುಂದೆ ನಮ್ಮ ಸರ್ಕಾರ ಬಂದಾಗ

ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರ ಆಪ್ತ ಕಾರ್ಯದರ್ಶಿಯಾಗಿದ್ದ ಪ್ರಾಮಾಣಿಕ ಅಧಿಕಾರಿ ಶ್ರೀ ಎನ್. ಗೋಕುಲ್ ರಾಮ್, ಆಗ ಬಳ್ಳಾರಿಯ ವಿಶೇಷ ಜಿಲ್ಲಾಧಿಕಾರಿಯಾಗಿದ್ದು, ಆಮೇಲೆ ತುಮಕೂರಿನಲ್ಲಿ ೧೯೮೫-೮೬ರಲ್ಲಿ ವಿಶೇಷ ಜಿಲ್ಲಾಧಿಕಾರಿಯಾಗಿದ್ದ ಶ್ರೀ ಹಾಲಪ್ಪ ಮತ್ತು ಇಲಾಖೆಯ ಅನೇಕ ಅಧಿಕಾರಿಗಳು ಮತ್ತು ನಮ್ಮ ಸಂಘದ ಸದಸ್ಯರು. ಆಗ ಆ ಊರಿನ ಮಂತ್ರಿಗಳಾಗಿದ್ದ ಶ್ರೀ ಸದ್ಯೋಜಾತಪ್ಪನವರು ಸಭೆಗೆ ಬರಲಿಲ್ಲ. ಅವರ ಮಕ್ಕಳು ನಮಗೆ ಅಲ್ಲಿರುವ ಪ್ರವಾಸಿ ಮಂದಿರದಲ್ಲಿ ಉಳಿದುಕೊಳ್ಳಲು ಅವಕಾಶ ಒದಗಿಸಲಿಲ್ಲ.

ಮಲೆನಾಡಿನ ಜಿಲ್ಲೆಗಳಾದ ಶಿವಮೊಗ್ಗ, ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ರೈತರು ತುಂಬಾ ಉತ್ಸಾಹದಿಂದ ರೇಷ್ಮೆ ಬೆಳೆಗೆ ತೊಡಗಿದ್ದರು. ಅದರಲ್ಲಿಯೂ ಬೈವೊಲ್ಟಿನ್ ಗೂಡು ಬೆಳೆಯುತ್ತಿದ್ದರು. ಈ ಉದ್ಯಮದ ಸಮಸ್ಯೆಗಳು ವೈವಿಧ್ಯಮಯವಾದುವು. ಒಂದೊಂದು ಪ್ರದೇಶದ್ದೇ ಒಂದೊಂದು ಸಮಸ್ಯೆ. ಮಲೆನಾಡಿನ ಬೆಳೆಗಾರರ ಸ್ನೇಹ ಬೆಳೆಸಿ, ಶಿವಮೊಗ್ಗ ಜಿಲ್ಲೆಯಲ್ಲಿ ೧೯೮೨ನೇ ಜುಲೈ ೧೦, ೧೧ ಮತ್ತು ೧೨ನೇ ತಾರೀಖು ಮೂರು ದಿನ ಸಂಘದ ಕಾರ್ಯದರ್ಶಿ ಶ್ರೀ ದೇವೇಗೌಡರು ಮತ್ತು ಇತರ ಸದಸ್ಯರೊಡನೆ ವ್ಯಾಪಕವಾಗಿ ಪ್ರವಾಸ ಮಾಡಿದೆ. ಇಲಾಖೆಯ ಅಧಿಕಾರಿಗಳು ಮತ್ತು ನೌಕರರು ಪೂರ್ಣ ಸಹಕಾರವಿತ್ತರು. ಹೊಸ ನಗರದಲ್ಲಿ ಎಂ.ಪಿ. ಸತ್ಯಮೂರ್ತಿ, ಶಿವಮೊಗ್ಗದಲ್ಲಿ ಶ್ರೀ ಗಂಗಾಧರ್, ಸಾಗರದಲ್ಲಿ ಶ್ರೀ ಹೆಗ್ಗೋಡು ಸೂರ್ಯನಾರಾಯಣರಾವ್, ಚನ್ನಗಿರಿಯಲ್ಲಿ ನಮ್ಮ ಶೇಖರಪ್ಪ, ಕೊಡ್ಲಿಗೆರೆಯ ಕವರ್‌ಸರ್‌ಬೇಗ್, ಭದ್ರಾವತಿಯಲ್ಲಿ ಶ್ರೀ ಗುರುಪಾದಸ್ವಾಮಿ, ತೀರ್ಥಹಳ್ಳಿಯಲ್ಲಿ ಶ್ರೀ ರಾಘವರಾವ್, ಗಂಗಟಕಟ್ಟೆಯ ನರಸಪ್ಪ ಪಟೇಲರು, ಹೊನ್ನಹಳ್ಳಿಯಲ್ಲಿ ಎಂಕಟಪ್ಪ, ನ್ಯಾಮತಿಯ ಶ್ರೀ ಗೊಸ್ವಾಮಪ್ಪ, ಬೆಳಗುಟ್ಟದ ಶ್ರೀ ತೀರ್ಥಪ್ಪ, ಕಡಕಳ್ಳಿ ಶ್ರೀ ಶಿವಧರ್ಮಪ್ಪ ಮತ್ತು ಇತರರು ನಮ್ಮೊಡನೆ ದೀರ್ಘವಾಗಿ ಚರ್ಚಿಸಿ ಅಲ್ಲಿನ ಬೆಳೆಗಾರರ, ಸಮಸ್ಯೆಗಳ ಅರಿವು ಮಾಡಿಕೊಟ್ಟರು. ರಾಮನಗರದ ಮಾರುಕಟ್ಟೆಯಲ್ಲಿ ನಡೆಯುವ ಅವ್ಯವಹಾರಗಳು, ನೂಲು ಬಿಚ್ಚುವ ವ್ಯವಸ್ಥೆಯಿಲ್ಲದೆ ಸ್ಥಳೀಯವಾಗಿ ಬೆಳೆದ ಗೂಡಿಗೆ ಮಾರುಕಟ್ಟೆ ಇಲ್ಲದಿರುವುದು, ಹೂಜಿ ನೊಣಗಳ ಹಾವಳಿ ತಡೆಯಲು ಅನುಸರಿಸಬೇಕಾದ ಕ್ರಮಗಳು, ರೈತರಿಗೆ ಮನೆ ಕಟ್ಟಿಕೊಳ್ಳಲು ಸಹಾಯ, ಹೀಗೆ ಹಲವಾರು ವಿಷಯಗಳನ್ನು ನಮ್ಮ ಗಮನಕ್ಕೆ ತಂದರು. ಈ ಜಿಲ್ಲೆಯ ಪ್ರಗತಿಪರ ಬೆಳೆಗಾರರೊಬ್ಬರು ರೇಷ್ಮೆ ಉದ್ಯಮ ಕೈಗಾರಿಕೆಯೇ? ಅಥವಾ ಕಲೆಯೇ? ಎಂದು ಕೇಳಿದಾಗ "ಹಳೆಯ ಮೈಸೂರಿನ ಕೆಲವು ಜಿಲ್ಲೆಗಳಲ್ಲಿ ಅದು ಜೀವನದ ಅವಿಭಾಜ್ಯ ಅಂಗ" ಎಂದೇ ತಿಳಿಸಿದೆ.

ಶಿವಮೊಗ್ಗದಲ್ಲಿ ಲಕ್ಷಾಂತರ ರೂಪಾಯಿ ಖರ್ಚುಮಾಡಿ ಕಟ್ಟಿರುವ ಮಾರುಕಟ್ಟೆ ಕಟ್ಟಡ ಯಾರಿಗೂ ಬೇಕಾಗದ ತಬ್ಬಲಿಯಂತೆ ನಿಂತಿತ್ತು. ಕಾರಣ ಅಲ್ಲಿ ಗೂಡು ಬೆಳೆಯುವುದೇ ಕಡಿಮೆ. ಕೊಂಡುಕೊಳ್ಳುವವರಿಲ್ಲದೆ, ಬೆಳೆದ ಗೂಡನ್ನು ರೈತರು ರಾಮನಗರಕ್ಕೆ ತೆಗೆದುಕೊಂಡು ಹೋಗುತ್ತಾರೆ. ವಿಶ್ವಬ್ಯಾಂಕಿನ ನೆರವಿನಿಂದ ಕಟ್ಟಿದ ಅನೇಕ ಕಟ್ಟಡಗಳ ಗತಿ ಇದು. ಬೀದರಿನ ರೇಷ್ಮೆ ಕೋಠಿ ಕಟ್ಟಡ ಬಳ್ಳಾರಿಯ ಮಾರುಕಟ್ಟೆ ಕಟ್ಟಡಗಳ ಪಾಡೂ ಇದೇ ಆಗಿತ್ತು. ಬಳ್ಳಾರಿಯ ನನ್ನ ಕೆಲವು ಗೆಳೆಯರು ಶ್ರೀ ಎಂ.ಪಿ. ಪ್ರಕಾಶರವರ ನೇತೃತ್ವದಲ್ಲಿ ಬಳ್ಳಾರಿಯ

ಕಟ್ಟಡ ಖಾಲಿ ಬಿದ್ದಿದೆ ಅದನ್ನು ನಮಗೆ ಕಾಲೇಜು ನಡೆಸಲು ಬಿಟ್ಟುಕೊಡಿ ಎಂದು ನನ್ನಲ್ಲಿ ಬಂದಿದ್ದರು. ಅಲ್ಲಿಯ ರೈತರು ನನಗೆ ಹೇಳಿದರು. ಮಾರುಕಟ್ಟೆ ಕಟ್ಟಡಗಳನ್ನು ಕಟ್ಟುವುದರಿಂದ ಸಮಸ್ಯೆಗಳು ಬಗೆಹರಿಯುವುದಿಲ್ಲ ಎಂದು. ರೇಷ್ಮೆ ಹುಳುಗಳಿಗೆ ಬರುವ ರೋಗ ತಡೆಯುವುದರಲ್ಲಿ ಸಂಶೋಧಕರು ಸೋತಿದ್ದಾರೆ. ಜೋಗದ ಜಲಪಾತವಿರುವ, ರಾಷ್ಟ್ರಕವಿ ಕುವೆಂಪು ಅವರಿಗೆ ಜನ್ಮ ಕೊಟ್ಟ ಈ ಜಿಲ್ಲೆ ಸ್ವಾಭಾವಿಕವಾಗಿ ಅರ್ಧ ಬಯಲು ಸೀಮೆ, ಉಳಿದದ್ದು ಮಲೆನಾಡು. ಮಲೆನಾಡಿನಲ್ಲಿ ಎಂಟು ತಿಂಗಳು ಮಳೆ ಬೀಳುತ್ತದೆ. ಮಾರ್ಚಿ ತಿಂಗಳು ಬಿಟ್ಟರೆ ಉಳಿದ ಎಲ್ಲಾ ತಿಂಗಳು ಮಂಜು ಬೀಳುತ್ತಿರುತ್ತದೆ. ನಮ್ಮಲ್ಲಿ ಎಲ್ಲಾ ಸ್ಥಳಗಳಿಗೆ ಮತ್ತು ಕಾಲಮಾನಕ್ಕೆ (ಪಾರ್ ಆಲ್ ರೀಜನ್ ಅಂಡ್ ಸೀಸನ್) ಹೊಂದುವ ತಳಿ ಇಲ್ಲದ್ದರಿಂದ ಮಲೆನಾಡಿನಲ್ಲಿ ರೇಷ್ಮೆ ಬೆಳೆ ಕಷ್ಟ ಎನ್ನಿಸಿತ್ತು. ಬಯಲುಸೀಮೆಯ ಚನ್ನಗಿರಿ, ಹೊನ್ನಾಳಿ, ಭದ್ರಾವತಿ ತಾಲ್ಲೂಕುಗಳಲ್ಲಿ ರೇಷ್ಮೆ ಬೆಳೆಗೆ ಉತ್ತಮ ಅವಕಾಶವಿದೆ ಎಂದು ಅಭಿಪ್ರಾಯಪಟ್ಟು ಮೂರು ದಿವಸಗಳ ಪ್ರವಾಸ ಮಾಡಿ, ಮಲೆನಾಡಿನ ಬೆಳೆಗಾರರ ಸಮಸ್ಯೆಗಳನ್ನು ತಲೆಯಲ್ಲಿ ತುಂಬಿಕೊಂಡು ಹಿಂದಿರುಗಿದೆ.

ಬಂದವನೇ ಇಲಾಖೆಯ ಅಧಿಕಾರಿಗಳೊಡನೆ ಮತ್ತು ಪರಿಣತರೊಡನೆ ಈ ಸಮಸ್ಯೆಗಳ ಬಗೆಗೆ ಚರ್ಚಿಸಿದೆ. "ಮಲೆನಾಡಿನ ರೇಷ್ಮೆ ಬೆಳೆಗಾರರ ಸಮಸ್ಯೆಗಳ ರೇಷ್ಮೆ ಕೃಷಿ ಕಾರ್ಯಗಾರ" ವನ್ನು ನಡೆಸಬೇಕೆಂದು ತೀರ್ಮಾನಿಸಿದೆವು. ನನ್ನ ಚುನಾವಣಾ ಕ್ಷೇತ್ರಕ್ಕೆ ಸೇರಿದ ಹೊನ್ನುಡಿಕೆ ಗ್ರಾಮದ ಅತಿ ಮೃದು ಸ್ವಭಾವದ ಶ್ರೀ ಎಚ್. ರಾಜು ಆಗ ಶಿವಮೊಗ್ಗೆಯ ಉಪನಿರ್ದೇಶಕರು. ಹೊಸನಗರದಲ್ಲಿ ರೇಷ್ಮೆ ಬೆಳೆಗಾರರ ಸಂಘವನ್ನು ಸಂಘಟಿಸಿ, ಇದರ ಮೂಲಕ ಕಾರ್ಯಾಗಾರವನ್ನು ಮಾಡಲು ಏರ್ಪಾಡಾಯಿತು. ಸಂಘದ ಕಾರ್ಯದರ್ಶಿ ಶ್ರೀ ಎಂ.ವಿ. ಅನಂತರಾಮು, ಅಧ್ಯಕ್ಷರಾದ ಶ್ರೀ ಸತ್ಯಮೂರ್ತಿ ಹಾಗೂ ಅಲ್ಲಿನ ಮುಂದಾಳಾಗಿದ್ದು ಆಮೇಲೆ ಶಾಸಕರಾಗಿ, ನನ್ನ ಗೆಳೆಯರಾದ ಶ್ರೀ ಬಿ. ಸ್ವಾಮಿರಾವ್ ಇವರ ಶ್ರಮದ ಫಲವಾಗಿ ೨೫.೯.೧೯೮೨ರಂದು ಹೊಸನಗರದ ಪುರಸಭೆ ಆವರಣದಲ್ಲಿ ಇಡೀ ದಿನ ನಡೆದ "ರೇಷ್ಮೆ ಕೃಷಿ ಕಾರ್ಯಗಾರ" ಬೆಳೆಗಾರನ ಸಮಸ್ಯೆ, ಅದಕ್ಕೆ ತಕ್ಕ ಪರಿಹಾರವನ್ನು ಚರ್ಚಿಸುವಲ್ಲಿ ಸಫಲವಾಯಿತು. ತಲಗಟ್ಟಪುರದ ರೇಷ್ಮೆ ಕೃಷಿ ಅಭಿವೃದ್ಧಿ ಸಂಸ್ಥೆಯ ನಿರ್ದೇಶಕರಾಗಿದ್ದ ಶ್ರೀಮತಿ (ಡಾ) ಕಸ್ತೂರಿ ಬಾಯಿಯವರು ಕಾರ್ಯಾಗಾರವನ್ನು ಉದ್ಘಾಟಿಸಿದರು. ನನ್ನ ಅಧ್ಯಕ್ಷತೆಯಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ ಇಲಾಖೆಯ ಹಿರಿಯ ಅಧಿಕಾರಿಗಳಾಗಿದ್ದ ಶ್ರೀಯುತರುಗಳಾದ ಡಿ. ಮಹದೇವಪ್ಪ, ಇ. ಸುಭಾಷಚಂದ್ರ, ಸಯೀದ್ ರೆಹಮತುಲ್ಲಾ ಹಾಗೂ ಎಸ್. ಎಸ್. ಸದಾನಂದ ಅವರು ಭಾಗವಹಿಸಿ ಕಾರ್ಯಕ್ರಮವನ್ನು ಸಾರ್ಥಕಗೊಳಿಸಿದರು.

ಸೋಜಿಗದ ವಿಷಯವೆಂದರೆ ೧೯೮೨ರಲ್ಲಿ ಕೊಟ್ಟೂರಿನಲ್ಲಿ ರೇಷ್ಮೆ ಬೆಳೆಗಾರರ ಸಭೆ ಮಾಡಿದ ಶ್ರೀ ಬಿ. ಎಸ್. ವೀರಭದ್ರಪ್ಪನವರಂತೆಯೇ ೧೯೮೨ರಲ್ಲಿ ಹೊಸನಗರದಲ್ಲಿ ರೇಷ್ಮೆ ಬೆಳೆಗಾರರ ಸಭೆ ಮಾಡಿ ಶ್ರೀ ಬಿ. ಸ್ವಾಮಿರಾವ್ ಕೂಡಾ ೧೯೮೩ರಲ್ಲಿ ನಡೆದ ಸಾರ್ವಜನಿಕ ಚುನಾವಣೆಯಲ್ಲಿ ಗೆದ್ದು ಶಾಸಕರಾದರು.

ಮೈಸೂರು ಬಿತ್ತನೆ ವಲಯದ ಬೆಳೆಗಾರರ ಸಂಘಟನೆ ಆಗಬೇಕಿತ್ತು. ಇದಕ್ಕಾಗಿ ತಾರೀಖು ೨೮.೮.೧೯೮೦ರಂದು ಕುಣಿಗಲ್‌ನಲ್ಲಿ ಸಭೆ ಕರೆದು ಸಂಘಟನೆಗಾಗಿ ಒಂದು ಸಮಿತಿ ರಚಿಸಿದೆವು. ಬೆಳೆಗಾರರ ವಿಚಾರಗೋಷ್ಠಿ ಕರೆಯಲು ಪೂರ್ವಭಾವಿಯಾಗಿ ತೀರ್ಮಾನಿಸಲಾಯಿತು. ಮೈಸೂರು ರೇಷ್ಮೆ ಬಿತ್ತನೆ ವಲಯದ ಬೆಳೆಗಾರರ ಸಮಸ್ಯೆ ಮತ್ತು ಪರಿಹಾರ ಕುರಿತು ಕುಣಿಗಲ್‌ನಲ್ಲಿ ೨೪.೯.೧೯೮೧ ರಂದು ರೇಷ್ಮೆ ಬೆಳೆಗಾರರ ವಿಚಾರಗೋಷ್ಠಿಯನ್ನು ಏರ್ಪಾಡು ಮಾಡಿದೆವು. ಬೆಳಿಗ್ಗೆ ೯.೦೦ ಗಂಟೆಯಿಂದ ಸಂಜೆಯವರೆಗೆ ನಡೆದ ಈ ವಿಚಾರಗೋಷ್ಠಿಯಲ್ಲಿ ನಿರ್ದೇಶಕರಾದ ಶ್ರೀ ಎಸ್. ಎಸ್. ಮೀನಾಕ್ಷಿ ಸುಂದರಂ, ರೇಷ್ಮೆ ಕೃಷಿ ತಜ್ಞರು ಹಾಗೂ ರಾಷ್ಟ್ರೀಯ ರೇಷ್ಮೆ ಬಿತ್ತನೆ ಯೋಜನೆಯ ನಿರ್ದೇಶಕರಾಗಿದ್ದ ಡಾ. ನರಸಿಂಹಣ್ಣನವರು ಉಪಸ್ಥಿತರಿದ್ದರು, ಸುಮಾರು ೨೫. ೩೦ ಜನ ಬೆಳೆಗಾರರು ಮಾತನಾಡಿ ಗಮನಕ್ಕೆ ತಂದ ಸಮಸ್ಯೆಗಳಿಗೆ ಸೂಕ್ತ ಸಮಜಾಯಿಷಿ ಕೊಟ್ಟರು. ಆಗ ಕೇಂದ್ರ ರೇಷ್ಮೆ ಮಂಡಲಿಯ ಅಧ್ಯಕ್ಷರಾಗಿದ್ದ ಶ್ರೀ ಬಿ. ಬಸವಯ್ಯನವರು ಅಧ್ಯಕ್ಷತೆ ವಹಿಸಿ ಸಕ್ರಿಯವಾಗಿ ಭಾಗವಹಿಸಿದರು. ಈ ವಿಚಾರ ಗೋಷ್ಠಿಯು ಯಶಸ್ವಿಯಾಗಲು ಆಗಿನ ಅಧಿಕಾರಿಯಾಗಿದ್ದ ಶ್ರೀ ಡಿ. ಮುನಿವೆಂಕಟಪ್ಪ ಮತ್ತು ಅವರ ಸಹೋದ್ಯೋಗಿಗಳು ಸಾಕಷ್ಟು ಶ್ರಮಿಸಿದ್ದು ಕಾರಣವಾಗಿತ್ತು.

ಮತ್ತೂ ಸೋಜಿಗವೆಂದರೆ ಶ್ರೀ ಬಿ. ಎಸ್. ವೀರಭದ್ರಪ್ಪ ಮತ್ತು ಶ್ರೀ ಬಿ. ಸ್ವಾಮಿರಾವ್ ಅವರ ಸಾಲಿಗೆ ನಾನು ಸೇರಿದೆ. ಈ ಸಭೆಯನ್ನು ಕುಣಿಗಲ್‌ನಲ್ಲಿ ಸಂಘಟಿಸಿದ ನಾನು ೧೯೮೩ರಲ್ಲಿ ಶಾಸಕನಾದೆ. ಅಷ್ಟೇ ಅಲ್ಲ, ಅಧ್ಯಕ್ಷತೆ ವಹಿಸಿದ್ದ ಶ್ರೀ ಬಿ. ಬಸವಯ್ಯನವರು ೧೯೮೩ರಲ್ಲಿ ಶಾಸಕರಾದರು.

ಈ ಸಭೆ ಮುಂದೆ, ಮೈಸೂರು ರೇಷ್ಮೆ ಬಿತ್ತನೆ ತಳಿ ವಲಯದ ಸಮಗ್ರ ಬದಲಾವಣೆಗೆ ದಾರಿ ಮಾಡಿಕೊಟ್ಟಿತು ಎಂದು ಮಾತ್ರ ಹೇಳಬಲ್ಲೆ.

ಈ ಕಾರ್ಯಕ್ರಮ ಆದ ಮೇಲೆ ರಾಯಚೂರು, ಕೋಲಾರ, ಬೆಂಗಳೂರು ಮತ್ತು ಮಂಡ್ಯ ಜಿಲ್ಲೆಯಲ್ಲಿ ಸಭೆ ಮಾಡಿ ರೈತರನ್ನು ಸಂಘಟಿಸಬೇಕಾಗಿತ್ತು. ಅದಕ್ಕಾಗಿ ನಾನು ಮತ್ತು ನನ್ನ ಸ್ನೇಹಿತರು ಈ ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ೧೯೮೨-೮೩ರಲ್ಲಿ ಈ ಸಭೆ ನಡೆಸಲು ತೀರ್ಮಾನಿಸಿದೆವು. ಈ ಮೂರು ಜಿಲ್ಲೆಗಳ ಪ್ರವಾಸದಲ್ಲಿ ನಮ್ಮೊಡನಿದ್ದು ಸಹಕರಿಸಿದ ಇಲಾಖೆಯ ಅಧಿಕಾರಿ ಶ್ರೀ ವೆಂಕಟಾದ್ರಿಯವರು ನೆನಪಿಸಿಕೊಳ್ಳಲು ಅರ್ಹರು.

ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ನಮ್ಮ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದ ಶ್ರೀ ದಬ್ಬದ ಹಳ್ಳಿಯ ಚೇರ್ಮನ್ ಬಸವೇಗೌಡರ ಮಗ ಶ್ರೀ ಬಿ. ಜಯರಾಮ್, ಮೈಸೂರಿನಲ್ಲಿ ಆಗ ಜಂಟಿ ನಿರ್ದೇಶಕರಾಗಿದ್ದ ಶ್ರೀ ಹೆಚ್. ಎ. ನಾಗರಾಜರಾವ್ ಅವರು ತುಂಬಾ ಶ್ರದ್ಧೆಯಿಂದ ಮಂಡ್ಯ ಜಿಲ್ಲೆಯ ಬೆಳೆಗಾರರ ಸಭೆ ಮಾಡಲು ಏರ್ಪಾಟು ಮಾಡುತ್ತಿದ್ದರು. ಇಷ್ಟರಲ್ಲಿ ಜಿಲ್ಲಾ ಬೆಳೆಗಾರರ ಸಭೆ ನಡೆಸಲು ಕೇಂದ್ರ ಸಂಘದ ತೀರ್ಮಾನವಾಗಿದ್ದರಿಂದ ಮಳವಳ್ಳಿಯಲ್ಲಿ ಅಧಿಕಾರಿಯಾಗಿದ್ದ ಶ್ರೀ ಹರಣ್ ಅವರಿಗೆ ನಾನೇ ಒಂದು ಸಾವಿರ ರೂಪಾಯಿ ಚೆಕ್ಕು ಕೊಟ್ಟು ಕಳುಹಿಸಿಕೊಟ್ಟಿದ್ದೆ. ಸುಮಾರು ಹತ್ತು ಸಾವಿರ

ಬೆಳೆಗಾರರನ್ನು ಸೇರಿಸುವ ಆಸೆ ಅವರದಾಗಿತ್ತು. ತಾರೀಖು ೨೮.೧೧. ೧೯೮೨ರಂದು ನಡೆಯಬೇಕಾಗಿದ್ದ ಮಂಡ್ಯ ಜಿಲ್ಲೆಯ ಬೆಳೆಗಾರರ ಸಭೆಯನ್ನು ಮುಂದಕ್ಕೆ ಹಾಕಬೇಕಾಯಿತು. ಕಾರಣ ೧೯೮೩ರ ಸಾರ್ವಜನಿಕ ಚುನಾವಣೆಯ ಘೋಷಣೆ. ಪಾಪ, ಈ ಸಭೆ ನಡೆದಿದ್ದರೆ ನಮ್ಮ ದಬ್ಬಹಳ್ಳಿಯ ಬಿ. ಜಯರಾಮ್ ಕೂಡಾ ಶಾಸಕನಾಗುತ್ತಿದ್ದನೇನೋ, ಅದರ ಬದಲು ನಮ್ಮ ಶ್ರೀ ಎಸ್.ಡಿ. ಜಯರಾಮ್ ಶಾಸಕನಾದ.

ರಾಯಚೂರಿನಲ್ಲಿ ರೈತರ ಸಭೆ ಮಾಡಲು ನಿರ್ಧರಿಸಿ, ಲಿಂಗಸೂಗೂರಿನಲ್ಲಿ, ರಾಯಚೂರು ಜಿಲ್ಲಾ ರೇಷ್ಮೆ ಬೆಳೆಗಾರರ ಸಮ್ಮೇಳನ ಸಮಿತಿ ರಚಿಸಿದೆವು. ಶ್ರೀ ಅಮರಪ್ಪಗೌಡ ಮೆಟ್ಲೂರು, ಶ್ರೀ ಪಿ. ವಿ. ದೇಸಾಯಿ ಜಾಲಹಳ್ಳಿ, ಶ್ರೀ ಡಿ. ಪ್ರೇಮಕುಮಾರ್ ಲಿಂಗಸೋಗೂರು ಮುಂತಾದ ನನ್ನ ಬೆಳೆಗಾರ ಸ್ನೇಹಿತರು ಬಹಳ ಉತ್ಸಾಹದಿಂದ ದಿನಾಂಕ ೧೨.೧೨.೧೯೮೨ರಂದು ಲಿಂಗಸೂಗೂರಿನಲ್ಲಿ ರಾಯಚೂರು ಜಿಲ್ಲೆಯ ಬೆಳೆಗಾರರ ಸಮ್ಮೇಳನ ನಡೆಸಲು ಎಲ್ಲಾ ಏರ್ಪಾಡು ಮಾಡಿದರು. ಸ್ಮರಣ ಸಂಚಿಕೆ ಹೊರತರಲು ಪ್ರಮುಖರ ಸಂದೇಶ ಹಾಗೂ ಫೋಟೋಗಳನ್ನು ತರಿಸಿಕೊಂಡರು. ಆದರೆ ಮಂಡ್ಯ ಜಿಲ್ಲೆಯ ಸಭೆಯನ್ನು ಮುಂದಕ್ಕೆ ಹಾಕಿದ ಚುನಾವಣಾ ಘೋಷಣೆಯ ಕಾರಣದಿಂದಾಗಿಯೇ ಈ ಸಭೆಯನ್ನು ಮುಂದೂಡಬೇಕಾಯಿತು. ಈ ಸಮಯಕ್ಕೆ ಆನೇಕಲ್ ತಾಲ್ಲೂಕನ್ನು ಬೈವೊಲ್ಟಿನ್ ಬಿತ್ತನೆ ಗೂಡಿನ ವಲಯವೆಂದು ಗುರುತಿಸಲಾಗಿತ್ತು. ಇಲ್ಲಿಯ ಸಮಸ್ಯೆಗಳು ಅಪಾರ. ಗೆಳೆಯ ಮುತ್ತನಲ್ಲೂರಿನ ನಂಜಪ್ಪರೆಡ್ಡಿ ಮತ್ತು ಇತರರೊಡನೆ ಪ್ರವಾಸ ಮಾಡಿ ಇಲ್ಲಿಯ ಬೆಳೆಗಾರರ ಹಿತ ಕಾಪಾಡಲು ನ್ಯಾಯಕ್ಕಾಗಿ ಹೋರಾಡಲು ತಮ್ಮದೇ ಆದ ಸಂಘಟನೆ ಇರಲೆಂದು ಆಲೋಚಿಸಿ "ಆನೇಕಲ್ ತಾಲ್ಲೂಕು ಬೈವೊಲ್ಟಿನ್ ರೇಷ್ಮೆ ಬೆಳೆಗಾರರ ಸಂಘ"ವನ್ನು ಗಾಂಧಿವಾದಿಗಳೂ, ಹಿರಿಯರೂ ಆಗಿದ್ದ ಶ್ರೀ ವೈ. ರಾಮಯ್ಯನವರ ಮುಂದಾಳತ್ವದಲ್ಲಿ ಅತ್ತಿಬೆಲೆಯಲ್ಲಿ ಸ್ಥಾಪಿಸಿದೆವು.

ಕರ್ನಾಟಕ ರೇಷ್ಮೆ ಸಂಘದ ಚಟುವಟಿಕೆಗಳಲ್ಲಿ ಕೋಲಾರ ಜಿಲ್ಲೆಯವರದು ಸಿಂಹಪಾಲು. ಮಾರ್ಕಂಡಪುರದ ಶ್ರೀ ಎಂ. ದೇವೇಗೌಡರು ಕಾರ್ಯದರ್ಶಿಗಳು. ಕೋಲಾರದ ವಿ.ಆರ್. ವೆಂಕಟೇಶಯ್ಯ, ಬೆಂಗ್ಲಿಹೊಸಹಳ್ಳಿ ವಿ. ವೆಂಕಟೇಶ್, ಜಿನ್ನಗಟ್ಟದ ಚೇರ್ಮನ್ ವಿ. ವೆಂಕಟಮುನಿಯಪ್ಪ, ಮಾಸ್ತಿಯ ಆರ್.ವಿ. ಸೀತಾರಾಮಯ್ಯ, ಅಜ್ಜಾವರದ ಎ.ಎನ್. ಕೃಷ್ಣಪ್ಪ ಅವರುಗಳು ಸಂಘದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. ಎಲ್ಲಾ ಕಡೆ ಬೆಳೆಗಾರರ ಸಮ್ಮೇಳನ ಮಾಡುತ್ತಿರುವಾಗ ಇವರು ಸುಮ್ಮನಿರುತ್ತಾರೆಯೇ? ಕೋಲಾರ ಜಿಲ್ಲೆಯ ಬೆಳೆಗಾರರ ಸಭೆಯನ್ನು ಮಾಡುವ ಪ್ರಯತ್ನ ನಡೆದು, ಚುನಾವಣೆ ಬಂದಿದ್ದರಿಂದ ಮಾಡಲಾಗಲಿಲ್ಲ. ಬೆಂಗಳೂರು ಜಿಲ್ಲೆಯದು ಅದೇ ಕಾರಣದಿಂದ ಮುಂದೂಡಲಾಯಿತು. ಅಂದು ಮುಂದೂಡಿದ ಯಾವ ಸಭೆಯನ್ನೂ ಇಂದಿನವರೆಗೂ ಮಾಡಲಾಗಲಿಲ್ಲ.

ನಾನು ಇಡೀ ರಾಜ್ಯದಲ್ಲಿ ಪ್ರವಾಸ ಮಾಡಿದಾಗ ಎಲ್ಲಾ ಕಡೆಯಲ್ಲಿಯೂ ರಾಮನಗರದ ಮಾರುಕಟ್ಟೆಯ ಬಗ್ಗೆ ಬೆಳೆಗಾರರು ದೂರುತ್ತಿದ್ದರು. ತೂಕದಲ್ಲಿ ವಂಚನೆ, ಹರಾಜಾದ ಮೇಲೆ ಗೂಡನ್ನು ಆರಿಸಿ ಬಿಸಾಡುವುದು, ತಡೆದರೆ ದಬ್ಬಾಳಿಕೆ ಮಾತು, ಆಕಳಿ ಗೂಡಿನವರ ಕಿರುಕುಳ, ಕೂಲಿಗಳ ಹೆಸರಿನಲ್ಲಿ ಬರುವ ಗೂಂಡಾಗಳು, ಕೆಲವು ಸಾರಿ ಬೆಳೆಗಾರರಿಗೆ ಹೊಡೆಯುವುದೂ

ಉಂಟು ಎಂದು ಹೇಳಿದರಲ್ಲದೆ ಹೇಗಾದರೂ ಮಾಡಿ ಇದನ್ನು ಅಧಿಕಾರಿಗಳ ಮುಖಾಂತರ ಚರ್ಚಿಸಿ ನಿಲ್ಲಿಸಬೇಕೆಂದು ಹೋದೆಡೆಯಲ್ಲೆಲ್ಲಾ ಹೇಳುತ್ತಿದ್ದರು. ಇದರ ಜೊತೆಗೆ ರಾಮನಗರದಿಂದ ಸಂಘದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದ ಶ್ರೀ ಶೇಷಗಿರಿರಾವ್ ಅವರು ಯಾವಾಗಲೂ ರಾಮನಗರ ಮಾರುಕಟ್ಟೆಯಲ್ಲಿ ಬೆಳೆಗಾರರ ಬಗೆಗೆ ನಡೆಯುವ ದಬ್ಬಾಳಿಕೆ ಹಾಗೂ ಮೋಸದ ಬಗೆಗೆ ತಿಳಿಸುತ್ತಿದ್ದರು. ಇದನ್ನು ತಡೆಯಲು ಅವರು ಪ್ರಯತ್ನಿಸಿ ವಿಫಲರಾಗಿದ್ದರು. ೨೯.೧೧.೧೯೮೨ರಂದು ನನಗೆ ದೀರ್ಘವಾಗಿ ಪತ್ರ ಬರೆದು ರೈತನ ಕಷ್ಟವನ್ನು ಮನ ಕರಗುವಂತೆ ವರ್ಣಿಸಿ ನಾನು ಮತ್ತು ಸದಸ್ಯರು ಮಾರುಕಟ್ಟೆಗೆ ಭೇಟಿ ಕೊಡಬೇಕೆಂದು ಇಲ್ಲಿ ನಡೆಯುವ ಅಕೃತ್ಯಗಳನ್ನು ಏನಾದರೂ ಮಾಡಿ ನಿಲ್ಲಿಸಬೇಕೆಂದು ಆಗ್ರಹಪಡಿಸಿ, ಇದಾಗದಿದ್ದರೆ ಕಾರ್ಯಕಾರಿ ಸಮಿತಿಗೆ ರಾಜೀನಾಮೆ ಕೊಡುವುದಾಗಿ ಅಂತಿಮ ಎಚ್ಚರಿಕೆ ಕೊಟ್ಟಿದ್ದರು.

ಈ ಮನುಷ್ಯನಿಗೆ ಬೆಳೆಗಾರರ ಬಗ್ಗೆ ಇದ್ದ ಕಳಕಳಿ ಅಪಾರ. ರಾಮನಗರದ ಮಾರುಕಟ್ಟೆ, ಇಡೀ ಭಾರತದಲ್ಲಿಯೇ ಅತಿ ದೊಡ್ಡ ಮಾರುಕಟ್ಟೆ ಎಂದು ಕಾಣುತ್ತದೆ. ಮಧ್ಯವರ್ತಿಗಳಿಂದ, ದಲ್ಲಾಳಿಗಳ ಕಾಟದಿಂದ ಬೆಳೆಗಾರರನ್ನು ವಿಮುಕ್ತಿಗೊಳಿಸಲು ಈ ಮಾರುಕಟ್ಟೆಗಳು ಸ್ಥಾಪಿತವಾಗಿದ್ದರೂ ಇಲ್ಲಿ ರೈತನ ಗೋಳು ತಪ್ಪಲಿಲ್ಲವೆಂದು ಯೋಚಿಸಿ, ಈ ಮಾರುಕಟ್ಟೆಯಲ್ಲಿನ ಪರಿಸ್ಥಿತಿಯನ್ನು ಸ್ವತಃ ನೋಡಿ ತಿಳಿದುಕೊಳ್ಳಲು ನಿರ್ಧರಿಸಿದೆ. ಬ್ಯಾಗಿನಲ್ಲಿ ಒಂದು ಹಳೆ ಷರಟು, ಟವೆಲ್ ಮತ್ತು ಪಂಚೆ ತುರುಕಿಕೊಂಡು ನೇರವಾಗಿ ರಾಮನಗರಕ್ಕೆ ಹೋದವನು ಈಗಿನ ಹೊಸ ಬಸ್ಸು ನಿಲ್ದಾಣದಿಂದ ಹಳೆಯ ಬಸ್ಸು ನಿಲ್ದಾಣಕ್ಕೆ ಹೋಗುವ ದಾರಿಯ ಬಲಗಡೆಗೆ ಇದ್ದ ಒಂದು ಹೋಟೆಲಿನ ರೂಮಿನಲ್ಲಿ ಬಟ್ಟೆ ಬದಲಿಸಿ ಹಳೆ ಷರಟು, ಪಂಚೆ ತೊಟ್ಟು, ತಲೆಗೆ ಚೌಕ ಸುತ್ತಿ, ೧೯೮೨ನೇ ಅಕ್ಟೋಬರ್ ೨೮ ಮತ್ತು ೨೯ನೇ ತಾರೀಖಿನಂದು ರಾಮನಗರದ ನದಿಯ ದಡದಲ್ಲಿದ್ದ ಆಗಿನ ಹಳೆಯ ಮಾರುಕಟ್ಟೆಯಲ್ಲಿ ಇಡೀ ದಿನ ಕುಳಿತೆ, ನಿಂತೆ, ನೋಡಿದೆ. ರಾಜ್ಯದ ಬೆಳೆಗಾರರು ಈ ಮಾರುಕಟ್ಟೆಯ ಬಗ್ಗೆ ಹೇಳುತ್ತಾ ಇದ್ದದ್ದು ಸುಳ್ಳಲ್ಲ, ಉತ್ಪ್ರೇಕ್ಷೆಯಲ್ಲ ಎನಿಸಿತು. ನನಗೆ ಅಲ್ಲಿ ನೋವು ತಂದ ಸಂಗತಿ ಎಂದರೆ ಬೆಳೆಗಾರನನ್ನು ಮತ್ತು ಅವನ ಬೆಳೆದು ತಂದ ಬೆಳೆಯನ್ನು ಕಾಲಿನ ಕಸದಂತೆ ಕಾಣುತ್ತಿದ್ದುದು. ತೂಕ ಮಾಡುವಾಗ, ಮಾರುಕಟ್ಟೆ ಅಧಿಕಾರಿಯಾಗಲಿ, ಕೊಂಡುಕೊಳ್ಳುವವನಾಗಲಿ ಬೆಳೆಗಾರನನ್ನು ಗಮನಿಸುತ್ತಲೇ ಇರಲಿಲ್ಲ. ಹರಾಜು ಕೂಗುವಾಗ, ತೂಕ ಮಾಡುವಾಗ, ಈ ಅವಿದ್ಯಾವಂತನೂ, ಮುಗ್ಧನೂ ಆದ ಈ ಹಳ್ಳಿಯ ಮುಕ್ಕನಿಗೆ ಅವರು ಸಂಪೂರ್ಣವಾಗಿ ಗೊಂದಲದಲ್ಲಿ ಕೆಡಹುತ್ತಿದ್ದರು. ಅಯ್ಯೋ ಎನಿಸಿತು. ರೈತ ಮತ್ತು ಅವನು ಬೆಳೆದ ಬೆಳೆಗೆ ಇಷ್ಟೊಂದು ಅಸಡ್ಡೆಯೇ? ನಿಕೃಷ್ಟತೆಯೇ? ಎನಿಸಿತು. ಹಸಿವಿನಿಂದ ಒಂದು ಕಡೆ ಬಳಲಿಕೆಯಾದರೆ ರೈತನ ಬದುಕಿನ ಬವಣೆಯನ್ನು ಕಂಡು ಕಂಗಾಲಾದೆ. ಏಕಾದರೂ ಈ ಸಮಾಜದಲ್ಲಿ ಹುಟ್ಟಿದೇನೋ ಎನಿಸಿತು. ಅಲ್ಲಿಯೇ ಯಾರನ್ನೋ ವಿಚಾರಿಸಿಕೊಂಡು ಭಾರವಾದ ಮನಸ್ಸಿನಿಂದ ಕಾಲುಗಳನ್ನು ಎಳೆದುಕೊಂಡು ಅಲ್ಲಿ ಹತ್ತಿರದಲ್ಲಿದ್ದ ನಮ್ಮ ಶ್ರೀ ಕೆ. ಎಲ್. ಶೇಷಗಿರಿರಾವ್‌ರವರ ಮನೆಗೆ ಹೋದೆ. ಮೊದಲಿಗೆ ನಾನಿದ್ದ ಅವತಾರದಲ್ಲಿ

ಅವರು ನನ್ನನ್ನು ಗುರುತು ಹಿಡಿಯದಿದ್ದರೂ ಆಮೇಲೆ ಗುರುತಿಸಿ ನನ್ನ ಅವತಾರದ ಬಗ್ಗೆ ಆಶ್ಚರ್ಯದಿಂದ ವಿಚಾರಿಸಿದರು. ಅವರ ತಾಯಿ ಇರಬಹುದು ಆ ಅವೇಳೆಯಲ್ಲಿಯೂ ಹಸಿದ ಹೊಟ್ಟೆಗೆ ಮಜ್ಜಿಗೆ ಅನ್ನಕೊಟ್ಟು ಸಂತೈಸಿದರು. ಎಲ್ಲವನ್ನೂ ಹೇಳಿ ಅವರಿಂದ ಬೀಳ್ಕೊಂಡು ಹೋಟೆಲಿಗೆ ಬಂದು ಬಟ್ಟೆ ಬದಲಿಸಿ ಆ ಊರಿನಲ್ಲಿಯೇ ಇದ್ದ ನನ್ನ ರೋಟರಿ ಗೆಳೆಯ ಸೇನಾಪತಿ ವಿಟ್ಲೆ ಕಂಪನಿಯ ಮುಖ್ಯಸ್ಥರಾದ ರೊ. ಗೋವಿಂದರಾಜು ಅವರಿಗೆ ಫೋನು ಮಾಡಿ ಅವರ ಕಾರು ತರಿಸಿಕೊಂಡು ಅವರ ಕಾರ್ಖಾನೆಯ ಅತಿಥಿ ಗೃಹಕ್ಕೆ ಹೋಗಿ ಸ್ನಾನ ಮಾಡಿ, ಊಟಮಾಡಿ, ನನ್ನ ಮತ್ತೊಬ್ಬ ರು ಅಭಿಮಾನಿಗಳಾದ ರೊ. ರಾಮಕೃಷ್ಣ ಮತ್ತು ರೊ. ಗೋವಿಂದರಾಜು ಅವರೊಡನೆ ತಂಗಿದ್ದು ಮಾರನೇ ದಿನ ಊರಿಗೆ ಬಂದು, ಆಗಿನ ಇಲಾಖೆಯ ನಿರ್ದೇಶಕರಾದ ಶ್ರೀ ಮೀನಾಕ್ಷಿ ಸುಂದರಂ ಅವರಿಗೆ ೨೬-೧೧-೧೯೮೨ರಂದು ಈ ಮಾರುಕಟ್ಟೆಯ ಬಗ್ಗೆ ದೀರ್ಘವಾಗಿ ಕಾಗದ ಬರೆದು ಸುಧಾರಿಸಲು ಕೋರಿದೆ. ಆ ಕಾಗದದ ನಕಲು ಇಂದಿಗೂ ನನ್ನಲ್ಲಿದೆ. ಆದರೆ ಮಾರುಕಟ್ಟೆಯಲ್ಲಿ ಪರಿಸ್ಥಿತಿ ಸ್ವಲ್ಪ ಹೆಚ್ಚು- ಕಡಿಮೆ ಈಗಲೂ ಹಾಗೆಯೇ ಇದೆ.

೧೯೭೦ನೇ ಇಸವಿಯಿಂದಲೂ ನಾನು ರೋಟರಿ ಸಂಸ್ಥೆಯ ಸದಸ್ಯನಾಗಿ ಜಿಲ್ಲಾಮಟ್ಟದಿಂದ ಕ್ಲಬ್ಬಿನವರೆಗೆ ಅನೇಕ ಸ್ಥಾನಗಳಲ್ಲಿ ಕೆಲಸ ಮಾಡಿ ಇಂದಿಗೂ ಆ ಸಂಸ್ಥೆಯ ಸದಸ್ಯತ್ವ ಉಳಿಸಿಕೊಂಡಿದ್ದೇನೆ. ೧೯೮೩ರಲ್ಲಿ ನಾನು ಸಕ್ರಿಯವಾಗಿ ರಾಜಕಾರಣಿಯಾಗದಿದ್ದರೆ ಬಹುಶಃ ಜಿಲ್ಲಾ ಗೌರ್ನರ್ ಕೂಡ ಆಗುತ್ತಿದ್ದೇನೋ ಏನೋ? ರೋಟರಿಗೂ ಮತ್ತು ರೇಷ್ಮೆಗೂ ಏನು ಸಂಬಂಧ? ಇದೆ, ಅದಕ್ಕಾಗಿಯೇ ಪ್ರಸ್ತಾಪಿಸುತ್ತಿದ್ದೇನೆ. ವಿಶ್ವ ಬ್ಯಾಂಕಿನ ನೆರವಿನ ಯೋಜನೆಯ ಅಂಗವಾಗಿ ಇಲಾಖೆಯವರು ಇಲಾಖೆ ಅಧಿಕಾರಿಗಳನ್ನು ಜಪಾನಿಗೆ ತರಬೇತಿಗಾಗಿ ಕಳುಹಿಸುತ್ತಿದ್ದರು. ಇವರ ಜೊತೆಗಾಗಿ ಪ್ರಗತಿಪರ ರೈತರು, ಖಾಸಗಿ ಮೊಟ್ಟೆ ತಯಾರಕರು, ರೇಷ್ಮೆ ದಾರ ತೆಗೆಯುವವರನ್ನು ಜಪಾನಿಗೆ ತರಬೇತಿಗಾಗಿ ಕಳುಹಿಸಬೇಕೆಂದು ಕರ್ನಾಟಕ ರೇಷ್ಮೆ ಸಂಘ ಸರ್ಕಾರಕ್ಕೆ ಒತ್ತಾಯ ಮಾಡುತ್ತಲೇ ಬರುತ್ತಿತ್ತು. ಆದರೆ ಅದು ಸಫಲವಾಗಿರಲಿಲ್ಲ. ಹೇಗಾದರೂ ಮಾಡಿ ಕೆಲವು ರೈತರನ್ನಾದರೂ ಜಪಾನಿಗೆ ಕಳುಹಿಸಬೇಕೆಂದು ನನ್ನ ಹಂಬಲ, ಯಾವುದಾದರೂ ಮಾರ್ಗ ಕಾಣುವುದೇನೋ ಎಂದು ಯೋಚಿಸುತ್ತಿದ್ದೆ. ಜಪಾನಿನಲ್ಲಿಯೂ ರೋಟರಿ ಸಂಸ್ಥೆ ಇದೆ. ಅಲ್ಲೂ ರೇಷ್ಮೆ ಬೆಳೆಗಾರರು ಇದ್ದಾರೆ. ಇಲ್ಲಿಯ ನಮ್ಮ ಬೆಳೆಗಾರರನ್ನು ಅಲ್ಲಿಯ ರೋಟರಿಯವರು ಕರೆಸಿಕೊಳ್ಳುವುದು, ಅಲ್ಲಿಯ ಬೆಳೆಗಾರರನ್ನು ನಾವು ಇಲ್ಲಿ ಕರೆಸಿಕೊಳ್ಳುವುದು ಏಕೆ ಮಾಡಬಾರದು ಎಂದು ಯೋಚಿಸಿ, ಆಗ ರೋಟರಿ ಡಿಸ್ಟ್ರಿಕ್ ಗೌರ್ನರ್ ಆಗಿದ್ದ ಶ್ರೀ ಪಿ. ಟಿ. ಕಸ್ತೂರಿಯವರಿಗೆ ತಾರೀಖು ೨೨-೧೧-೧೮೮೨ರಂದು ಪತ್ರ ಬರೆದು ನನ್ನ ತಲೆಯಲ್ಲಿದ್ದ ಯೋಜನೆಯನ್ನು ತಿಳಿಸಿ, ಜಪಾನಿನ ರೋಟರಿ ಸಂಸ್ಥೆಗಳ ಜೊತೆ ವ್ಯವಹರಿಸಲು ಕೋರಿದೆ. ಅವರು ಕುಣಿಗಲ್‌ನ ರೋಟರಿ ಸಂಸ್ಥೆಗೆ ಅಧಿಕೃತ ಭೇಟಿ ಕೊಟ್ಟಾಗ ವಿವರವಾಗಿ ವಿಷಯ ತಿಳಿಸಿ ಒತ್ತಾಯ ತಂದೆ. ನಿರ್ದಿಷ್ಟ ಯೋಜನೆಯ ರೂಪರೇಷೆಗಳನ್ನು ಅವರಿಗೆ ಮನವರಿಕೆ ಮಾಡಿಕೊಟ್ಟೆ. "ಆನ್ ದಿ ಲೈನ್ ಆಫ್ ಯೂತ್ ಎಕ್ಸ್‌ಚೇಂಜ್ ಪ್ರೋಗ್ರಾಮ್ , ವಿ ಕೆನ್‌ಡ್ರಾ ದಿ ಸಿರಿಕಲ್ಚರಿಸ್ಟ್ ಎಕ್ಸ್‌ಚೇಂಜ್

ಪ್ರೋಗ್ರಾಂ" ಎಂದು ೧೯೮೭ನೇ ಇಸವಿ ನವೆಂಬರ್ ೩೦ರಂದು ಬೆಂಗಳೂರಿಗೆ ಬಂದಿದ್ದ ಜಪಾನಿನ ಕೋಮಾರೋ ಕ್ಲಬ್ಬಿನ ಅಧ್ಯಕ್ಷರಾದ ರೊ. ಓರೋಜಿ ಅವರಿಗೆ ಸೂಚಿಸಿ, ಚರ್ಚಿಸಿದೆ.

ನಾನು ಕಸ್ತೂರಿ ಅವರಿಗೆ ಬರೆದ ಪತ್ರವನ್ನು ಆಧರಿಸಿ ರೊ. ಕಸ್ತೂರಿ ಅವರು ಜಪಾನಿನ ರೊ. ಅಕೀರಾ ಮೋರಿಟಾ ಅವರಿಗೆ ಪತ್ರ ಬರೆದು, ಭಾರತದ ರೋಟರಿ ಜಿಲ್ಲೆ ೩೧೯ ಮತ್ತು ಜಪಾನಿನ ನಡುವೆ "ಎಕ್ಸ್‌ಚೇಂಜ್ ಆಫ್ ಸಿಲ್ಕ್ ವರ್ಮ ರೇರರ್ಸ್" ಮಾಡಲು ಸಾಧ್ಯವೆ? ಎಂದು ಬರೆದು ರೂಪರೇಷೆಗಳನ್ನು ತಿಳಿಸಿ, ಆ ಕಾಗದದ ಪ್ರತಿಯನ್ನು ನನಗೆ ಕಳುಹಿಸಿದರು. ಆದರೆ ಈ ಯೋಜನೆ ಕಾರ್ಯರೂಪಕ್ಕೆ ಬರಲಿಲ್ಲ. ಆಮೇಲೆ ನಾನು ಮಂತ್ರಿಯಾದಾಗ ಕಾರ್ಯಕ್ರಮ ರೂಪಿಸಿ, ಸರ್ಕಾರ ಕೆಲವು ರೈತರನ್ನು, ಮೊಟ್ಟೆ ತಯಾರಕರನ್ನು, ನೂಲು ಬಿಚ್ಚುವವರನ್ನೂ ಜಪಾನಿಗೆ ಕಳುಹಿಸಿದೆವು.

೧೯೮೭ನೇ ಇಸವಿ ನವೆಂಬರ್ ತಿಂಗಳಲ್ಲಿ ಬ್ಯಾಡಗಿ ತಾಲ್ಲೂಕಿನ ಮೋಟೆಬೆನ್ನೂರಿನಲ್ಲಿ ನಡೆದ ಸಭೆಯಲ್ಲಿ ಉತ್ತರ ಕರ್ನಾಟಕ ರೇಷ್ಮೆ ಬೆಳೆಗಾರರನ್ನು ಸಂಘಟಿಸುವ ಪ್ರಯತ್ನ ಮಾಡಿದೆವು.

ರಾಜ್ಯದಲ್ಲಿ ಪ್ರಚಲಿತವಿರುವ ಎಲ್ಲಾ ತಳಿಯ ಉತ್ತಮ ರೇಷ್ಮೆ ಬೆಳೆಗಾರರಿಗೆ ಬಹುಮಾನ ಕೊಡುವ ಕಾರ್ಯಕ್ರಮವನ್ನು ರೂಪಿಸಿದೆವು. ಗೂಡು ತರುವ ರೈತರಿಗೆ ಮಾರುಕಟ್ಟೆಗಳಲ್ಲಿ ತಂಗಲು "ರೇಷ್ಮೆ ಕೃಷಿ ಭವನ" ವನ್ನು ಎಲ್ಲಾ ಮಾರುಕಟ್ಟೆ ಆವರಣದಲ್ಲಿ ನಿರ್ಮಿಸಬೇಕೆಂದು ಸರ್ಕಾರಕ್ಕೆ ಸೂಚಿಸಿ, ಕೆಲವೆಡೆ ಕಾರ್ಯರೂಪಕ್ಕೆ ತರುವಂತೆ ಮಾಡಿದೆವು.

ರಾಷ್ಟ್ರೀಯ ಮಟ್ಟದಲ್ಲಿ ರೇಷ್ಮೆ ಬೆಳೆಗಾರರ ಸಮ್ಮೇಳನ ಮಾಡಬೇಕೆಂದು ತೀರ್ಮಾನಿಸಿ ರೇಷ್ಮೆ ಬೆಳೆಯುವ ಇತರೆ ರಾಜ್ಯಗಳ ಸಂಬಂಧಪಟ್ಟ ಮಂತ್ರಿಗಳಿಗೆ ಪತ್ರ ವ್ಯವಹಾರ ಮಾಡಿದೆ.

ಕರ್ನಾಟಕ ರೇಷ್ಮೆ ಸಂಘದ ವತಿಯಿಂದ ಪ್ರಕಟವಾಗಿದ್ದ "ಹ್ಯಾಂಡ್ ಬುಕ್ ಆಫ್ ಸಿಲ್ಕ್ ವರ್ಮ ರೇರಿಂಗ್ ಅಂಡ್ ಡಿಸೀಸ್ " ಪುಸ್ತಕವನ್ನು ಪರಿಷ್ಕರಿಸಲು ಇಲಾಖೆಯ ಅಧಿಕಾರಿಗಳ ಒಂದು ಉಪ ಸಮಿತಿ ರಚಿಸಿ, ಪರಿಷ್ಕರಿಸಿದ ಪುಸ್ತಕವನ್ನು ಪುನರ್ ಮುದ್ರಣ ಮಾಡುವ ಏರ್ಪಾಡು ಮಾಡಿದೆವು. ಆದರೆ ಅದು ಸಾಧ್ಯವಾಗಲಿಲ್ಲ. ಆಗ ಕೇಂದ್ರ ಕಚೇರಿಯಲ್ಲಿ ಜಂಟಿ ನಿರ್ದೇಶಕರಾಗಿದ್ದ ಶ್ರೀ ಸಯೀದ್ ರೆಹಮತುಲ್ಲಾ ಅವರನ್ನು ಸಂಘದ ಚಟುವಟಿಕೆಗಳನ್ನು ಗಮನಿಸಿ ಇಲಾಖೆಯ ಸಹಾಯ ಸಹಕಾರ ನೀಡಲು ನಿಯೋಜಿಸಲಾಯಿತು.

ಈ ಸಂಘದ ಅಧ್ಯಕ್ಷನಾಗಿ ನಾನು ಅತ್ಯಂತ ಪರಿಣಾಮಕಾರಿಯಾಗಿ ಮಾಡಿದ ನೆನಪಿನಲ್ಲಿ ಉಳಿಯುವ ಕೆಲಸವೆಂದರೆ ಹೊರದೇಶದಿಂದ ರೇಷ್ಮೆ ಆಮದು ಮಾಡಿಕೊಳ್ಳುವ ಕೇಂದ್ರ ಸರ್ಕಾರದ ಅನಿಷ್ಟ ನೀತಿಯನ್ನು ವಿರೋಧಿಸಿದುದು. ಉದ್ಯಮದ ಪ್ರಗತಿಗೆ, ಪ್ರಾಥಮಿಕವಾಗಿ ಬೇಕಾಗಿರುವುದು ಬೆಳೆಗಾರನಿಗೆ ಉತ್ತಮ ಬೆಳೆ ಮತ್ತು ಆ ಬೆಳೆಗೆ ಉತ್ತಮ ಬೆಲೆ. ಉತ್ತಮ ಬೆಳೆಗೆ ರೋಗ ರಹಿತ ಮೊಟ್ಟೆ ಕೊಡಬೇಕು. ಉತ್ತಮ ಬೆಲೆ ಸಿಗಬೇಕಾದರೆ ಹೊರ ದೇಶದ ರೇಷ್ಮೆ ಆಮದು ನಿಲ್ಲಬೇಕು. ಈ ಸತ್ಯ ತಿಳಿದಿದ್ದರೂ ದೆಹಲಿಯ ದೊರೆಗಳು, ಯಾರದೋ ಒತ್ತಡಕ್ಕೆ ಮಣಿದು ರೇಷ್ಮೆ ಆಮದು ಮಾಡಿಕೊಳ್ಳುವ ಕೆಟ್ಟ ಪರಂಪರೆಯನ್ನು

ಮುಂದುವರಿಸಿಕೊಂಡು ಬಂದಿದ್ದಾರೆ. ಇದನ್ನು ವಿರೋಧಿಸಿ ಕೇಂದ್ರಕ್ಕೆ ಪತ್ರ ಬರೆದೆವು. ಪತ್ರಿಕೆಗಳಿಗೆ ಪ್ರತಿಭಟನಾ ಹೇಳಿಕೆ ನೀಡಿದೆವು. ರಾಜ್ಯದ ಲೋಕಸಭಾ ಸದಸ್ಯರು ಮತ್ತು ರೇಷ್ಮೆ ಬೆಳೆ ಬೆಳೆಯುವ ಪ್ರದೇಶದ ಶಾಸಕರ ಸಭೆ ಮಾಡಿ ಅವರುಗಳಿಗೆ ವಿಷಯ ತಿಳಿಸಿ ಅವರ ಮೂಲಕ ಕೇಂದ್ರ ಸರ್ಕಾರದ ಮೇಲೆ ಒತ್ತಡ ತರಲು ಏರ್ಪಾಡು ಮಾಡಿದೆವು. ಶಾಸಕರ ಹಾಗೂ ಲೋಕಸಭಾ ಸದಸ್ಯರ ನಿಯೋಗವನ್ನು ದೆಹಲಿಗೆ ಕಳುಹಿಸಲು ಏರ್ಪಾಡು ಮಾಡಿದೆವು. ಕರಪತ್ರಗಳನ್ನು ಹೊರಡಿಸಿ ಪ್ರತಿಭಟಿಸಿದೆವು.

೧೯೮೩ಕ್ಕೆ ಕರ್ನಾಟಕ ರೇಷ್ಮೆ ಸಂಘಕ್ಕೆ ಐವತ್ತು ವರ್ಷ ತುಂಬುತ್ತಿದ್ದುದರಿಂದ ಸಂಘದ ಗೋಲ್ಡನ್ ಜ್ಯೂಬಿಲಿ ಹಬ್ಬವನ್ನು ನವೆಂಬರ್ ಅಥವಾ ಡಿಸೆಂಬರ್‌ನಲ್ಲಿ ಹಮ್ಮಿಕೊಂಡೆವು. ಉದ್ಯಮದ ಅಭಿವೃದ್ಧಿಗೆ ನೆರವಾಗುವ ರೀತಿಯಲ್ಲಿ ಯಾವುದಾದರೂ ಉಪಯುಕ್ತ ಕೆಲಸವನ್ನು ಈ ಹಬ್ಬದ ಆಚರಣೆಯ ಸಂದರ್ಭದಲ್ಲಿ ಮಾಡಬೇಕೆಂದು ತೀರ್ಮಾನ ಮಾಡಿದೆವು. ಐದು ದಶಕಗಳ ಕಾಲ ಉಪಯುಕ್ತ ಸೇವೆ ಮಾಡಿದ ಈ ಸಂಘಕ್ಕೆ ತನ್ನದೇ ಆದ ಕಟ್ಟಡ ಇಲ್ಲದ ಕೊರತೆ ನನ್ನನ್ನು ಕಾಡುತ್ತಿತ್ತು. ಅದನ್ನು ಏನಾದರೂ ಮಾಡಿ ನೀಗಲು ನಾನು ಮಾಡಿದ ಪ್ರಯತ್ನ ಫಲ ಕಾಣಲಿಲ್ಲ.

ರಾಜ್ಯದ ಸುಮಾರು ಎಲ್ಲಾ ಜಿಲ್ಲೆಗಳಿಂದಲೂ ಸಾವಿರಾರು ಜನ ಸದಸ್ಯರನ್ನು ನೋಂದಾಯಿಸಿ ಸಂಘಕ್ಕೆ ಆರ್ಥಿಕ ಶಕ್ತಿ ತುಂಬಿ, ಚಟುವಟಿಕೆಗಳನ್ನು ಚುರುಕುಗೊಳಿಸಿದ ಮೇಲೆ ತಾರೀಖು ೫-೪-೧೯೮೨ರಂದು ಅಂದಿನ ಕೇಂದ್ರ ರೇಷ್ಮೆ ಮಂಡಲಿ ಅಧ್ಯಕ್ಷರಾಗಿದ್ದ ಶ್ರೀ ಬಿ. ಬಸವಯ್ಯನವರ ನೇತೃತ್ವದಲ್ಲಿ ಸಂಘದ ಸರ್ವಸದಸ್ಯರ ಮಹಾಸಭೆಯನ್ನು ನಡೆಸಿ ನೂತನ ಕಾರ್ಯಕಾರಿ ಸಮಿತಿಯನ್ನು ರಚಿಸಿದೆವು. ಅಂದು ನೆರೆದಿದ್ದ ಸಾವಿರಾರು ಬೆಳೆಗಾರರ ಮತ್ತು ಸರ್ವಸದಸ್ಯರ ಸಭೆ ಆದ ಮೇಲೆ ಮತ್ತೆ ಅಂಥ ಸರ್ವಸದಸ್ಯರ ಸಭೆ ಆಗಿಲ್ಲವೆಂದು ಕಾಣುತ್ತದೆ. ನೂತನ ಕಾರ್ಯಕಾರಿ ಸಮಿತಿಯವರು ೨೧-೫-೧೯೮೨ರಂದು ಸಭೆ ಸೇರಿ ಎರಡನೇ ಸಾರಿ ನನ್ನನ್ನು ಸಂಘದ ಅಧ್ಯಕ್ಷನನ್ನಾಗಿ ಆರಿಸಿದರು.

ರಾಷ್ಟ್ರಮಟ್ಟದಲ್ಲಿ ರೇಷ್ಮೆ ಬೆಲೆಯನ್ನು ಸ್ಥಿರೀಕರಣ ಮಾಡಲು ಕಚ್ಚಾ ರೇಷ್ಮೆಗೆ ಮತ್ತು ರೇಷ್ಮೆ ಗೂಡಿಗೆ ಕನಿಷ್ಠ ಹಾಗೂ ಗರಿಷ್ಠ ಬೆಲೆ ನಿಗದಿ ಮಾಡಬೇಕೆಂಬ ಪ್ರಸ್ತಾವನೆ ಅನೇಕ ದಿನಗಳಿಂದಲೂ ಕೇಂದ್ರ ಸರ್ಕಾರದ ಮುಂದಿತ್ತು. ಅದಕ್ಕಾಗಿ ೧೯೮೧ರಲ್ಲಿ ಕೇಂದ್ರ ಸರ್ಕಾರವು ಶ್ರೀ ಮಾಲಿಕ್ ಅವರ ನೇತೃತ್ವದಲ್ಲಿ ಒಂದು ಸಮಿತಿ ರಚಿಸಿ, ವರದಿ ಕೇಳಿತು. ಅದರ ಸಂಬಂಧದಲ್ಲಿ ನನಗೆ ಕಳುಹಿಸಿದ ಪ್ರಶ್ನಾವಳಿಗೆ ಅತಿ ಜಾಗರೂಕತೆಯಿಂದ ಅಂಕಿ ಅಂಶಗಳನ್ನು ಆಧರಿಸಿ ಅತ್ಯಂತ ಶ್ರದ್ಧೆಯಿಂದ ಇಲಾಖೆಯ ಅಧಿಕಾರಿಗಳ ಸಹಾಯದಿಂದ ಉತ್ತರ ಬರೆದು ಕಳುಹಿಸಿದೆ. ಆಮೇಲೆ ನನಗೆ ತಿಳಿಯಿತು. ಮಾಲಿಕ್ ವರದಿಯಲ್ಲಿ ಇದಾವುದನ್ನು ಪರಿಗಣಿಸದೆ ಕಾಶ್ಮೀರದಲ್ಲಿ, ಮರಗಳಲ್ಲಿ ಬೆಳೆಯುವ ಹುಳುಗಳ ಸಾಕಾಣಿಕೆಯ, ಉತ್ಪಾದನಾ ವೆಚ್ಚವನ್ನು ಆಧರಿಸಿ ರೇಷ್ಮೆ ಗೂಡಿಗೆ ಕನಿಷ್ಠ ಬೆಲೆ ನಿಗದಿ ಮಾಡಿದರೆಂದು. ಆದರೆ ಈ ಸಮಿತಿಯ ಶಿಫಾರಸ್ಸು ಕಾರ್ಯರೂಪಕ್ಕೆ ಬರಲಿಲ್ಲ. ಅಷ್ಟೇ ಅಲ್ಲ, ಯಾವ ಸರ್ಕಾರವೂ ಇಂದಿಗೂ ಕನಿಷ್ಠ ಬೆಲೆ ನಿಗಧಿ ಮಾಡುವ ಸಾಹಸ ಕೂಡಾ ಮಾಡಿಲ್ಲ.

ಈ ದಿನಗಳಲ್ಲಿ ರೇಷ್ಮೆ ಕಸುಬಿಗೆ ಬಂದ ಮತ್ತೊಂದು ಗಂಡಾಂತರ ಹೂಜಿ ನೊಣಗಳ ಹಾವಳಿ. ಪಶ್ಚಿಮ ಬಂಗಾಳದಿಂದ ಬಂದ ಈ ನೊಣಗಳು ಕರ್ನಾಟಕದ ರೇಷ್ಮೆ ಬೆಳೆಗೆ ಸಾಕಷ್ಟು ನಷ್ಟ ಉಂಟು ಮಾಡಿದವು. ಇದನ್ನು ತಡೆಯಲು ಸರ್ಕಾರ, ಇಲಾಖೆ ನಡೆಸಿದ ಸಕಲ ಪ್ರಯತ್ನದಲ್ಲಿಯೂ ಕರ್ನಾಟಕ ರೇಷ್ಮೆ ಸಂಘವು ಸಕ್ರಿಯವಾಗಿ ಭಾಗವಹಿಸಿ ನೆರವು ನೀಡಿತು. ತಾರೀಖು ೨೧ ಮತ್ತು ೨೨ನೇ ಮೇ, ೧೯೮೧ರಂದು ಕೋಲಾರ, ಬೆಂಗಳೂರು, ತುಮಕೂರು ಜಿಲ್ಲೆಯ ಅನೇಕ ಹಳ್ಳಿಗಳಿಗೆ ಭೇಟಿ ಕೊಟ್ಟು, ನೊಣ ನಿಯಂತ್ರಿಸುವಲ್ಲಿ ರೈತರಿಗೆ ಹಾಗೂ ಇಲಾಖೆ ಅಧಿಕಾರಿಗಳಿಗೆ ಇರುವ ಸಮಸ್ಯೆಯನ್ನು ವಿವರಿಸಿ ತಾರೀಖು ೯.೬.೧೯೮೧ರಂದು ಸರ್ಕಾರಕ್ಕೆ ಪತ್ರ ಬರೆದು ತಿಳಿಸಿದೆ. ಈ ಪತ್ರ ಬರೆದ ಮೇಲೆ ಆಂದಿನ ಮುಖ್ಯಮಂತ್ರಿ ಶ್ರೀ ಗುಂಡೂರಾವ್ ಅವರು ವಿಧಾನಸೌಧದಲ್ಲಿ ದಿನಾಂಕ ೧೬.೬.೧೯೮೧ರಂದು ಬೆಳೆಗಾರರ, ನೂಲು ಬಿಚ್ಚುವವರ, ಅಧಿಕಾರಿಗಳ ಸಭೆ ಕರೆದು ಚರ್ಚಿಸಿದರು. ಹೂಜಿ ನೊಣಗಳ ನಿಯಂತ್ರಣಕ್ಕೆ ಅಥವಾ ಅದರ ನಿರ್ಮೂಲನಕ್ಕೆ ವಿಶ್ವವಿದ್ಯಾಲಯಗಳು ಸಂಶೋಧನೆ ಮಾಡಿದವು. ಆದರೆ ಯಾವ ಕ್ರಮವೂ ಯಶಸ್ವಿ ಆಗಲಿಲ್ಲ. ನನಗೆ ತಿಳಿದಿರುವಂತೆ ಮನುಷ್ಯ ಸೊಳ್ಳೆಗಳ ಮಧ್ಯೆ ಬದುಕುತ್ತಿರುವಂತೆ ನಮ್ಮ ರೇಷ್ಮೆ ಹುಳುಗಳು ನೊಣದೊಡನೆ ಬದುಕುತ್ತಿವೆ. ಬೆಳೆಗಾರ ಈಗ ಎಚ್ಚರಿಕೆಯಿಂದ ಬಾಗಿಲು ಕಿಟಕಿಗಳಿಗೆ ಮೆಷ್ ಹಾಕಿ, ದಡೇವಿಗೆ ಸೊಳ್ಳೆ ಪರದೆ ಕಟ್ಟಿ ಹೂಜಿ ನೊಣ ನಿಯಂತ್ರಿಸುತ್ತಿದ್ದಾನೆ. ಈಗ ಇದೊಂದು ಸಮಸ್ಯೆಯಾಗಿ ಉಳಿದಿಲ್ಲ.

ಶ್ರೀ ಬಾಲಸುಬ್ರಹ್ಮಣ್ಯಂ ಅವರು ನಿರ್ದೇಶಕರಾಗಿದ್ದಾಗಲೇ ಈ ಉದ್ಯಮದ ಚಟುವಟಿಕೆ ಮತ್ತು ಆಗುತ್ತಿರುವ ವಿದ್ಯಮಾನಗಳನ್ನು ಉದ್ಯಮದಲ್ಲಿ ತೊಡಗಿರುವವರಿಗೆ ಹಾಗೂ ಆಸಕ್ತರಿಗೆ ತಲುಪಿಸಲು ಅನುಕೂಲವಾಗಲೆಂದು ಇಲಾಖಾ ವತಿಯಿಂದ “ರೇಷ್ಮೆ ಕೃಷಿ” ಎಂಬ ಮಾಸಪತ್ರಿಕೆ ಹೊರಡಿಸಲು ಏರ್ಪಾಡು ಮಾಡಿದ್ದರು. ಈ ಕೆಲಸಕ್ಕಾಗಿ ಒಂದು ಸಂಪಾದಕ ಮಂಡಲಿ ಸಹ ಇತ್ತು. ನಿರ್ದೇಶಕರೇ ಪ್ರಧಾನ ಸಂಪಾದಕರು. ಶ್ರೀ ಎಚ್.ವಿ. ನಾಗರಾಜರಾವ್ ಸಂಪಾದಕರು. ಶ್ರೀ ಎಸ್. ಷಡಕ್ಷರಯ್ಯ ಸಹ ಸಂಪಾದಕರು. ಶ್ರೀ ಜೆ. ಎಸ್. ವೆಂಕಟಾದ್ರಿ ಸಹಾಯಕ ಸಂಪಾದಕರಾಗಿದ್ದರು. ಈ ಸಂಪಾದಕ ಮಂಡಲಿಯಲ್ಲಿ ವೇಣುಗೋಪಾಲ ನಾಯರ್, ವಿ.ಆರ್. ಉತ್ತಮನ್, ಆರತಿ ವೆಂಕಟೇಗೌಡ, ಎಂ. ನಂಜಪ್ಪರೆಡ್ಡಿ. ಕೋಡಂಬಳ್ಳಿ ವೆಂಕಟರಾಮಯ್ಯ ಹಾಗೂ ಆಶಿತ್ ದೇಸಾಯಿಯಂತಹ ಹಿರಿಯರು ಸದಸ್ಯರಾಗಿದ್ದು, ತುಂಬಾ ಗಂಭೀರವಾದ ಉಪಯುಕ್ತ ಚರ್ಚೆ ನಡೆಯುತ್ತಿತ್ತು. ೧೯೭೯ನೇ ಇಸವಿಯಿಂದ ೧೯೮೫ರಲ್ಲಿ ನಾನು ಸಚಿವನಾಗುವವರೆಗೂ ಸಂಪಾದಕ ಮಂಡಲಿಯ ಸದಸ್ಯನಾಗಿದ್ದೆ. ೮೦ರ ದಶಕದಲ್ಲಿ ಸಂಪಾದಕರಾಗಿ ತುಂಬಾ ಯಶಸ್ವಿಯಾಗಿ ಈ ಪತ್ರಿಕೆಯನ್ನು ನಡೆಸಿ ಈಗ ನಿವೃತ್ತಿಯಾಗಿರುವ ಶ್ರೀ ಎಸ್. ಷಡಕ್ಷರಯ್ಯನವರು ನನ್ನ ಅಭಿಮಾನಿ ಮತ್ತು ಹಿತೈಷಿಯಾಗಿದ್ದರು. ಅವರ ಒತ್ತಾಯದ ಫಲವೇ ಈ ನನ್ನ ಮುಂದಿನ ಪ್ರವಾಸ ಕಥನ. ನಿಷ್ಕಲ್ಮಷ ಹೃದಯದ ನೂರಕ್ಕೆ ನೂರು ಪಾಲು ಪ್ರಾಮಾಣಿಕವಾದ ಈ ವ್ಯಕ್ತಿಯೇ ಈ ನನ್ನ ಬರವಣಿಗೆಗೆ ಮೂಲ ಪ್ರೇರಣೆ. ಈ ಪತ್ರಿಕೆಯ ಸಂಪಾದಕ ಮಂಡಲಿಯ ಸದಸ್ಯನಾಗಿ ೧೯೮೫ರವರೆಗೆ ಸಕ್ರಿಯವಾಗಿ ನಾನು

ಕೆಲಸ ಮಾಡಿದೆ. ಸಂಪಾದಕ ಮಂಡಲಿಯ ನಿಯಮಾವಳಿಗಳನ್ನು ರಚಿಸುವಾಗ ನಾನು ಮಾಡಿದ ಅನೇಕ ಸಲಹೆಗಳನ್ನು ನಿಯಮದಲ್ಲಿ ಅಳವಡಿಸಿಕೊಂಡರು.

ನಾನು ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷನಾದ ಮೇಲೆ ಉದ್ಯಮದಲ್ಲಿ ತೊಡಗಿರುವವರನ್ನು ಸಂಘಟನೆ ಮಾಡಿದ ವರದಿಯನ್ನು ಇದುವರೆಗೆ ಪ್ರಸ್ತಾಪ ಮಾಡಿದ್ದೇನೆ. ಆದರೆ ಇದಕ್ಕಿಂತ ಮುಖ್ಯವಾಗಿ ರೇಷ್ಮೆ ಉದ್ಯಮದ ಬಗ್ಗೆ ಅದರ ಸ್ಥಿತಿಗತಿಯ ಬಗ್ಗೆ, ಈಗ ವಿಶ್ಲೇಷಣೆ ಮಾಡಬೇಕಾಗಿದೆ. ಅಂದರೆ ಕರ್ನಾಟಕ ರೇಷ್ಮೆ ಉದ್ಯಮ ೭೦ನೇ ದಶಕದ ಅಂತ್ಯದಲ್ಲಿ ಮತ್ತು ೮೦ನೇ ದಶಕದ ಆದಿಯಲ್ಲಿ ಇದ್ದ ಪರಿಸ್ಥಿತಿಯನ್ನು ನಾವೀಗ ಚಿಂತಿಸಬೇಕಾಗಿದೆ. ೧೯೫೦ನೇ ದಶಕದಲ್ಲಿ ಇದ್ದ ಪರಿಸ್ಥಿತಿಗೂ ೮೦ರ ದಶಕದ ಪರಿಸ್ಥಿತಿಗೂ ಅಜಗಜಾಂತರ ವ್ಯತ್ಯಾಸವಿತ್ತು. ಇಲಾಖೆಯ ಹಿರಿಯ ಅಧಿಕಾರಿಗಳೇ ಇಲಾಖೆಯ ನಿರ್ದೇಶಕರಾಗುವ ಪದ್ಧತಿ ಹೋಗಿ ಐ.ಎ.ಎಸ್. ಅಧಿಕಾರಿಗಳು ನಿರ್ದೇಶಕರಾಗುವ ಪದ್ಧತಿಯ ಜಾರಿಯಿಂದಾಗಿ ಶ್ರೀ ಬಾಲಸುಬ್ರಹ್ಮಣ್ಯಂ ನಿರ್ದೇಶಕರಾಗಿದ್ದರು. ಇದರ ಫಲವಾಗಿ ಶ್ರೀ ಷಣ್ಮುಗಪ್ಪ ಮತ್ತು ಶ್ರೀ ಕೆ. ವೀರಯ್ಯ ಅವರುಗಳು ನಿರ್ದೇಶಕರಾಗುವ ಅವಕಾಶವನ್ನು ಬೇಕೆಂತಲೇ ದೇವರಾಜ್ ಅರಸ್ ಸರ್ಕಾರ ಕಿತ್ತುಕೊಂಡಿತು ಎನ್ನುವ ಪುಕಾರು ಕೂಡಾ ಇತ್ತು. ಬಹುಶಃ ಶ್ರೀ ವೇಣುಗೋಪಾಲ್ ನಾಯರ್ ಅವರೇ ಇಲಾಖೆಯ ಕೊನೆಯ ನಿರ್ದೇಶಕರು ಎಂದು ಕಾಣುತ್ತದೆ. ಇವರು ನಿವೃತ್ತರಾಗಿ ನಿರ್ದೇಶಕರಿಗೆ ತಾಂತ್ರಿಕ ಸಲಹೆಗಾರರಾಗಿದ್ದರು. ನನಗೆ ಜ್ಞಾಪಕವಿರುವಂತೆ ಆಗ ಡಾ. ಕೃಷ್ಣಸ್ವಾಮಿ, ಮೈಸೂರಿನ ಕೇಂದ್ರ ರೇಷ್ಮೆ ಸಂಶೋಧನಾಲಯದ ನಿರ್ದೇಶಕರಾಗಿದ್ದರು. ವಿ. ಆರ್. ಉತ್ತಮನ್ ಅಷ್ಟರಲ್ಲಿ ನಿವೃತ್ತರಾಗಿದ್ದರು. ಶ್ರೀ ಸೀತಾರಾಮ್ ಐಯ್ಯಂಗಾರ್ ಎನ್ನುವವರು ಆಗಿನ ಕಾಲಕ್ಕೆ ಹೆಸರಿಸಬೇಕಾದ ಹಿರಿಯ ಸಂಶೋಧಕರಾಗಿದ್ದರು. ನಿರ್ದೇಶಕರಾಗಿ ನಿವೃತ್ತರಾದ ಶ್ರೀ. ಕೆ. ರಂಗನಾಥರಾವ್ ಅವರು ಯೋಜನಾ ಸಮನ್ವಯ ಅಧಿಕಾರಿಗಳಾಗಿದ್ದರು. ಆಗ ಕೇಂದ್ರ ರೇಷ್ಮೆ ಮಂಡಲಿ ಮುಂಬಯಿಯಲ್ಲಿದ್ದುದರಿಂದ ಬೆಂಗಳೂರಿನ ಕಚೇರಿಯಲ್ಲಿ ಶ್ರೀ ಚಮನ್‌ಲಾಲ್, ಸಹಾಯಕ ಕಾರ್ಯದರ್ಶಿಯಾಗಿದ್ದರು. ಆಮೇಲೆ ೧೯೮೦ರ ಸುಮಾರಿಗೆ ಡಾ. ಮನ್‌ಜಿತ್‌ಸಿಂಗ್ ಜಾಲಿ ಅವರು ಮೈಸೂರಿನ ಕೇಂದ್ರ ಸಂಶೋಧನಾಲಯದ ನಿರ್ದೇಶಕರಾದರು.

ವಿದ್ಯೆಯಿಂದ, ಅನುಭವದಿಂದ ನುರಿತು ಪಕ್ವವಾದ ಉದ್ಯಮಕ್ಕೆ ತಮ್ಮನ್ನು ತಾವೇ ಅರ್ಪಿಸಿಕೊಂಡು ಕೆಲಸ ಮಾಡಿ ಯಾವುದೇ ವಿಷಯದ ಬಗ್ಗೆ ಅಧಿಕಾರಯುತವಾಗಿ ಮಾತನಾಡಲು ಶಕ್ತರಾದ ಈ ದಿಗ್ಗಜಗಳ ನಡುವೆ "ರೇಷ್ಮೆ ಕೃಷಿ" ಸಂಪಾದಕೀಯ ಮಂಡಲಿಯ ಸಭೆಯಲ್ಲಿ ಹಾಗೂ ಕರ್ನಾಟಕ ರೇಷ್ಮೆ ಸಂಘದ ಸಭೆಗಳಲ್ಲಿ ನಾನು ಕುತೂಹಲದಿಂದ ಅಷ್ಟೇ ಆಸಕ್ತಿಯಿಂದ ಇವರನ್ನು ಮತ್ತು ಇವರ ಚರ್ಚೆಗಳನ್ನು ಬೆಪ್ಪನಂತೆ ಅವಲೋಕಿಸುತ್ತಿದ್ದೆ. ಆ ಸಭೆಗಳ ನಂತರ ನನಗೆ ಆತ್ಮೀಯರಾಗಿದ್ದ ಶ್ರೀ ಕೆ. ವೀರಯ್ಯ, ಶ್ರೀ ವಿಶ್ವೇಶ್ವರಯ್ಯ, ಡಿ. ಮಹಾದೇವಪ್ಪ ಅವರೊಡನೆ ಈ ವಿಷಯಗಳ ಬಗ್ಗೆ ಚರ್ಚಿಸಿ, ಚಿಂತಿಸಿ, ಉದ್ಯಮದ ಬಗ್ಗೆ ತಿಳಿದುಕೊಳ್ಳುವುದರಲ್ಲಿ ನಾನು ಸೋಲಲಿಲ್ಲ. ನನ್ನ ಶ್ರಮ ಮತ್ತು ಶ್ರದ್ಧೆ ನನ್ನ ಕೈ ಬಿಡಲಿಲ್ಲ.

ನನ್ನ ತಿಳುವಳಿಕೆ ಎಷ್ಟು ಬೆಳೆಯಿತೆಂದರೆ ಕೆಲವೇ ದಿನಗಳಲ್ಲಿ ಈ ಮೇಲೆ ತಿಳಿಸಿದ ಅತಿರಥ ಮಹಾರಥರ ಅನಿಸಿಕೆಗಳು, ನಂಬಿಕೆಗಳು ಎಷ್ಟರಮಟ್ಟಿಗೆ ಕರ್ನಾಟಕದ ರೇಷ್ಮೆ ಉದ್ಯಮಕ್ಕೆ ಸರಿಹೊಂದುತ್ತವೆ ಎಂದು ವಿಮರ್ಶೆ ಮಾಡುವ ಮಟ್ಟಕ್ಕೆ ಬೆಳೆದಿತ್ತು. ಇವರನ್ನೆಲ್ಲಾ ನಿಭಾಯಿಸಬಲ್ಲೆನೆಂಬ ಆತ್ಮವಿಶ್ವಾಸ ಕೂಡಾ ಬಂದಿತು.

ನನ್ನ ವಕೀಲಿ ಕೆಲಸಕ್ಕೆ ಈ ಚಟುವಟಿಕೆಗಳಿಂದ ಕುಂದಾಗದಂತೆ ನೋಡಿಕೊಂಡೆ. ಅಷ್ಟರಲ್ಲಿ ತೋಟ ಮಾಡಿಸುವ ಕೆಲಸವು ಮೊದಲಾಗಿತ್ತು. ಏನೇ ಆದರೂ ರೇಷ್ಮೆಯಿಂದ ನಾನು ಆಕರ್ಷಿತನಾಗಿದ್ದೆ. “ಸಂಬಳ ಸಾರಿಗೆ ಇಲ್ಲದ, ಸವಲತ್ತಿನ ಸವಿ ಇಲ್ಲದ” ಅಧಿಕಾರವೆಂದೇ ನನ್ನ ಗೆಳೆಯರು ಮಾಡುತ್ತಿದ್ದ ತಮಾಷೆ ನನ್ನನ್ನು ಈ ಕೆಲಸಗಳಿಂದ ಹಿಮ್ಮೆಟ್ಟಿಸಲಿಲ್ಲ. ಅದಕ್ಕೆ ಬದಲಾಗಿ ನಾನು ಇನ್ನೂ ಚುರುಕಾಗಿ ಕೆಲಸ ಮಾಡಲು ಅನುವಾದೆ.

ಉದ್ಯಮದ ಕ್ಷೇತ್ರ ಸಮಸ್ಯೆಗಳನ್ನು ಅವಲೋಕಿಸಿದೆ. ಬೈವೊಲ್ಟಿನ್ ತಳಿಗಳ ಉದಯವಾಗಿತ್ತು. ಈ ತಳಿಗಳ ಉದಯದಿಂದ ಉತ್ಸಾಹಿತರಾದ ಸಂಶೋಧಕರು ಹಾಗೂ ಇಲಾಖೆಯ ಕೆಲವರು ಕರ್ನಾಟಕದ ರೇಷ್ಮೆ ಉದ್ಯಮದಲ್ಲಿ ಶ್ವೇತ ಕ್ರಾಂತಿ ಆಗಿಹೋಯಿತು ಎನ್ನುವ ಸ್ಥಿತಿಯಲ್ಲಿದ್ದರು. ಮಿಶ್ರ ಜಾತಿಯ ಗೂಡು ಬೆಳೆಯುವ ಪ್ರದೇಶಗಳಲ್ಲಿ ರೈತರು ಬೈವೊಲ್ಟಿನ್ ಗೂಡು ಬೆಳೆಯಲು ಮೊದಲು ಮಾಡಿದ್ದರು. ಬೈವೊಲ್ಟಿನ್ ತಳಿಗಳು ಹೆಚ್ಚಿನ ಉತ್ಪನ್ನ ಶಕ್ತಿಯುಳ್ಳ ಮತ್ತು ಅಂತರಾಷ್ಟ್ರೀಯ ಗುಣಮಟ್ಟದ ರೇಷ್ಮೆಯನ್ನು ಕೊಡಬಲ್ಲ ತಳಿಗಳಾಗಿದ್ದವು. ಮೈಸೂರಿನ ಸಂಶೋಧನಾಲಯದಿಂದ ಹೊರಬಂದ ಈ ತಳಿಗಳು ಅಂದಿನ ಸಂಶೋಧಕರಲ್ಲಿ ಹಾಗೂ ಇಲಾಖೆಯವರಲ್ಲಿ ಒಂದು ವಿಧವಾದ ಭ್ರಮೆ ಹುಟ್ಟಿಸಿದ್ದುವು. ಈ ಭ್ರಮೆ ಎಲ್ಲಿಯವರೆಗೆ ಹೋಗಿತ್ತೆಂದರೆ ಆಗ ತಾನೆ ನಿವೃತ್ತಿ ಹೊಂದಿದ್ದ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ ವೇಣುಗೋಪಾಲ್ ನಾಯಕ್ ಅವರು, ೧೯೭೫ ಅಥವಾ ೧೯೭೬ ಇರಬಹುದು, ಸರಿಯಾದ ಇಸವಿ ಮರೆತುಹೋಗಿದೆ, ತಮ್ಮ ಬೀಳ್ಕೊಡುಗೆ ಸಮಾರಂಭದಲ್ಲಿ ಮಾತನಾಡುತ್ತಾ “ಇನ್ನು ಹತ್ತು ವರ್ಷಗಳಲ್ಲಿ ಮೈಸೂರು ತಳಿಯನ್ನು ವಸ್ತು ಸಂಗ್ರಹಾಲಯದಲ್ಲಿ ಕಾಣಬೇಕಾಗುತ್ತೆ” ಎಂದರಂತೆ. ಇವರೇ ಮುಂದೆ ನಿರ್ದೇಶಕರಿಗೆ ತಾಂತ್ರಿಕ ಸಲಹೆಗಾರರಾದರು. ಅಂದಮೇಲೆ ಈ ಇಲಾಖೆಯಲ್ಲಿ ಅಂದಿನ ತಾಂತ್ರಿಕ ವಿಷಯಗಳ ಪ್ರಗತಿಪಥ ನಿಮಗೆ ಅರ್ಥವಾಗಬಹುದು. ಈ ನಂಬಿಕೆ ಮೈಸೂರು ಬಿತ್ತನೆ ತಳಿಯ ವಲಯವನ್ನು ಸಂಪೂರ್ಣವಾಗಿ ನಿರ್ಲಕ್ಷಿಸಲು, ವಿಶ್ವಬ್ಯಾಂಕಿನ ನೆರವಿನಲ್ಲಿ ಯಾವ ಸವಲತ್ತೂ ಈ ವಲಯಕ್ಕೆ ಸಿಗದಂತೆ ಆಗಲು ಕಾರಣವಾಯಿತೆಂದು ಅರಿತುಕೊಳ್ಳುವುದು ನನಗೆ ತಡವಾಗಲಿಲ್ಲ. ಇದಾದ ಮೇಲೆ ಬಂದ ಇಲಾಖೆಯ ಕೆಲವು ನಿರ್ದೇಶಕರಿಗೂ, ಬೈವೊಲ್ಟಿನ್ ಭೂತ ಹಿಡಿದು ಮೈಸೂರು ಬಿತ್ತನೆ ವಲಯವನ್ನು ಕಡೆಗಣಿಸಿದರು. ಬೈವೊಲ್ಟಿನ್ ಬೆಳೆಯನ್ನು ಕೃಷಿ ಕ್ಷೇತ್ರದಲ್ಲಿ ಯಶಸ್ವಿಯಾಗಿ ಬೆಳೆಯಲು ಎಲ್ಲಾ ಪ್ರಯತ್ನಗಳು ನಡೆದವು. ರೇಷ್ಮೆ ಬೆಳೆಗಾರರು ಆರಂಭದಲ್ಲಿ ಬೈವೊಲ್ಟಿನ್ ತಳಿಯನ್ನು ಉತ್ಸುಕತೆಯಿಂದ ಆರಂಭಿಸಿದರು. ಬೆಳೆ ಕಳೆದುಕೊಂಡರು. ಈ ಹೊಸ ತಳಿ ನಮಗೆ ಸರಿಬರುವುದಿಲ್ಲವೆಂದು ಕೈ ಬಿಟ್ಟರು. ಸರಕಾರಿ ಕೃಷಿ ಕ್ಷೇತ್ರದಲ್ಲಿ ಇಲಾಖೆಯವರು ಮಾಡಿದ ಪ್ರಯತ್ನಗಳೂ ಕೂಡಾ ಇವರು

ತಿಳಿದುಕೊಂಡಿದ್ದಷ್ಟು ಸಫಲವಾಗಲಿಲ್ಲ. ಮಲೆನಾಡಿನಲ್ಲಿ ಹಾಗೂ ಹೊಸ ಮೈಸೂರಿನ ಪ್ರದೇಶಗಳಲ್ಲಿ ಈ ತಳಿಯ ಗೂಡುಗಳನ್ನು ಬೆಳೆಸುವ ಸತತ ಪ್ರಯತ್ನ ನಡೆಯುತ್ತಿತ್ತು. ನನಗೆ ತಿಳಿದಿದ್ದಂತೆ ಬೈವೊಲ್ಟಿನ್ ತಳಿ ಬೆಳೆಗಾರರ ಸಮಸ್ಯೆಗಳೇ ಬೇರೆ ಆಗಿದ್ದುವು.

ಆನೇಕಲ್ ತಾಲ್ಲೂಕನ್ನು "ಬೈವೊಲ್ಟಿನ್ ಬಿತ್ತನೆ ವಲಯ" ವಾಗಿ ಘೋಷಿಸಲಾಗಿತ್ತು. ಬೇರೆ ತಳಿ ಗೂಡು ಬೆಳೆಯುವುದನ್ನು ಕಾನೂನಿನ ಮೂಲಕ ನಿಷೇಧಿಸಲಾಗಿತ್ತು. ಅಂದರೆ ಈ ರೈತರನ್ನು ಕಾನೂನಿನ ಚೌಕಟ್ಟಿನಲ್ಲಿ ತಂದು ಇಂತಹುದೇ ಬೆಳೆ ಬೆಳೆಯಬೇಕು ಎಂಬ ನಿರ್ಬಂಧ ಹೇರಲಾಗಿತ್ತು. ಮೊದಮೊದಲು ಆಸಕ್ತಿ ತೋರಿದ ರೈತರುಗಳು ಬರುಬರುತ್ತಾ ನಿರುತ್ಸಾಹರಾದರು. ಇಳುವರಿ ಕಡಿಮೆ, ತೋಟದ ಸೊಪ್ಪನ್ನೆಲ್ಲಾ ತಿಂದು, ಮನೆ ಮಂದಿಯ ಶ್ರಮವನ್ನೆಲ್ಲಾ ನುಂಗಿ, ಇನ್ನೇನು ಹಣ್ಣಾಗಬೇಕು ಎಂದಾಗ ಬೆಳೆಗಳು ಸಂಪೂರ್ಣವಾಗಿ ಹಾಳಾಗುವುದು, ಅಲ್ಲದೆ ಬಿತ್ತನೆಗೆ ಲಾಭದಾಯಕವಲ್ಲದ ಬೆಲೆ, ಈ ಕಾರಣದಿಂದಾಗಿಯೇ ರೈತರು ಬೈವೊಲ್ಟಿನ್ ಬೆಳೆಯುವುದನ್ನು ಬಿಟ್ಟು ಮಿಶ್ರ ತಳಿ ಹುಳುಗಳನ್ನು ಸಾಕಲು ಮೊದಲು ಮಾಡಿದ್ದರು. ಬೆಲೆ ತುಸು ಕಡಿಮೆಯಾದರೂ ನಮ್ಮ ರೈತ ಬದುಕಿಯಾನು. ಇಳುವರಿ ಕಡಿಮೆ ಆದರೂ ತಡೆದುಕೊಂಡಾನು. ಆದರೆ ಇಡೀ ಬೆಳೆ ರೋಗದಿಂದಾಗಿ ಹಾಳಾಗಿ ಹೋದರೆ ಅವನು ಹೇಗೆ ಬದುಕಬೇಕು? ಅವನ ಸಹನೆಗೆ ಮಿತಿಯಿಲ್ಲವೆ? ಇಲಾಖೆಯವರಿಗೂ, ರೈತರಿಗೂ ಘರ್ಷಣೆಗಳಾದುವು. ಈ ಸಂದರ್ಭದಲ್ಲಿ ಮುತ್ತಾನಲ್ಲೂರಿನ ನನ್ನ ಗೆಳೆಯ ಶ್ರೀ ನಂಜಪ್ಪರೆಡ್ಡಿ, ಅತ್ತಿಬೆಲೆಯ ವಾ. ರಾಮಯ್ಯನವರು ಮತ್ತು ಇತರೆ ಬೆಳೆಗಾರರೊಡನೆ ಕುಳಿತು ಚರ್ಚಿಸಿ, ಈ ಪ್ರದೇಶದಲ್ಲಿ ಪ್ರವಾಸ ಮಾಡಲು ಹೊರಟೆವು. ನನ್ನೊಡನೆ ಶ್ರೀ ಎಂ. ದೇವೇಗೌಡರು ಮತ್ತು ಇಲಾಖೆಯಲ್ಲಿಯ ಅತ್ಯಂತ ಮೃದು ಸ್ವಭಾವದ ಆದರೆ ಅಷ್ಟೇ ಪ್ರಾಮಾಣಿಕರಾದ ಶ್ರೀ ಸಯೀದ್ ರೆಹಮತುಲ್ಲಾ ಅವರೂ ಇದ್ದರು. ಕೆಲವು ಊರುಗಳಲ್ಲಿ ನಮ್ಮನ್ನು ಊರಿನ ಒಳಗೆ ಸೇರಿಸಲು ನಿರಾಕರಿಸಿ ಬಾಯಿಗೆ ಬಂದ ಭಾಷೆಯಲ್ಲಿ ಬೈದು ಕಳುಹಿಸಿದರು. ಅದೊಂದು ಊರು, ಹೆಸರು ಮರೆತಿದ್ದೇನೆ. ಕಷ್ಟಪಟ್ಟು ಊರೊಳಗೆ ಹೋದೆವು. ದೊಡ್ಡ ರೈತ, ವಿಶಾಲವಾದ ಮನೆ, ಟ್ರ್ಯಾಕ್ಟರ್‌ನಲ್ಲಿ ಸೊಪ್ಪು ತಂದು ಹುಳು ಸಾಕುವಷ್ಟು ದೊಡ್ಡ ವಹಿವಾಟು. ಯಜಮಾನರು ಜಗುಲಿಯ ಮೇಲೆ ಕುಳಿತಿದ್ದರು. ಅಷ್ಟು ದೊಡ್ಡ ಮನೆಯಲ್ಲಿ ಸ್ಮಶಾನ ಮೌನ ಆವರಿಸಿತ್ತು. ಯಾರ ಮುಖದಲ್ಲಿಯೂ ಗೆಲುವಿರಲಿಲ್ಲ. ಜೊತೆಯಲ್ಲಿದ್ದವರನ್ನು ವಿಚಾರಿಸಿದಾಗ ತಿಳಿಯಿತು. ನಾಲ್ಕನೆ ಜ್ವರದಿಂದ ಎದ್ದು ೫-೬ ದಿನಗಳಾಗಿದ್ದ ಸುಮಾರು ನೂರು ತಟ್ಟೆ ಹುಳುಗಳನ್ನು ಈ ದಿನ ಬೆಳಿಗ್ಗೆ ಆ ಮನೆಯವರು ತಿಪ್ಪೆಗೆ ಸುರಿದು ಬಂದರೆಂದು! ಏನು ಮಾಡುವುದು? ಮನೆಯವರೊಡನೆ ಮಾತನಾಡಲು ಧೈರ್ಯ ಸಾಲಲಿಲ್ಲ. ಆದರೂ ಮೊಂಡು ಧೈರ್ಯ ಮಾಡಿ ಯೋಚಿಸಿದೆ. "ಫ್ರೆಂಡ್ ಇನ್ ನೀಡ್ ಇಸ್ ಎ ಫ್ರೆಂಡ್ ಇನ್ ಡೀಡ್" ಅಲ್ಲವೆ? ಜಗುಲಿಯ ಮೇಲೆ ಕುಳಿತಿದ್ದ ಯಜಮಾನರು ಕುಳಿತಿದ್ದಲ್ಲಿಯೇ ಹೋಗಿ ನೆಲದ ಮೇಲೆ ಕುಳಿತು "ಅಯ್ಯಾ ನಾನು ಕುಣಿಗಲ್‌ನಲ್ಲಿ ವಕೀಲ. ಇಲ್ಲಿಯೇ ಹತ್ತಿರದ ಹಳ್ಳಿಯವನು, ನಮ್ಮ ಮನೆಯಲ್ಲಿಯೂ ತಾತ ಮುತ್ತಾತಂದಿರ ಕಾಲದಿಂದಲೂ ರೇಷ್ಮೆ ಗೂಡು ಬೆಳೆಯುತ್ತೇವೆ" ಎಂದು ಹೇಳಿ ಅವರ

ಮುಖ ನೋಡಿದೆ. ಯಜಮಾನರು ಕುಳಿತಲ್ಲಿಯೇ ಅದೇನೋ ಒಂದು ಥರ ಮರುಗಿದರು. "ಅದಕ್ಕೆ ನಾನೇನು ಮಾಡಬೇಕು ಅಂತೀರಾ" ಎಂದು ಗಡುಸಾಗಿ ಹೇಳಿದರು. ಅವರ ಧ್ವನಿಯಲ್ಲಿ ತಿರಸ್ಕಾರ, ನೋವು ತುಂಬಿರುವುದು ಸ್ಪಷ್ಟವಾಗಿತ್ತು. "ರೇಷ್ಮೆ ಹುಳುಗಳಿಗೆ ಬರುವ ಈ ರೋಗಗಳಿಂದ ನಮ್ಮಲ್ಲೂ ಬೆಳೆ ಕೆಡುತ್ತಿವೆ. ಅದರಲ್ಲೂ ನಮ್ಮ ಮೈಸೂರು ತಳಿ ಬೆಳೆಯುವ ಬೆಳೆಗಾರರನ್ನು ಕೇಳುವವರಿಲ್ಲದಂತಾಗಿದೆ" ಎಂದಾಗ ಭುಗಿಲೆದ್ದಿತು ಕೋಪ ಆ ಮುದುಕನಲ್ಲಿ. "೩೦ ದಿನಕ್ಕೊಮ್ಮೆ ಸರಕಾರಿ ಸಂಬಳ ಎಣಿಸಿಕೊಳ್ಳುವ ಈ ಕಳ್ಳ- ಖದೀಮರಿಗೆಲ್ಲಿ ಇದು ತಿಳಿಯುತ್ತೆ ಹೇಳಿ" ಎಂದು ಸರಕಾರಿ ಜೀಪಿನ ಕಡೆಗೆ ಬೆರಳು ಮಾಡಿ ಹೇಳಿದರು. ಅಂದು ಅವರು ಆಡಿದ ಮಾತುಗಳು, ಬೆಳೆಗಾರರ ಬಗ್ಗೆ ಅದರಲ್ಲಿಯೂ ಈಗ ಪ್ರಚಲಿತವಿರುವ ಬೈವೊಲ್ಟಿನ್ ತಳಿಗಳ ಬಗ್ಗೆ ನನ್ನ ಅಭಿಪ್ರಾಯದ ಮೇಲೆ ಹೆಚ್ಚಿನ ಪ್ರಭಾವ ಬೀರಿದವು ಎಂದರೆ ತಪ್ಪಾಗಲಾರದು. "ರೇಷ್ಮೆ ಬೆಳೆ ಬೆಳೆದು ನಾಲ್ಕು ಕಾಸು ಸಂಪಾದಿಸಿಕೊಂಡು ನೆಮ್ಮದಿಯಾಗಿ ಬದುಕುತ್ತಿದ್ದ ನಮಗೆ ಇದಾವುದೋ ಹಾಳು ಜಾತಿಯ ಹುಳು ಸಾಕಲು ಹೇಳಿ ಈ ಸರ್ಕಾರದವರು ಮನೆ ಹಾಳು ಮಾಡುತ್ತಿದ್ದಾರೆ. ಚಾಕೀಲಾದರೂ ಹಾಳಾದರೆ ಪರವಾಗಿಲ್ಲ. ಆದರೆ ತೋಟದ ಸೊಪ್ಪೆಲ್ಲಾ ತಿಂದು, ಮನೆ ಮಕ್ಕಳ ದುಡಿಮೆಯೆಲ್ಲಾ ಪಡೆದು, ಹಣ್ಣಾಗುವಾಗ ಹಾಳಾದರೆ ಏನು ಮಾಡುವುದು? ಕೊಂಡು ಸೊಪ್ಪು ತಂದವರ ಗತಿ ಏನು? ಕೂಲಿ ಕೊಟ್ಟು ಬೆಳೆ ಮಾಡಿಸಿದವರ ಗತಿ ಏನು? ನಮ್ಮದಿರಲಿ, ಒಂದು ಹೊತ್ತಿನ ಗಂಜಿಗಾಗಿ ಬೆಳೆ ಮಾಡುವವನ ಪಾಡೇನು? ಈ ಹಾಳು ಜಾತಿ ಮೊಟ್ಟೆ ಬೇಡವೆಂದು ಮಿಶ್ರ ತಳಿ ಹುಳುಗಳನ್ನು ಇಟ್ಟರೆ ಯೇವುದೋ ದೊಡ್ಡ ಅಪರಾಧ ಮಾಡಿದೆವೆಂದು ಕ್ರಿಮಿನಲ್ ಕೇಸುಗಳನ್ನು ಹಾಕಿ ಕೋರ್ಟಿನ ಕಟಕಟೆಯಲ್ಲಿ ನಿಲ್ಲಿಸುತ್ತಾರೆ. ಏನಿದು? ಇವರನ್ನು ಹೇಳುವವರು, ಕೇಳುವವರು ಯಾರೂ ಇಲ್ಲವೆ? ನಿಮ್ಮಂತಹವರಾದರೂ ಇವರಿಗೆ ಬುದ್ಧಿ ಹೇಳಬಾರದೆ?" ಎಂದು ಉದ್ವೇಗದಿಂದ ಒಂದೇ ಸಮನೆ ಮಾತನಾಡಿ ಸುಮ್ಮನಾದರು. ಆಗ ನಾನು ನನ್ನ ಬಗ್ಗೆ, ಸಂಘದ ಬಗ್ಗೆ ತಿಳಿಸಿ, ನಿಮ್ಮ ಬೆಳೆಗಳು ರೋಗದಿಂದ ಹಾಳಾಗುವುದನ್ನು ತಿಳಿದು, ಅದರ ಬಗ್ಗೆ ವಿಚಾರಿಸಲೆಂದೇ ಬಂದವನು ನಾನು. ಈ ದಿಸೆಯಲ್ಲಿ ನಮ್ಮ ಕೈಲಾದಷ್ಟು ಪ್ರಯತ್ನ ಮಾಡುತ್ತೇನೆ ಎಂದು ಹೇಳಿ ಕೈ ಮುಗಿದು ಹೊರಟೆ. "ಎಲ್ಲಾದರೂ ಉಂಟೆ ಸ್ವಾಮಿ, ಈಗಾಗಲೇ ೧೨ ಗಂಟೆ, ಊಟ ಮಾಡಿಕೊಂಡು ಹೋಗಿ. ನಮ್ಮ ನಂಜಪ್ಪರೆಡ್ಡಿ ಕೂಡಾ ಬಂದಿದ್ದಾರೆ" ಎಂದರು. ಆಗ ನಾನು "ನನಗೆ ಗೊತ್ತು ನಿಮ್ಮ ಮನೆಯಲ್ಲಿ ಇವತ್ತು ಅಡುಗೆ ಮಾಡಿಲ್ಲ" ಎಂದೆ. ಹೌದೆನ್ನುವಂತೆ ತಲೆ ಆಡಿಸುತ್ತಾ "ನಿಜವಾಗಿಯೂ ನೀನು ರೈತನಿಗೆ ಹುಟ್ಟಿದ ಮಗನಪ್ಪ" ಎಂದರು. ಆ ಊರಿನ ಹೆಸರು ಮತ್ತು ವ್ಯಕ್ತಿಯ ಹೆಸರು ಮರೆತರೂ ಈ ಘಟನೆ ಚಾಚೂತಪ್ಪದೆ ನೆನಪಿದೆ. ಅವರು ಉದ್ವೇಗದಲ್ಲಿ ಮಾತನಾಡುವಾಗ "ನನ್ನ ಹಿರಿಯ ಮಗನನ್ನು ಮಣ್ಣಿಗೆ ಹಾಕಿಬಂದಷ್ಟು ನನಗೆ ಈ ದಿನ ೧೦೦ ತಟ್ಟೆ ಹುಳು ಸುರಿಯುವಾಗ ದುಃಖವಾಯಿತು" ಎಂದ ಅವರ ಮಾತು ಆಗ ತಲೆಯಲ್ಲಿ ತುಂಬಿಕೊಂಡಿದ್ದು ಇಂದಿಗೂ ಉಳಿದಿದೆ.

ಅಲ್ಲಿಂದ ಮುಂದೆ ಬೈವೊಲ್ಟಿನ್ ಬಿತ್ತನೆ ಪ್ರದೇಶದ ನನ್ನ ಪ್ರವಾಸ ಮುಂದುವರಿಸಲು ಆಗಲಿಲ್ಲ. ವಾಪಸ್ಸು ಆನೇಕಲ್ಲಿಗೆ ಬಂದು ಇಲಾಖೆಯ ಕಚೇರಿಯಲ್ಲಿ ವಿಚಾರಿಸಿದಾಗ

"ಸಾಹೇಬರು ಕೋರ್ಟಿಗೆ ಹೋಗಿದ್ದರು" ಕೋರ್ಟಿನಲ್ಲಿ ನೂರಾರು ರೈತರ ಮೇಲೆ ಮಿಶ್ರ ತಳಿ ಹುಳು ಸಾಕಿದ ಅಪರಾಧಕ್ಕೆ ಕ್ರಿಮಿನಲ್ ಮೊಕದ್ದಮೆ ಹೂಡಲಾಗಿತ್ತು. ಇಲ್ಲಿ ಕೆಲಸ ಮಾಡುತ್ತಿದ್ದ ಅಧಿಕಾರಿಗೆ, ರೋಗ ನಿರೋಧಕ ಕಾರ್ಯಕ್ರಮಗಳಿಗಿಂತ, ಕೋರ್ಟಿನಲ್ಲಿ ರೈತರ ಮೇಲೆ ಕೇಸು ನಡೆಸುವುದೇ ಪ್ರಮುಖ ಕೆಲಸವಾಗಿತ್ತು. ಇಲಾಖೆಯ ಸಿಬ್ಬಂದಿಯ ಕೆಲವರು ರೈತರ ಜೊತೆ ಸಹಕರಿಸಿ ಅನ್ಯೋನ್ಯವಾಗಿ ನಡೆದುಕೊಂಡು ಅವರ ಸಮಸ್ಯೆಗಳಿಗೆ ಪರಿಹಾರ ಏರ್ಪಡಿಸುವುದರ ಬದಲು ರೈತರೊಡನೆ ಘರ್ಷಣೆಗೆ ಇಳಿದು ಸಮಸ್ಯೆಯನ್ನು ಉಲ್ಬಣಗೊಳಿಸಿದ್ದರು. ವಿಪರ್ಯಾಸವೆಂದರೆ ರೈತರ ಬಗ್ಗೆ ಅತೀವ ಕಳಕಳಿ ಉಳ್ಳವರೆಂದು ನಾವೆಲ್ಲ ಹಾಡಿ ಹೊಗಳಿದ ಶ್ರೀ ಬಾಲಸುಬ್ರಹ್ಮಣ್ಯಂ ಅವರೇ ಈ ಸಂದರ್ಭದಲ್ಲಿ ಇಲಾಖೆಯ ನಿರ್ದೇಶಕರಾಗಿದ್ದರು. ಅವರಲ್ಲಿದ್ದ ಬೈವೊಲ್ಟಿನ್ ಭ್ರಮೆ, ರೈತರ ಬಗ್ಗೆ ಅವರಿಗಿದ್ದ ಕಳಕಳಿಯನ್ನು ನುಂಗಿ ಹಾಕಿತ್ತೆಂದು ಕಾಣುತ್ತದೆ.

ಹಿಂದಿರುಗಿದ ಮೇಲೆ ಸಂಬಂಧಪಟ್ಟವರೊಡನೆ ಚರ್ಚಿಸಿದೆವು. ಮೊದಲ ಬಾರಿಗೆ ಇಲಾಖೆಯವರೊಡನೆ ಘರ್ಷಣೆಯ ಭಾವನೆಯನ್ನು ವ್ಯಕ್ತ ಮಾಡಬೇಕಾಯಿತು. ಇದರ ಫಲವಾಗಿ ಈ ಬಿತ್ತನೆ ಬೆಳೆ ಬೆಳೆಯುವವರಿಗೆ ಕೆಲವು ಸವಲತ್ತು ಒದಗಿಸಲಾಯಿತು. ಇಳುವರಿಯನ್ನು ಆಧರಿಸಿ ಪ್ರೋತ್ಸಾಹ ಬೆಲೆ ಕೊಡುವುದು ಜಾರಿಗೆ ಬಂತು. ರೈತರ ಮೇಲೆ ಹಾಕಿದ್ದ ಕೇಸುಗಳನ್ನು ವಾಪಸ್ಸು ತೆಗೆದುಕೊಳ್ಳಲಾಯಿತು. ಜೊತೆಗೆ ಕೊನೆಯಲ್ಲಿ ಬೈವೊಲ್ಟಿನ್ ಕಡ್ಡಾಯ ಮಾಡುವುದನ್ನು ಸಡಿಲಿಸಲಾಯಿತು.

ಈ ಕಾಲದಲ್ಲಿಯೇ ಬೈವೊಲ್ಟಿನ್ ಬೆಳೆಯುವ ರೈತನಿಗೆ ಬೆಳೆ ವಿಮೆ (ಕ್ರಾಪ್ ಇನ್ಶೂರೆನ್ಸ್) ಯೋಜನೆಯನ್ನು ಜಾರಿಗೆ ತಂದು ಬೆಳೆ ಕಳೆದುಕೊಂಡ ರೈತನಿಗೆ ಪರಿಹಾರ ಒದಗಿಸುವ ಏರ್ಪಾಡಾಯಿತು. ಮುಂದೆ ಈ ಯೋಜನೆ ಮೈಸೂರು ರಸ್ತೆಯಲ್ಲಿ ರೇಷ್ಮೆ ಬೆಳೆಯನ್ನು ಶ್ರದ್ಧೆಯಿಂದ ಬೆಳೆಯುವ ಕ್ರೈಸ್ತ ಪಾದ್ರಿ (ಆಶೀರ್ವನ ) ಪ್ರಕಾರ( ಎನ್ ಅವಾರ್ಡ್ ಫಾರ್ ಎ ಬ್ಯಾಡ್ ರೇರೆರ್) ಆಗಿ ಕೆಲವು ರೈತರು ಈ ಯೋಜನೆಯನ್ನು ದುರುಪಯೋಗ ಮಾಡಿಕೊಳ್ಳುವುದು ಮೊದಲಾಯಿತು. ಇಲಾಖೆಯವರು ಈ ತಳಿಯನ್ನು ಯಶಸ್ವಿಯಾಗಿ ಬೆಳೆಸಿದೆವೆಂದು ತೋರಿಸಿಕೊಳ್ಳಲು ಬೆಳೆಗಾರನಿಗೆ ಏನೆಲ್ಲಾ ಮಾಡಲು ಸಿದ್ಧರಿದ್ದ ಕಾಲವದು.

ಬೈವೊಲ್ಟಿನ್ ತಳಿಯ ಗೂಡು ಬೆಳೆದು ವರ್ಷಕ್ಕೆ ಅಂತರರಾಷ್ಟ್ರೀಯ ಗುಣಮಟ್ಟದ ಸಾವಿರ ಮೆಟ್ರಿಕ್ ಟನ್ ರೇಷ್ಮೆ ಉತ್ಪತ್ತಿ ಮಾಡುತ್ತೇವೆ ಎಂದು ವಿಶ್ವಬ್ಯಾಂಕಿನ ನೆರವು ಪಡೆದರೂ ಇಂದಿನವರೆಗೂ ನಾವು ಆ ಗುರಿ ತಲುಪಲಾಗಿಲ್ಲ. ಅಷ್ಟೇ ಅಲ್ಲ, ಮಿಶ್ರ ತಳಿಯ ಮೊಟ್ಟೆ ಮಾಡಲು ನಮಗೆ ಬೇಕಾಗುವಷ್ಟು ಗುಣಮಟ್ಟದ ರೋಗರಹಿತವಾದ ಬಿತ್ತನೆ ತಳಿಯ ಗೂಡನ್ನು ಬೆಳೆಯಲು ಸಾಧ್ಯವಾಗಿಲ್ಲ. ಇದು ಅಂದು ಕರ್ನಾಟಕದಲ್ಲಿದ್ದ ಬೈವೊಲ್ಟಿನ್ ಪರಿಸ್ಥಿತಿ.

ಆದರೆ ಬೈವೊಲ್ಟಿನ್ ಗಂಡು ಚಿಟ್ಟೆಯನ್ನು ಮೈಸೂರು ತಳಿಯ ಹೆಣ್ಣು ಚಿಟ್ಟೆಯೊಡನೆ ಸಂಯೋಜಿಸಿ, ಪಡೆದ ಮಿಶ್ರ ಜಾತಿಯ ಹುಳುಗಳನ್ನು ಸಾಕಿದಾಗ ಒಳ್ಳೆಯ ಇಳುವರಿ ಬಂತು. ರೇಷ್ಮೆಯ ಗುಣಮಟ್ಟವು ಉತ್ತಮಗೊಂಡಿತು. ಇಳುವರಿ ಜಾಸ್ತಿಯಾದುದಲ್ಲದೆ,

ಗುಣಮಟ್ಟದ ಗೂಡಿನ ಬೆಲೆಯೂ ಜಾಸ್ತಿಯಾಯಿತು. ಹಿಂದೆ ಸಾಕುತ್ತಿದ್ದ ಸೀಸಿಬಿ ಮೈಸೂರು - ಮಿಶ್ರ ತಳಿಗಿಂತ ಬೈವೊಲ್ಟಿನ್ ಮೈಸೂರು ಮಿಶ್ರ ತಳಿಯಿಂದ ಬರುತ್ತಿದ್ದ ಆದಾಯ ಜಾಸ್ತಿಯಾಯಿತು. ಇದೊಂದು ದೊಡ್ಡ ಸಾಧನೆ ಎಂದೇ ಹೇಳಬೇಕು. ಕರ್ನಾಟಕದಲ್ಲಿ ರೇಷ್ಮೆಯ ಗುಣಮಟ್ಟ ಉತ್ತಮಗೊಳ್ಳಲು ಮತ್ತು ಉತ್ಪತ್ತಿ ಹೆಚ್ಚಾಗಲು ಈ ಬೈವೊಲ್ಟಿನ್ ತಳಿಯೇ ಕಾರಣವಾಯಿತು. ಈ ದೃಷ್ಟಿಯಿಂದ ಇಂಥ ತಳಿಗಳನ್ನು ಕಂಡುಹಿಡಿದ ಸಂಶೋಧಕರು ಅಭಿನಂದನಾರ್ಹರು. ಅಂದರೆ ಬೈವೊಲ್ಟಿನ್ ತಳಿ ನಿರುಪಯುಕ್ತ ಎಂದು ಅದು ನಮಗೆ ಬೇಡವೆಂದು ಯಾರೂ ಯಾವಾಗಲೂ ಎಲ್ಲೂ ಅಭಿಪ್ರಾಯಪಟ್ಟಿಲ್ಲ. ಆದರೆ ಈ ತಳಿ ನಮ್ಮ ಬೆಳೆಗಾರನ ಸ್ಥಿತಿಗೆ, ವಾತಾವರಣಕ್ಕೆ, ವಾಯುಗುಣಕ್ಕೆ ಹೊಂದಿಕೊಳ್ಳುವಷ್ಟು ಸದೃಢವಾಗಿಲ್ಲ. ಆದ್ದರಿಂದ ಬೆಳೆ ಕೆಡುತ್ತದೆ ಎಂದು ಕೆಲವರ ವಾದವಾಗಿತ್ತು. ಈ ಅಭಿಪ್ರಾಯಪಟ್ಟ ಕೆಲವು ಅಧಿಕಾರಿಗಳು ವರ್ಗಾವಣೆಯಂತಹ ಶಿಕ್ಷೆ ಅನುಭವಿಸಿದರೆಂದು ನಾನು ಈಗಾಗಲೇ ತಿಳಿಸಿದ್ದೇನೆ.

೮

ನಾನು ರೇಷ್ಮೆ ಸಂಘದ ಸದಸ್ಯನಾಗಿ, ಉಪಾಧ್ಯಕ್ಷನಾಗಿ ಆಮೇಲೆ ಅಧ್ಯಕ್ಷನಾಗಿ ರೇಷ್ಮೆ ಉದ್ಯಮದ ಚಟುವಟಿಕೆಗಳೊಡನೆ ನಿಕಟವಾಗಿ ಬೆರೆಯುವ ಸಮಯಕ್ಕೆ ಮೈಸೂರು ಬಿತ್ತನೆ ವಲಯದಲ್ಲಿ ಪರಿಸ್ಥಿತಿ ಬಿಗಡಾಯಿಸಿತ್ತು. ಈ ವೇಳೆಗೆ ಮಿಶ್ರ ಜಾತಿ ಬೆಳೆಯುವ ಪ್ರದೇಶಗಳಲ್ಲಿ ಬೈವೊಲ್ಟಿನ್ ಬೆಳೆಯುತ್ತಿದ್ದರು. ಬೈವೊಲ್ಟಿನ್ ತಳಿಯ ಭೂತ ಹಿಡಿದು ಇಲಾಖೆಯ ಕೆಲವರು ಮೈಸೂರು ಬಿತ್ತನೆ ತಳಿಯನ್ನು ಮರೆತರು. ಈ ಮೂಲ ತಳಿಯ ನಿರ್ಲಕ್ಷ್ಯ ಸಲ್ಲದು ಎಂದು ತಿಳಿದಿದ್ದವರ ದನಿಗೆ ಬೆಲೆ ಇರಲಿಲ್ಲ. ಹೇಳಲೂ ಹೆದರುತ್ತಿದ್ದರು. ಬೈವೊಲ್ಟಿನ್ ಮೈಸೂರು ಮಿಶ್ರ ತಳಿ ಬೆಳೆಯುವುದರಿಂದ ಮಿಶ್ರ ಜಾತಿ ಬೆಳೆಗಾರರಿಗೆ ಆದಾಯ ಜಾಸ್ತಿಯಾಯಿತು. ಮೈಸೂರು ಬಿತ್ತನೆ ತಳಿ ಸಾಕುವುದರಿಂದ ಬರುವ ಆದಾಯ ಮಿಶ್ರ ತಳಿ ಬೆಳೆಯುವ ಬೆಳೆಗಾರನ ಆದಾಯಕ್ಕೆ ಹೋಲಿಸಿದರೆ ಬಹಳವಾಗಿ ಕಡಿಮೆಯಾಗಿತ್ತು. ಇಲ್ಲಿ ರೈತರೇ ನಮಗೇಕೆ ಈ ಕಡಿಮೆ ಇಳುವರಿ ಕೊಡುವ ಮತ್ತು ಲಾಭದಾಯಕವಲ್ಲದ ಮೈಸೂರು ತಳಿಯನ್ನು ಕಡ್ಡಾಯವಾಗಿ ಬೆಳೆಯಲು ಕಾನೂನಿನ ಒತ್ತಾಯವಿದೆ ಎಂದು ಕೇಳುತ್ತಿದ್ದರು. ಈ ಪ್ರಶ್ನೆ ನನ್ನನ್ನೂ ಕಾಡುತ್ತಿತ್ತು. ಸುಮಾರು ಶೇ. ೯೦ ಜನರ ಹಿತಕ್ಕೋಸ್ಕರ (ಮಿಶ್ರ ತಳಿ ಸಾಕುವವರು) ಶೆ. ೧೦ರಷ್ಟು ಇರುವ ಈ ಜನರ (ಮೈಸೂರು ತಳಿಯನ್ನು ಕಡ್ಡಾಯವಾಗಿ ಸಾಕುವವರು) ನ್ನೇಕೆ ಯಾವ ಪರಿಹಾರವೂ ಇಲ್ಲದೆ ಬಲಿ ಕೊಡುತ್ತಿದ್ದಾರೆ? ಇದು ಕೇವಲ ಬೆಳೆಗಾರರ ಪ್ರಶ್ನೆಯಾಗಿರದೆ, ಹುಳು ಸಾಕುವುದರಿಂದ ಹಿಡಿದು, ಬಟ್ಟೆ ನೇಯುವವರೆಗಿನ ಲಕ್ಷಾಂತರ ಬಡ ಕುಟುಂಬಗಳ ಮತ್ತು ರೇಷ್ಮೆ ಉದ್ಯಮದ ಅಭಿವೃದ್ಧಿಯ ಪ್ರಶ್ನೆಯಾಗಿತ್ತು. ಎಲ್ಲೆಲ್ಲೂ ರೈತರುಗಳಲ್ಲಿ ಬೆಳೆ ಹಾಳಾಗುವುದು ಬಹುಪಾಲು ರೇಷ್ಮೆ ಮೊಟ್ಟೆಗಳ ದೋಷದಿಂದಲೇ ಎಂಬ ಭಾವನೆ ಬೇರೂರಿತ್ತು. ಅಧಿಕಾರಿಗಳೂ ಸಹ ಮಿಶ್ರ ತಳಿ ಜಾತಿ ಮೊಟ್ಟೆ ತಯಾರಿಕೆಯಲ್ಲಿ ಬಿತ್ತನೆ ತಳಿಗಳ ಪಾತ್ರ ಬಹಳವಿದೆ ಎಂದು ಒಪ್ಪಿಕೊಳ್ಳುತ್ತಿದ್ದರು. ಗುಣಮಟ್ಟದ

ರೋಗರಹಿತವಾದ ಮಿಶ್ರ ಮೊಟ್ಟೆ ಮಾಡಲು ರೋಗರಹಿತವಾದ ಬೈವೊಲ್ಟಿನ್ ಮತ್ತು ಮೈಸೂರು ತಳಿಯ ಗೂಡಿನ ಅವಶ್ಯಕತೆಯ ಬಗ್ಗೆ ವಾದವಿರಲಿಲ್ಲ. ಬಿತ್ತನೆ ವಲಯಗಳನ್ನು ಅದರಲ್ಲಿಯೂ ಮೈಸೂರು ಬಿತ್ತನೆ ವಲಯವನ್ನು ರೋಗರಹಿತವಾಗಿಡುವುದಲ್ಲದೆ, ಉತ್ತಮ ಗುಣಮಟ್ಟದ ಗೂಡುಗಳನ್ನು ಬೆಳೆಯಲು ರೈತರ ಆಸಕ್ತಿ ಮತ್ತು ಉತ್ಸಾಹದ ಅವಶ್ಯಕತೆಯ ಅರಿವಿತ್ತು. ಆದರೆ ಈ ಎರಡು ಬಿತ್ತನೆ ವಲಯಗಳಲ್ಲಿಯ ರೈತರಲ್ಲಿ ನಿರುತ್ಸಾಹ ಕಾಣುತ್ತಿತ್ತು. ಮೈಸೂರು ವಲಯದಲ್ಲಿ ರೈತರಿಗೆ ಆಗುವ ಅನ್ಯಾಯವನ್ನು ಕೇಳುವವರೇ ಇಲ್ಲ. ಕಡಿಮೆ ಇಳುವರಿ ಬರುವ ಈ ತಳಿಯನ್ನು ೩೦ ದಿನಗಳು ಸಾಕಿದರೂ ಮಿಶ್ರ ತಳಿಗೆ ಬರುವ ಅರ್ಧದಷ್ಟು ವರಮಾನ ಬರುತ್ತಿರಲಿಲ್ಲ. ಸರಕಾರ ಬೇರೆ ತಳಿ ಬೆಳೆಯುವುದನ್ನು ನಿಷೇಧಿಸಿತ್ತು. ಆದರೆ ಯಾವ ಪರಿಹಾರವೂ ಇರಲಿಲ್ಲ. ಇದು ಇದೇ ರೀತಿ ಮುಂದುವರಿದರೆ ಈ ಕಸಬನ್ನೇ ರೈತ ಬಿಡಬೇಕಾಗುತ್ತದೆ ಎನ್ನುತ್ತಿದ್ದರು. ಕೆಲವು ಹಳ್ಳಿಗಳಲ್ಲಿ ಮಿಶ್ರ ತಳಿಯ ಬೆಳೆ ಇಡುತ್ತಿದ್ದರು. ಇದನ್ನು ಕುರಿತು ಇಲಾಖೆಯ ಅಧಿಕಾರಿಗಳೊಡನೆ, ವರಿಷ್ಠರೊಡನೆ ಚರ್ಚಿಸಿದಾಗಲೆಲ್ಲಾ "ಮೈಸೂರು ಬಿತ್ತನೆ ವಲಯದ ಬೆಳೆಗಾರರಿಗೆ ಅಪಾರ ಅನ್ಯಾಯವಾಗಿದೆ" ಎಂದು ಒಪ್ಪಿಕೊಳ್ಳುತ್ತಿದ್ದರು. ಆದರೆ ಅದನ್ನು ಸರಿ ಮಾಡುವ ಪ್ರಯತ್ನ ಕೂಡಾ ನಡೆದಿರಲಿಲ್ಲ. ಅಧಿಕಾರದ ಅಸ್ತ್ರವಿಲ್ಲದೆ ಈ ಉದ್ಯಮದಲ್ಲಿ ನಾನು ದುಡಿಯುತ್ತಿದ್ದ ಆ ಕಾಲದಲ್ಲಿ ಎಲ್ಲರ ಸಹಕಾರದಿಂದ ಏನಾದರೂ ಮಾಡಬೇಕಿತ್ತೇ ಹೊರತು ಸಂಘರ್ಷದಿಂದ ಸಾಧ್ಯವಿರಲಿಲ್ಲ. ಅದರಲ್ಲೂ ರಾಜಕೀಯವಾಗಿ ವಿರೋಧ ಪಕ್ಷದಲ್ಲಿದ್ದುಕೊಂಡು! ಬಿತ್ತನೆಗೆ ಇರುವ ಬೇಡಿಕೆಗಿಂತ ಎರಡರಷ್ಟು ಗೂಡು ಉತ್ಪತ್ತಿಯಾಗುತ್ತಿತ್ತು. ಬಿತ್ತನೆಗೆ ಮಾರಿ ಉಳಿದ ಗೂಡನ್ನು ನೂಲು ಬಿಚ್ಚಲು ಮಾರಬೇಕಾಗಿತ್ತು. ಒಂದು ಕೆ.ಜಿ. ಗೂಡನ್ನು ಸುಮಾರು ೮-೧೦ ರೂಪಾಯಿಗಳಿಗೆ ಮಾರಬೇಕಾಗಿತ್ತು ಎಂದರೆ ನಿಮಗೆ ತಿಳಿಯಬಹುದು. ಈ ಬೆಳೆಗಾರರಿಗೆ ಇದ್ದ ಚಿಂತಾಜನಕ ಸ್ಥಿತಿಗೆ ಕಾರಣ ಮೈಸೂರು ಬಿತ್ತನೆ ಪ್ರದೇಶದಲ್ಲಿ ನೂಲು ಬಿಚ್ಚುವವರು ಕಡಿಮೆ. ಅದರಿಂದಾಗಿ ಕೊಂಡುಕೊಳ್ಳುವವರ ಪೈಪೋಟಿ ಇರಲಿಲ್ಲ. ಸರಕಾರಿ ಫಿಲೇಚರ್‌ಗಳಲ್ಲಿ ಈ ಗೂಡಿನಿಂದ ನೂಲು ತೆಗೆಯಲು ಬರುವುದಿಲ್ಲ. ಕಾನೂನಿನ ಕಟ್ಟಪ್ಪಣೆಗೆ ಒಳಗಾಗಿರುವ ರೈತ ಬೇರೆ ಕಡೆ ತಾನು ಬೆಳೆದ ಗೂಡನ್ನು ಮಾರಲು ಅವಕಾಶವಿಲ್ಲ. ಹೀಗೀರುವಾಗ ಕೇಳಿದ ಬೆಲೆಗೆ ಮಾರಿ ರೈತ ಮನೆ ಸೇರಬೇಕಾಗಿತ್ತು. (ದಿ ಬೇಸಿಕ್ ಪ್ರಾಬ್ಲಮ್ ಆಫ್ ದಿ ಬೇಸಿಕ್ ಸೀಡ್ ಏರಿಯಾ ವಾಸ್ ಟೋಟಲಿ ನೆಗ್ಲೆಕ್ಟೆಡ್) ಅಧಿಕಾರಿಗಳೊಡನೆ ಚರ್ಚಿಸಿ, ಕಾನೂನಿಗೆ ವಿರುದ್ಧವಾಗಿ ಆದರೂ ರಾಮನಗರದ ಮಾರುಕಟ್ಟೆಗೆ ಮೈಸೂರು ತಳಿ ಗೂಡನ್ನು ತೆಗೆದುಕೊಂಡು ಹೋಗಿ ನೂಲು ತೆಗೆಯಲು ಮತ್ತು ಮಾರಲು ಅನುಮತಿ ನೀಡುವಂತೆ ಮಾಡಲಾಯಿತು. ಗುಣಮಟ್ಟದ ಮಿಶ್ರ ತಳಿ ಮೊಟ್ಟೆ ತಯಾರಿಸಲು ಮೂಲಭೂತವಾಗಿ ಬೇಕಾಗಿರುವ ಮೂಲ ತಳಿಗಳ ಬೆಳೆಯನ್ನು ಬೆಳೆಯಲು ಹಾಗೂ ಬೆಳೆಯುವ ಪ್ರದೇಶದಲ್ಲಿರುವ ಕೊರತೆಯನ್ನು ನಿವಾರಿಸುವ ಅನಿವಾರ್ಯತೆ ಇದ್ದರೂ ಈ ದಿಸೆಯಲ್ಲಿ ನಿರೂಪಿಸಿದ್ದ ಕಾರ್ಯಕ್ರಮಗಳು ಮತ್ತು ಬಿತ್ತನೆ ಗೂಡಿಗೆ ಕಾಲಕಾಲಕ್ಕೆ ನಿಗದಿ ಮಾಡುತ್ತಿದ್ದ ಬೆಲೆ ನಿರಾಶದಾಯಕವಾಗಿದ್ದು, ರೈತರಲ್ಲಿ ಸ್ಫೂರ್ತಿ ತರುವಂತೆ ಇರಲಿಲ್ಲ. ಈ ವಿಷಯವಾಗಿ

ಇಲಾಖೆಯ ಮುಖ್ಯಸ್ಥರೊಡನೆ ಚರ್ಚಿಸಿ,ಮಿಶ್ರ ತಳಿ ಜಾತಿ ಗೂಡುಗಳಿಗೆ ಬರುವ ಆದಾಯಕ್ಕಿಂತ ಕಡಿಮೆಯಾಗದಂತೆ ಬೆಲೆಯನ್ನು ನಿಗದಿಪಡಿಸುವಂತೆ ಒತ್ತಾಯಿಸಿ ಒಪ್ಪಿಸಲಾಯಿತು. ಬೆಲೆಯನ್ನು ಪರಿಸದಿದ್ದರೆ ಮಾರುಕಟ್ಟೆಗೆ ಗೂಡು ತೆಗೆದುಕೊಂಡು ಹೋಗಬೇಡಿ ಎಂದು ನಾನು ರೈತರಿಗೆ ತಿಳಿಸಿ ಹೊರಗಡೆಯೇ ಮಾರುತ್ತೇವೆ ಎಂದಾಗ ಕುಣಿಗಲ್‌ನಲ್ಲಿ ಸ್ಥಳೀಯ ಅಧಿಕಾರಿಗಳೊಡನೆ ಘರ್ಷಣೆಗೆ ಕೂಡಾ ನಿಲ್ಲಬೇಕಾಯಿತು. ಸಂಘದವರ ಒತ್ತಾಯಕ್ಕೆ ಮಣಿದು ಬಿತ್ತನೆ ಗೂಡಿಗೆ ಗುಣಮಟ್ಟ, ಇಳುವರಿ ಮತ್ತು ಮಿಶ್ರತಳಿಯ ಗೂಡಿನ ಬೆಲೆ ಆಧರಿಸಿ ಬೆಲೆ ನಿಗದಿ ಮಾಡುತ್ತಿದ್ದರೂ ಬಿತ್ತನೆಗೆ ಹೋಗದ ಗೂಡನ್ನು ನೂಲು ತೆಗೆಯಲು ಮಾರಿದಾಗ ರೈತ ನಷ್ಟ ಅನುಭವಿಸುವುದು ತಪ್ಪಲಿಲ್ಲ. ಅವಕಾಶ ಸಿಕ್ಕಿದಾಗಲೆಲ್ಲಾ ರೈತರು ಇದನ್ನು ತಪ್ಪಿಸಲು ಬಿತ್ತನೆ ವಲಯವನ್ನು ಕಡಿಮೆ ಮಾಡಿ ಎಂದು ಒತ್ತಾಯಿಸುತ್ತಿದ್ದರು. ಆದರೆ ಗುಣಮಟ್ಟದ ಗೂಡುಗಳನ್ನು ಆರಿಸಿಕೊಳ್ಳ ಬೇಕಾಗಿರುವುದರಿಂದ ಬೇಸಿಗೆಯಲ್ಲಿ ಗೂಡಿನ ಉತ್ಪನ್ನ ಕಡಿಮೆಯಾಗಿ ನಾಟಿ ಗೂಡಿಗೆ ಪರದಾಟವಾಗುವುದೆಂಬ ವಾದಗಳನ್ನು ಮುಂದಿಟ್ಟು, ಬಿತ್ತನೆ ವಲಯವನ್ನು ಕಡಿಮೆ ಮಾಡಲು ಇಲಾಖೆಯವರು ಒಪ್ಪುತ್ತಿರಲಿಲ್ಲ. ತಾರೀಖು ೨೯.೬.೧೯೭೮ ರಂದು ನಡೆದ ಸಂಘದ ಕಾರ್ಯಕಾರಿ ಸಭೆಯಲ್ಲಿ ಈ ವಿಷಯ ದೀರ್ಘವಾಗಿ ಚರ್ಚೆಯಾಗಿ ಆಗಿನ ನಿರ್ದೇಶಕರಾದ ಶ್ರೀ ಬಾಲಸುಬ್ರಹ್ಮಣ್ಯಂ ಅವರ ಎದುರಿಗೆ "ಮೈಸೂರು ಬಿತ್ತನೆ ವಲಯದಲ್ಲಿ ಬೆಳೆದ ಎಲ್ಲ ಗೂಡನ್ನು ಸರಕಾರಿ ಮಿಶ್ರ ತಳಿಯ ಗೂಡಿನ ಬೆಲೆಗಿಂತ ಶೇಕಡಾ ೫೦ ಬೆಲೆ ಹೆಚ್ಚಿಗೆ ಕೊಟ್ಟು ರೈತರಿಂದ ಕೊಂಡುಕೊಳ್ಳಬೇಕು ಮತ್ತು ಸರ್ಕಾರವೇ ವಿತರಣೆ ಮಾಡಿಕೊಳ್ಳಬೇಕು" ಎಂದು ನಿರ್ಣಯ ಮಾಡಿ ಸರಕಾರವನ್ನು ಒತ್ತಾಯಿಸಿದೆವು.

ಮತ್ತೆ ತಾರೀಖು ೬.೭.೧೯೭೮ರಂದು ಕುಣಿಗಲ್ ತಾಲ್ಲೂಕು ಅಭಿವೃದ್ಧಿ ಮಂಡಲಿಯ ಅಧ್ಯಕ್ಷರಾಗಿದ್ದು, ಸಾರ್ವಜನಿಕ ಸೇವೆಯಲ್ಲಿಯೇ ಎಲ್ಲವನ್ನು ಕಳೆದುಕೊಂಡ ದಿವಂಗತ ಶ್ರೀ ಸಿ. ಎಂ. ಗಂಗಣ್ಣನವರ (ಆಗ ಅವರು ಸದಸ್ಯರು) ಮೂಲಕ (೯ನೇ ವಿಷಯ) "ಮೈಸೂರು ಬಿತ್ತನೆ ವಲಯದಲ್ಲಿ ಬೆಳೆದ ಬಿತ್ತನೆ ಗೂಡನ್ನು ನೂಲು ಬಿಚ್ಚಲು ಮಾರುವಾಗ ಪ್ರತಿ ಸಾವಿರ ಗೂಡಿಗೆ ರೂ. ೫.೦೦ಕ್ಕೆ ಕಡಿಮೆ ಇಲ್ಲದಂತೆ ಬೋನಸ್ ಕೊಡಬೇಕೆಂದು ಸರ್ಕಾರವನ್ನು ಒತ್ತಾಯಿಸಲಾಯಿತು" ಎನ್ನುವ ವಿಷಯ ಪ್ರಸ್ತಾಪಿಸಿ ನಿರ್ಣಯ ಮಾಡಿಸಿದೆ. "ಬೋನಸ್" ಎನ್ನುವ ಪದದ ಸೃಷ್ಟಿ ರೇಷ್ಮೆ ವಲಯದಲ್ಲಿ ಅದೇ ಮೊದಲಿಗೆ ಆಯಿತೆಂದು ಕಾಣುತ್ತದೆ.

ಹೀಗೆ ಸಂಘದ ಮೂಲಕ, ಅಧಿಕಾರಿಗಳ ಮೂಲಕ, ರೈತರ ಮೂಲಕ ಸಿಕ್ಕಿದ ಎಲ್ಲಾ ಅವಕಾಶಗಳಲ್ಲಿಯೂ ನಾನು ಈ ವಿಷಯದಲ್ಲಿ ಸರ್ಕಾರದ ಮೇಲೆ ಒತ್ತಡ ತರುವ ಪ್ರಯತ್ನ ಮಾಡುತ್ತಲೇ ಇದ್ದೆ. ಇದಕ್ಕೆ ಸಂಬಂಧಪಟ್ಟ ಪತ್ರ ವ್ಯವಹಾರದ ಕಡತವೇ ಒಂದು ಹೊರೆ ಆಯಿತು. ನಾನಾಗಲೇ ತಿಳಿಸಿದಂತೆ ಅಧಿಕಾರದ ಅಸ್ತ್ರವಿಲ್ಲದ ನನ್ನ ಹೋರಾಟದಿಂದ ಏನೂ ಪ್ರಯೋಜನವಾಗಲಿಲ್ಲ. ಆದರೂ ನಾನು ಧೃತಿಗೆಡಲಿಲ್ಲ. ಸಾಧಿಸುವೆನು ಎಂಬ ಸಂಕಲ್ಪ ದೃಢವಾಯಿತು.

ಈ ವೇಳೆಯಲ್ಲಿ ಕೊಳ್ಳೇಗಾಲದ ಬಿ. ಬಸವಯ್ಯನವರು ಕೇಂದ್ರ ರೇಷ್ಮೆ ಮಂಡಲಿಯ ಅಧ್ಯಕ್ಷರಾಗಿದ್ದರು. ಕೇಂದ್ರದಲ್ಲಿ ಜನತಾ ಪಕ್ಷದ ಆಡಳಿತವಿದ್ದ ಸಮಯದಲ್ಲಿ ಇವರನ್ನು ಅಧ್ಯಕ್ಷರನ್ನಾಗಿ ಮಾಡಿದ್ದರು. ಸರ್ಕಾರ ಬದಲಾಗಿ, ಕಾಂಗ್ರೆಸ್ ಸರ್ಕಾರ ಬಂದರೂ ಶ್ರೀ ಬಸವಯ್ಯನವರು ಅಧ್ಯಕ್ಷರಾಗಿ ಮುಂದುವರಿದಿದ್ದರು. ತನ್ನನ್ನು ಅಧ್ಯಕ್ಷನಾಗಿ ಮಾಡಲಿಲ್ಲವೆಂದು ಶ್ರೀ ವೈ. ರಾಮಕೃಷ್ಣ ಅವರು ಆಗ ನಮ್ಮ ಪಕ್ಷವನ್ನೇ ಬಿಟ್ಟುಬಿಟ್ಟರು.

ನಾನೀಗಾಗಲೇ ತಿಳಿಸಿರುವಂತೆ ಪಶ್ಚಿಮ ಬಂಗಾಳದಿಂದ ಬಂದ ಹೂಜಿ ನೊಣಗಳ ಕಾಟ ಆಗ ತಾನೆ ಮೊದಲಾಗಿತ್ತು. ನಿಯಂತ್ರಣ ಕ್ರಮಗಳು ಕಾರ್ಯಗತವಾಗಿದ್ದುವು. ಸಂಶೋಧಕರು ಈ ನೊಣಗಳನ್ನು ನಿಯಂತ್ರಿಸಬಹುದೆ ಹೊರತು ನಿರ್ಮೂಲನ ಸಾಧ್ಯವಿಲ್ಲವೆಂದರು. ಇದರಿಂದಾಗಿ ಸರ್ಕಾರ ಕಡಿಮೆ ದರದಲ್ಲಿ ನೈಲಾನ್ ಪರದೆಗಳನ್ನು ಹಂಚುತ್ತಿತ್ತು. ಆಗ ನಾನು ಬಸವಯ್ಯನವರಿಗೆ ಮೈಸೂರು ಬಿತ್ತನೆ ವಲಯದ ರೈತರಿಗೆ ಕೇಂದ್ರ ರೇಷ್ಮೆ ಮಂಡಲಿಯವರಿಂದ ಪುಕ್ಕಟೆಯಾಗಿ ಸೊಳ್ಳೆ ಪರದೆ ಒದಗಿಸಿಕೊಡಬೇಕೆಂದು ಕೋರಿ ಪತ್ರ ಬರೆದೆ. ಒಪ್ಪಿದರು. ಇವುಗಳ ವಿತರಣೆಗಾಗಿ ಹುಲಿಯೂರು ದುರ್ಗದ ನಮ್ಮ ಪ್ರಧಾನರ ಸಿನಿಮಾ ಮಂದಿರದಲ್ಲಿ ಸಭೆ ಮುಗಿಸಿ ಶ್ರೀ ಬಸವಯ್ಯನವರು ಮೈಸೂರಿಗೆ ಹೋದರು. ನಾನು, ನಿರ್ದೇಶಕರಾದ ಶ್ರೀ ಮೀನಾಕ್ಷಿ ಸುಂದರಂ ಮತ್ತು ಆಗ ಕರ್ನಾಟಕ ಸರ್ಕಾರದ ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯ ಕಾರ್ಯದರ್ಶಿಗಳಾಗಿದ್ದು, ನಂತರ ಮೈಸೂರು ಅಸಿಟೇಟ್ ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಪ್ರಭಾಕರ್ ಅವರು ಕುಣಿಗಲ್‌ಗೆ ಬಂದರು. ಪ್ರವಾಸಿ ಮಂದಿರದಲ್ಲಿ ಊಟ ಮಾಡಿ ಲೋಕಾಭಿರಾಮವಾಗಿ ಮಾತನಾಡುವಾಗ ನನ್ನ ವಾದ ಶುರು ಮಾಡಿದೆ. ನನ್ನ ವಕೀಲಿ ಬುದ್ಧಿ ಆ ದಿನ ಚೆನ್ನಾಗಿಯೇ ಕೆಲಸ ಮಾಡಿತು. ನನ್ನ ವಾದ ಇಷ್ಟೆ: "ನಿರ್ದಿಷ್ಟ ತಳಿಯ ಗೂಡನ್ನು ಬೆಳೆಯಬೇಕೆಂದು ರೈತರನ್ನು ಕಾನೂನಿನಿಂದ ಗೊತ್ತು ಮಾಡಿ ಸರಕಾರದವರೆ ಮೊಟ್ಟೆ ಕೊಡುತ್ತಾರೆ. ಬೇರೆ ಕಡೆಯಿಂದ ಅವನು ಮೊಟ್ಟೆ ತರುವಂತಿಲ್ಲ. ಬೆಳೆದ ಗೂಡನ್ನು ಬೇರೆ ಕಡೆ ಮಾರುವಂತಿಲ್ಲ ಎಂದ ಮೇಲೆ ರೈತನಿಗೂ, ಸರಕಾರಕ್ಕೂ ಒಂದು ವಿಧವಾದ ಒಪ್ಪಂದ" ಆಗಿರುತ್ತದೆ. ಬೆಳೆಸಿದ ಗೂಡನ್ನು ಸರಕಾರ ಕೊಂಡುಕೊಳ್ಳಲೇಬೇಕು. ಇಲ್ಲವಾದರೆ ನಮಗೆ ಬೇಕಾದ ತಳಿಯನ್ನು ನಾವು ಬೆಳೆಯಲು ಬಿಟ್ಟುಬಿಡಿ. ಮೂಲ ತಳಿಯ ಬೆಳೆಗಾರನಿಗೆ ಹೆಚ್ಚಿನ ಆದಾಯ ಬರುವುದು ಸಹಜ. ಆದರೆ ಇಲ್ಲಿ ಅವನು ಕಾನೂನಿನ ಹೆಸರಿನಲ್ಲಿ ಶೋಷಣೆಗೆ ಗುರಿಯಾಗಿದ್ದಾನೆ. ಹೀಗೆ ಎಲ್ಲವನ್ನೂ ವಿವರಿಸಿದೆ. ಆಗಿರುವ ಅನ್ಯಾಯದ ಅರಿವಾದ ಅಧಿಕಾರಿಗಳು ಅಲ್ಲಿಯೇ ಇದ್ದ ಜಂಟಿ ನಿರ್ದೇಶಕರಿಗೆ (ಶ್ರೀ ಮುನಿವೆಂಕಟಪ್ಪನವರಿಗೆ) ವಿವರವಾದ ವರದಿ ಕಳುಹಿಸುವಂತೆ ತಿಳಿಸಿದರು. ಅಷ್ಟರಲ್ಲಿ ಕುಣಿಗಲ್ ಬಿತ್ತನೆ ವಲಯಕ್ಕೆ ಜಂಟಿ ನಿರ್ದೇಶಕರ ಹುದ್ದೆ ಸೃಷ್ಟಿಯಾಗಿ, ತುಮಕೂರಿನಲ್ಲಿ ಇರಬೇಕಾಗಿದ್ದ ಅದರ ಕೇಂದ್ರ ಸ್ಥಾನವನ್ನು ಕುಣಿಗಲ್‌ನ ಬಿಳಿ ದೇವಾಲಯದಲ್ಲಿ ಮಾಡಿಸುವಲ್ಲಿ ಯಶಸ್ವಿಯಾಗಿದ್ದೆ. ಬಿತ್ತನೆ ವಲಯದ ಜಂಟಿ ನಿರ್ದೇಶಕರಿಂದ ಇಲಾಖೆಗೆ ವರದಿಯೂ ಹೋಯಿತು. ನಿರ್ದೇಶಕರು, ಬೋನಸ್ ಕೊಡಬೇಕೆಂದು ಆ ಯೋಜನೆಯ ರೂಪ- ರೇಷೆಗಳನ್ನು ವಿವರಿಸಿ ಸರ್ಕಾರಕ್ಕೆ ಪ್ರಸ್ತಾವನೆ

ಕಳುಹಿಸಿದರು. ಈ ವಿಷಯದಲ್ಲಿ ಕುಣಿಗಲ್‌ನಲ್ಲಿ ನನ್ನ ಮಾತುಕತೆಯನ್ನು ಮನವರಿಕೆ ಮಾಡಿಕೊಂಡಿದ್ದ ಕಾರ್ಯದರ್ಶಿಯವರು ಒಪ್ಪಿದರು. ಆದರೆ ಸರ್ಕಾರದ ಒಪ್ಪಿಗೆ ದೊರೆಯಲಿಲ್ಲ. ಬಹುಶಃ ಮಾಮೂಲಾಗಿ ಇಂತಹ ಎಲ್ಲಾ ಕಡತಗಳಂತೆ ಈ ಕಡತವು ಹಣಕಾಸು ಇಲಾಖೆಯಲ್ಲಿ ಕೊಳೆಯುತ್ತಿತ್ತೆಂದು ಕಾಣುತ್ತದೆ. ಕೇಳುವವರು ಇರಲಿಲ್ಲ. ಆಗ ಹುಲಿಯೂರು ದುರ್ಗದ ಶಾಸಕರಾಗಿದ್ದ ಶ್ರೀ ಡಿ. ಟಿ. ಮಾಯಣ್ಣ ಅವರಿಂದ ವಿಧಾನಸಭೆಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿ ಪ್ರಶ್ನೆ ಹಾಕಿಸಿದೆ. ಆಗ ಶ್ರೀ. ವೈ. ರಾಮಕೃಷ್ಣ ಅವರು ರೇಷ್ಮೆ ಖಾತೆ ಮಂತ್ರಿಯಾಗಿದ್ದರು. ಆರ್. ಗುಂಡೂರಾಯರು ಮುಖ್ಯಮಂತ್ರಿಗಳಾಗಿದ್ದರು. ವಿಧಾನಸಭೆಯಲ್ಲಿ ಈ ಪ್ರಶ್ನೆ ಬಂದಾಗ ಸಚಿವರು "ಈ ಪ್ರಸ್ತಾವನೆ ಸರ್ಕಾರಕ್ಕೆ ಬಂದಿರುವುದು ನಿಜ. ಆದಷ್ಟು ಬೇಗ ಪರಿಶೀಲಿಸಿ ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದು" ಎಂದು ಮಾಮೂಲಿ ಉತ್ತರ ಕೊಟ್ಟರು. ಪಾಪ, ಮೆತ್ತನೆಯ ನಮ್ಮ ಶ್ರೀ ಮಾಯಣ್ಣನವರು ಸುಮ್ಮನಾಗುವುದರಲ್ಲಿದ್ದರು. ಆದರೆ ಆಗ ವಿರೋಧ ಪಕ್ಷದ ನಾಯಕರಾಗಿದ್ದ ಶ್ರೀ ಎಚ್. ಡಿ. ದೇವೇಗೌಡ ಅವರಿಗೆ ನಾನು ಹಿಂದಿನ ದಿನವೇ ಈ ವಿಷಯವನ್ನು ತಿಳಿಸಿದ್ದರಿಂದ ಅವರು "ಯಾವಾಗ ಸ್ವಾಮಿ ನೀವು ಪರಿಶೀಲನೆ ಮಾಡುವುದು, ಎಷ್ಟು ದಿನದಿಂದ ಕಡತ ಸರ್ಕಾರದ ಮುಂದಿದೆ, ಆದಷ್ಟು ಬೇಗ ಎಂದರೆ ಎಷ್ಟು ದಿನದಲ್ಲಿ ತೀರ್ಮಾನ ತೆಗೆದುಕೊಳ್ಳುತ್ತೀರಿ?" ಎಂದು ಗಲಾಟೆ ಮಾಡಿದಾಗ ಮಾನ್ಯ ಮುಖ್ಯಮಂತ್ರಿಗಳು "ಗಲಾಟೆ ಬೇಡ ಬಿಡಿ ದೇವೇಗೌಡರೆ, ಇಲಾಖೆಯವರು ಒಪ್ಪಿದರೆ ರೈತರಿಗೆ ಈ ಪರಿಹಾರ ಕೊಡೋಣ" ಎಂದರು.

ಅಂದು ಯಾವುದೋ ಹಬ್ಬದ ರಜೆ ದಿನ (ಜುಲೈ ೧೯೮೨), ನಾನು ಮಧ್ಯಾಹ್ನ ನಮ್ಮ ಮನೆಯಲ್ಲಿ ಸಿಹಿ ಊಟ ಮಾಡುತ್ತಿದ್ದೆ. ಬಿಳಿ ದೇವಾಲಯದ ರೇಷ್ಮೆ ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದ ಟಿ. ಎಸ್. ನಾಗರಾಜು ನನಗೆ ಫೋನು ಮಾಡಿ "ಸರ್ಕಾರಿ ಮೈಸೂರು ಬಿತ್ತನೆ ವಲಯದ ಬೆಳೆಗಾರರು ಬೆಳೆಯುವ, ನೂಲು ತೆಗೆಯುವುದಕ್ಕಾಗಿ ಮಾರುವ ಬಿತ್ತನೆ ಗೂಡಿಗೆ ಕೆ.ಜಿ. ಒಂದಕ್ಕೆ ೫.೦೦ ರೂಪಾಯಿ ಬೋನಸ್ ಕೊಡಲು ಆಜ್ಞೆ ಹೊರಡಿಸಿದೆ" ಎಂದು ತಿಳಿಸಿದರು. ನನಗಾಗ ಸಂತೋಷವಾಯಿತು ಎಂದು ಬೇರೆ ಹೇಳಬೇಕಾಗಿಲ್ಲ. ತಾರೀಖು ೩೧.೭.೧೯೮೨ರಂದು ಈ ನನ್ನ ಸಾಧನೆಗೆ ನೆರವಾದವರೆಲ್ಲರಿಗೂ ಪತ್ರ ಬರೆದೆ. ಸರ್ಕಾರಕ್ಕೆ, ಇಲಾಖೆಗೆ ಅಭಿನಂದಿಸಿದೆ. ಈ ಯೋಜನೆ ಪ್ರಕಾರ ಕುಣಿಗಲ್-ಹೆಬ್ಬೂರ್-ಮಾಗಡಿ ಪ್ರದೇಶವನ್ನು ಒಳಗೊಂಡ ಈ ನಮ್ಮ ಬೆಳೆಗಾರರಿಗೆ ಈಗ ಸುಮಾರು ಒಂದೂವರೆ ಕೋಟಿ ಹಣ ಬರುತ್ತಿದೆ. ನನ್ನ ಸಾರ್ವಜನಿಕ ಜೀವನದ ದೊಡ್ಡ ಸಾಧನೆ ಇದೆಂದು ನನ್ನ ನಂಬಿಕೆ.

ಈ ಪರಿಹಾರ ಸಂಪೂರ್ಣವಾಗಿ ಮೈಸೂರು ತಳಿಗೂ ಮಿಶ್ರ ತಳಿ ಗೂಡಿಗೂ ಇರುವ ಬೆಲೆಯ ಅಂತರವನ್ನು ಮುಚ್ಚಲು ಸಾಧ್ಯವಾಗದಿದ್ದರೂ ಈ ದೆಸೆಯಲ್ಲಿ ಇದೊಂದು ಮುಖ್ಯವಾದ ಹೆಜ್ಜೆ ಎಂದು ಹೇಳಬಹುದು. ರೈತರಿಗೂ ಸ್ವಲ್ಪ ಸಮಾಧಾನವಾಯಿತು. ನಾನು ಮೈಸೂರು ರೇಷ್ಮೆ ಸಂಘದ ಅಧ್ಯಕ್ಷನಾದ್ದರಿಂದ ಹಾಗೂ ಸಂಘದ ಪದಾಧಿಕಾರಿಗಳ ಮತ್ತು ಸದಸ್ಯರುಗಳ ಬೆಂಬಲದಿಂದ ಹಾಗೂ ಇಲಾಖೆಯ, ಸರ್ಕಾರದ ಅಧಿಕಾರಿಗಳ ವರಿಷ್ಠರ ಸಹಾನುಭೂತಿ ಮತ್ತು ಸಹಾಯದಿಂದ ಇದು ಸಾಧ್ಯವಾಯಿತು. ಇದರ ಫಲವಾಗಿ ಮೈಸೂರು

ಬಿತ್ತನೆ ವಲಯದ ಬೆಳೆಗಾರರು ನನ್ನನ್ನು "ಬೋನಸ್ ರಾಮಯ್ಯ" ಎಂದು ಕರೆಯಲು ಮೊದಲು ಮಾಡಿದರು.

ವ್ಯವಸ್ಥಿತ ಸಂಘಟನೆಯಿಂದ ರೈತರುಗಳು, ಸಮಸ್ಯೆಗಳನ್ನು ಪರಿಣಾಮಕಾರಿಯಾಗಿ ಸರ್ಕಾರದ ಮಟ್ಟದಲ್ಲಿ ಪರಿಹರಿಸಿಕೊಳ್ಳಲು ಸಾಧ್ಯ ಎಂಬುದಕ್ಕೆ ಇದೊಂದು ನಿದರ್ಶನವೆಂದು ಹೇಳಬಹುದು. ಸರ್ಕಾರವೂ ಇಂತಹ ಸಂಘಟನೆಗಳಿಗೆ ಉತ್ತೇಜನ ಕೊಡುವುದರಿಂದ ಪ್ರಜಾಪ್ರಭುತ್ವದ ತತ್ವಗಳನ್ನು ಬಲಗೊಳಿಸಬಹುದೆಂದು ನನ್ನ ನಂಬಿಕೆ.

ಈ ಮೈಸೂರು ತಳಿ ಕಡಿಮೆ ಇಳುವರಿ ಕೊಡುವ ಬಹುಸಂತತಿ ತಳಿ. ಈ ತಳಿಯನ್ನು ಶತಮಾನಗಳಿಂದ ಸಾಕುತ್ತಾ ಬಂದಿರುವುದರಿಂದ ಇದು ಬಹಳ ಶಕ್ತಿ ಹೀನವಾಗಿದೆ ಎಂದೂ ಇದರ ಬದಲು ಬಹು ಸಂತತಿಯ ಉತ್ಪಾದಕ ಶಕ್ತಿಯುಳ್ಳ ಹೊಸ ತಳಿ ಒಂದನ್ನು ಕಂಡುಹಿಡಿಯಲು ಮೈಸೂರು ಸಂಶೋಧನಾ ಕೇಂದ್ರ, ವಿಶ್ವವಿದ್ಯಾಲಯದಲ್ಲಿ ಇರುವ ರೇಷ್ಮೆ ಪರಿಣತರು ಹಾಗೂ ಇಲಾಖೆಯ ಕೆಲವು ಆಸಕ್ತ ಅಧಿಕಾರಿಗಳು ಸತತವಾಗಿ ಪ್ರಯತ್ನ ಪಡುತ್ತಿದ್ದಾರೆ. ಇಂತಹ ಪ್ರಯತ್ನ ಮೊದಲಿಗೆ ಸುಮಾರು ಎರಡು- ಮೂರು ದಶಕಗಳ ಹಿಂದೆಯೇ ಆಗಿದೆ. ಆಗ "ಮೈಸೂರು ರಾಣಿ" ಎಂಬ ತಳಿಯನ್ನು ಪ್ರಚಾರಪಡಿಸಲು ಕ್ಷೇತ್ರ ಪ್ರಯೋಗಕ್ಕೋಸ್ಕರ ರೈತರುಗಳಿಗೆ ಈ ತಳಿಯ ಮೊಟ್ಟೆಯನ್ನು ಹಂಚಲಾಯಿತು. ಆದರೆ ಈ ತಳಿಗಳು ಬೈವೊಲ್ಟಿನ್ ಸಾಕುವಷ್ಟೇ ಕಷ್ಟಕರವಾಗಿದ್ದು ಸಂಪೂರ್ಣವಾಗಿ ಬಹುಸಂತತಿಯ ಗುಣವನ್ನೊಳಗೊಂಡಿಲ್ಲವಾದ್ದರಿಂದ ಮೊಟ್ಟೆ ತಯಾರಿಕೆಯಲ್ಲಿ ತೊಂದರೆಯಾಗಿ ಕೈಬಿಡಲಾಯಿತು. ಸುಮಾರು ೧೯೭೭ರಲ್ಲಿ ಮೈಸೂರು ಸಂಶೋಧನಾ ಕೇಂದ್ರದವರು ಸಂಸ್ಕರಿಸಿದ ಇನ್ನೊಂದು ಬಹುಸಂತತಿ ತಳಿಯನ್ನು ಕ್ಷೇತ್ರ ಪ್ರಯೋಗಕ್ಕಾಗಿ ಬಿಡಲಾಯಿತು. ಇದರ ಹೆಸರು "ಹೊಸ ಮೈಸೂರು ತಳಿ" ಇಲಾಖೆಯ ಆಗಿನ ನಿರ್ದೇಶಕರ "ಮಾಡು ಅಥವಾ ಮಡಿ" ಎಂಬ ಕಟು ಆದೇಶದ ಮೇಲೆ ಮೂಲ ಮೈಸೂರು ತಳಿಯನ್ನು ಹೊಸ ಮೈಸೂರು ತಳಿಯಿಂದ ಬದಲಾಯಿಸುವುದಕ್ಕೆ ಭಯಮಿಶ್ರಿತ ಪ್ರಯತ್ನ ಮಾಡಿದಾಗ್ಯೂ ರೈತರುಗಳು ಈ ತಳಿಯನ್ನು ಬೆಳೆಯಲು ಮುಂದೆ ಬರಲಿಲ್ಲ. ಕಾರಣ ಈ ತಳಿ ಬಹಳ ಸೊಪ್ಪು ತಿನ್ನುತ್ತದೆ, ಕಡಿಮೆ ಗೂಡು ಕಟ್ಟುತ್ತದೆ ಮತ್ತು ಬೆಳೆಗಳು ನಷ್ಟವಾಗುವ ಸಂಭವವೇ ಹೆಚ್ಚು. ಆದರೂ ಇಲಾಖೆಯವರೇ ಹೊಸ ಹೊಸ ರೈತರನ್ನು ಹಿಡಿದು ಅವರಿಗೆ ಇಲ್ಲದ ಆಸೆ ತೋರಿಸಿ ಈ ತಳಿಯನ್ನು ಪ್ರಚಾರ ಪಡಿಸಲು ಪ್ರಯತ್ನವನ್ನು ಮುಂದುವರಿಸಿದರು. ಕ್ಷೇತ್ರದಲ್ಲಿ ಇದರ ನಿಜವಾದ ಚರ್ಯೆಯನ್ನು ಹೇಳಿದರೆ ಸಂಶೋಧನಾ ಸಂಸ್ಥೆಯವರು ಒಪ್ಪುತ್ತಿರಲಿಲ್ಲ. ಸಂಶೋಧನಾ ಸಂಸ್ಥೆಯವರ ವಾಕ್ಯವೇ ಸತ್ಯವೆಂದು ತಿಳಿದಿದ್ದ ಆಗಿನ ಇಲಾಖಾ ಮುಖ್ಯಸ್ಥರು ಇಲಾಖೆಯವರು ಸುಳ್ಳು ಹೇಳುತ್ತಾರೆಂದು ಭಾವಿಸಿ ಅವರು ಶಿಕ್ಷೆಗೆ ಅರ್ಹರೆಂಬ ದಿಢೀರ್ ತೀರ್ಮಾನಕ್ಕೆ ಬರುತ್ತಾರೆಂಬ ಭಯ ಎಲ್ಲರಲ್ಲೂ ಇತ್ತು.

ಸರಿ, ಹಾಗೂ-ಹೀಗೂ ಮಾಡಿ ಒಂದು ಸಾರಿ ಲಕ್ಷಾಂತರ ಹೊಸ ಮೈಸೂರು ತಳಿಯ ಗೂಡನ್ನು ಬೆಳೆಸಿದರು. ಬೆಳೆಸಿದರು ಸರಿ, ಕೊಂಡುಕೊಳ್ಳುವವರು ಯಾರು? ಕಾರಣ ಈ ಗೂಡಿನಲ್ಲಿ ಚಿಟ್ಟೆಗಳು ಸರಿಯಾದ ಪ್ರಮಾಣದಲ್ಲಿ ಬರುತ್ತಿರಲಿಲ್ಲ. ಮತ್ತು ತಯಾರಿಸಿದ

ಮೊಟ್ಟೆಗಳಲ್ಲಿ ಬೈವೋಲ್ಟಿನ್ ಮತ್ತು ಬಹುಸಂತತಿ ಮೊಟ್ಟೆಗಳ ಬೆರಕೆ ಇದ್ದು ಸರಿಯಾಗಿ ಚಾಕಿ ಆಗುತ್ತಿರಲಿಲ್ಲ. ಈ ತಳಿಯಿಂದ ತಯಾರಿಸಿದ ಮಿಶ್ರ ತಳಿ ಮೊಟ್ಟೆಯನ್ನು ಬೆಳೆಗಾರರು ಇಷ್ಟಪಡುತ್ತಿರಲಿಲ್ಲ. ಬೆಳೆದ ಗೂಡನ್ನು ರಾಮನಗರದ ಮಾರುಕಟ್ಟೆಯಲ್ಲಿ ಮಾರುತ್ತಿದ್ದರು. ರೈತರಿಗೆ ನಷ್ಟವಾಯಿತು. ಬರುಬರುತ್ತಾ ಈ ತಳಿಯನ್ನು ಕೃಷಿ ಕ್ಷೇತ್ರಗಳಲ್ಲಿ ಸಂತಾನಾಭಿವೃದ್ಧಿ ಮಾಡುವುದು ಕಷ್ಟವಾಗಿ, ಕೈಬಿಡಲಾಯಿತು. ಮಾಗಡಿ ತಾಲ್ಲೂಕು ಗವಿನಾಗಮಂಗಲದ ಗಂಗಬೋರಯ್ಯ ಎನ್ನುವ ರೈತ ಇತ್ತೀಚಿನವರೆಗೆ ಈ ತಳಿ ಬೆಳೆಯುತ್ತಿದ್ದ. ಇತ್ತೀಚೆಗೆ ಅವನೂ ನಿಲ್ಲಿಸಿರಬಹುದು. ಇಷ್ಟೆಲ್ಲಾ ಆದರೂ ಈಗಿರುವ ಮೈಸೂರು ತಳಿಯನ್ನು ಬದಲಾಯಿಸಿ ದೃಢವಾದ ಆದರೆ ಹೆಚ್ಚು ಇಳುವರಿ ಕೊಡುವ ತಳಿ ಒಂದನ್ನು ಸಂಸ್ಕರಿಸುವುದರಲ್ಲಿ ಸಂಶೋಧನಾ ಕೇಂದ್ರವಾಗಲಿ, ವಿಶ್ವವಿದ್ಯಾನಿಲಯದ ವಿಜ್ಞಾನಿಗಳಾಗಲಿ ಯಶಸ್ವಿಯಾಗಿರಲಿಲ್ಲ.

ಕರ್ನಾಟಕ ರೇಷ್ಮೆ ಕೃಷಿಯಲ್ಲಿ ಪ್ರಚಲಿತವಿರುವ ಮೈಸೂರು ಬಿತ್ತನೆ ತಳಿ ಮತ್ತು ಬೈವೋಲ್ಟಿನ್ ತಳಿಗಳ ಆಗಿನ ಸ್ಥಿತಿಯನ್ನು ತಿಳಿಸಿದ ನಾನು ಮತ್ತೊಂದು ಪ್ರಮುಖ ತಳಿಯಾದ ಸೀನಿಚಿ ತಳಿಯ ಬಗ್ಗೆ ಈಗಾಗಲೇ ಸಂಕ್ಷಿಪ್ತವಾಗಿ ಪ್ರಸ್ತಾಪಿಸಿದ್ದೇನೆ. ಕರ್ನಾಟಕ ರೇಷ್ಮೆ ಸಂಘದ ಚಟುವಟಿಕೆಗಳಲ್ಲಿ ಕೋಲಾರದವರನ್ನು ಬಿಟ್ಟರೆ ಮೈಸೂರಿನವರದೇ ಅಧಿಪತ್ಯ. ಕೊಳ್ಳೆಗಾಲದ ಹಾಲಹಳ್ಳಿ ಡಿ. ಬಸವಣ್ಣ, ಕುರುಬೂರಿನ ಎಚ್.ಎಂ ಗುರುಮಲ್ಲ ದೇವರು, ಬಡನಗುಪ್ಪೆಯ ಶ್ರೀ ಎಸ್. ಪುಟ್ಟಸ್ವಾಮಿ, ತಗಡೂರಿನ ಬಿ. ಎಂ. ಪುಟ್ಟಸ್ವಾಮಯ್ಯ ಅವರು ನನಗೆ ಸಹಕರಿಸಿದರು. ಇವರೊಡನೆ ಮೈಸೂರು ಜಿಲ್ಲೆಯಲ್ಲಿ ಸಂಚರಿಸಿದಾಗ ನನಗೆ ಸೀನಿಚಿ ತಳಿಯ ಬಗ್ಗೆ ಪೂರ್ಣ ಮಾಹಿತಿ ಸಿಕ್ಕಿತು.

ಆಶ್ಚರ್ಯದ ಸಂಗತಿಯೆಂದರೆ ಈ ತಳಿಯನ್ನು ಇಲಾಖೆಯವರೇ ಮೊದಲ ಬಾರಿಗೆ ಕೈಗಾರಿಕೆಗೆ ಬೇಕಾಗುವ ಗೂಡು ಬೆಳೆಯಲು ಪ್ರಚಾರಪಡಿಸಿದ್ದರು. ಆ ಕಾಲಕ್ಕೆ ಅದೊಂದು ಕ್ರಾಂತಿಕಾರಕ ಬೆಳವಣಿಗೆ, ಏಕೆಂದರೆ ಮೈಸೂರು ತಳಿಯ ಗೂಡಿನ ಇಳುವರಿ ತುಂಬಾ ಕಡಿಮೆ ಇದ್ದು, ಒಂದು ಕೆ.ಜಿ. ರೇಷ್ಮೆ ತೆಗೆಯಲು ಸುಮಾರು ೨೦ ರಿಂದ ೨೨ ಕೆ.ಜಿ. ಗೂಡು ಬೇಕಾಗಿತ್ತು. ಅದೂ ಅಲ್ಲದೆ ಮೈಸೂರು ತಳಿಯ ಗೂಡುಗಳನ್ನು ಆ ಕಾಲಕ್ಕೆ ಆಧುನಿಕ ನೂಲು ಬಿಚ್ಚುವ ಡೊಮೆಸ್ಟಿಕ್ ಅಥವಾ ಫಿಲೇಚರ್ ಬೇಸಿನ್‌ಗಳಲ್ಲಿ ಲಾಭದಾಯಕವಾಗಿ ಉಪಯೋಗಿಸಲು ಆಗುತ್ತಿರಲಿಲ್ಲ. ಮೈಸೂರು ಸೀನಿಚಿ ಮಿಶ್ರ ತಳಿಯ ಗೂಡಿನ ಇಳುವರಿ ಮತ್ತು ಗುಣಮಟ್ಟ ಜಾಸ್ತಿಯಾಗಿದ್ದು, ಆಧುನಿಕ ನೂಲು ತೆಗೆಯುವ ಬೇಸಿನ್‌ಗಳಲ್ಲಿ ಸುಮಾರು ೧೬ ರಿಂದ ೧೮ ಕೆ.ಜಿ. ಗೂಡಿಗೆ ಒಂದು ಕೆ.ಜಿ. ರೇಷ್ಮೆ ತೆಗೆಯಲು ಸಾಧ್ಯವಾಯಿತು. ಆದರೂ ಈ ಮಿಶ್ರ ತಳಿಯನ್ನು ವ್ಯಾಪಕವಾಗಿ ಕ್ಷೇತ್ರದಲ್ಲಿ ಹರಡಲು ಒಂದು ದಶಕವೇ ಬೇಕಾಯಿತು ಎನ್ನುತ್ತಾರೆ ಹಿರಿಯರು. ಆಮೇಲೆ ಎಲ್ಲರೂ ಈ ತಳಿಯನ್ನು ಸ್ವಾಗತಿಸಿದರು. ಮುಂದೆ ಮೈಸೂರು ಬೈವೋಲ್ಟಿನ್ ಮಿಶ್ರ ತಳಿಯು ಪ್ರಚಾರಕ್ಕೆ ಬಂದು, ಹೆಚ್ಚು ಇಳುವರಿ ಕೊಡುವ ಈ ತಳಿಯು ಕೇವಲ ೮ ರಿಂದ ೧೦ ಕೆ.ಜಿ. ಗೂಡಿನಿಂದ ಒಂದು ಕೆ.ಜಿ. ರೇಷ್ಮೆ ತೆಗೆಯುವಂತಾಯಿತು. ಆದಾಯವು ಹೆಚ್ಚಾಯಿತು. ಕರ್ನಾಟಕದ ಬೇರೆ ಪ್ರದೇಶಗಳಲ್ಲಿ

ಮೈಸೂರು ಬೈವೋಲ್ಟಿನ್ ಮಿಶ್ರ ತಳಿ ವ್ಯಾಪಕವಾಗಿ ಪ್ರಚಾರಕ್ಕೆ ಬಂದು ಉದ್ಯಮದ ಎಲ್ಲರೂ ಸ್ವಾಗತಿಸಿದರೂ ಮೈಸೂರು ಜಿಲ್ಲೆಯಲ್ಲಿ ಮಾತ್ರ ಬಹಳ ಆದಾಯ ಬರುವ ಹೊಸ ಮಿಶ್ರ ತಳಿಯನ್ನು ಬಿಟ್ಟು ಕಡಿಮೆ ಆದಾಯದ ಹಳೆ ತಳಿಯನ್ನೇ ಬೆಳೆಯುತ್ತಿದ್ದಾರೆ. ಇದರಿಂದ ಅಲ್ಲಿ ಯ ಬೆಳೆಗಾರರ ಆರ್ಥಿಕ ಸ್ಥಿತಿ ಕೆಳಮಟ್ಟದಲ್ಲಿಯೇ ಉಳಿಯಿತು. ಅಲ್ಲದೆ ಕರ್ನಾಟಕ ರೇಷ್ಮೆ ಕೃಷಿಯಲ್ಲಿ ಪ್ರಮುಖವಾದ ಮೈಸೂರು ಜಿಲ್ಲೆಯಲ್ಲಿನ ಈ ಹಿನ್ನಡೆಯಿಂದಾಗಿ ರಾಜ್ಯದಲ್ಲಿ ರೇಷ್ಮೆ ಉತ್ಪಾದನೆಗೂ ಕೊಡಲಿ ಪೆಟ್ಟು ಬಿದ್ದಂತಾಯಿತು. ಇದನ್ನು ಗಮನಿಸಿದ ಇಲಾಖೆ ೧೯೭೬ ರಲ್ಲಿ ಸೀನಿಚಿ ತಳಿಯನ್ನು ತೊಡೆದುಹಾಕಲು ನಿರ್ಧರಿಸಿ ಮೈಸೂರು ಸೀನಿಚಿ ಮಿಶ್ರತಳಿಯ ಮೊಟ್ಟೆ ತಯಾರಿಕೆಯನ್ನು ಮತ್ತು ಅವುಗಳ ವಿತರಣೆಯನ್ನು ಹಾಗೂ ಕೃಷಿ ಕ್ಷೇತ್ರಗಳಲ್ಲಿ ಸೀನಿಚಿ ತಳಿ ಸಾಕುವುದನ್ನು ರದ್ದು ಮಾಡಿದರು. ಕಾನೂನು ಪ್ರಕಾರ ಮೂಲ ಬಿತ್ತನೆ ಮೊಟ್ಟೆಗಳು ಇಲಾಖೆಯಿಂದಲೇ ಆಗಬೇಕಾಗಿದ್ದುದರಿಂದ ಈ ತಳಿಯ ಮೊಟ್ಟೆಗಳ ಸರಬರಾಜು ನಿಲ್ಲಿಸಿದರು. ಇದರಿಂದ ಸೀನಿಚಿ ತಳಿಯ ಗೂಡಿನ ಉತ್ಪಾದನೆಯೇ ಇಲ್ಲದಂತಾಗುತ್ತದೆ ಮತ್ತು ಈ ತಳಿಯನ್ನು ಉಪಯೋಗಿಸಿ ಮಿಶ್ರ ಮೊಟ್ಟೆ ತಯಾರು ಮಾಡುವುದು ನಿಲ್ಲುತ್ತದೆ ಎಂದು ತಪ್ಪಾಗಿ ಭಾವಿಸಿದರು. ಈ ಪ್ರದೇಶದ ಖಾಸಗಿ ಮೊಟ್ಟೆ ತಯಾರಕರು ವಿಧಿ ಇಲ್ಲದೆ ಮೈಸೂರು ಬೈವೋಲ್ಟಿನ್ ಮಿಶ್ರ ತಳಿ ಮೊಟ್ಟೆ ತಯಾರಿಸಿ ಹಂಚಬೇಕಾಗುತ್ತದೆ ಮತ್ತು ಬೆಳೆಗಾರರು ವಿಧಿ ಇಲ್ಲದೆ ಬೆಳೆಯಬೇಕಾಗುತ್ತದೆಂದು ಇಲಾಖೆಯವರು ಭಾವಿಸಿದರು. ಈ ವಿಷಯಗಳನ್ನು ನಾನು ಮೈಸೂರು ಜಿಲ್ಲೆ ಪ್ರವಾಸ ಮಾಡುವಾಗ ಆಗಲೇ ವಯಸ್ಸಾಗಿದ್ದು ಹಾಸಿಗೆ ಹಿಡಿದಿದ್ದ ಹಿರಿಯರಾದ ಶ್ರೀ ಬದನಗುಪ್ಪೆ ಎಸ್. ಪುಟ್ಟಸ್ವಾಮಯ್ಯನವರು ಬಹಳ ವಿವರವಾಗಿ ಇಂದಿಗೂ ನನ್ನ ಮನಸ್ಸಿನಲ್ಲಿ ಉಳಿಯುವಷ್ಟು ಸ್ವಾರಸ್ಯಕರವಾಗಿ ತಿಳಿಸಿದ್ದರು. ಮೇಲುನೋಟಕ್ಕೆ ಸೀನಿಚಿಯನ್ನು ತೊಡೆದುಹಾಕಲು ಮಾಡಿದ ಪ್ರಯತ್ನ ಕ್ರಾಂತಿಕಾರಕ ಯೋಚನೆ ಎಂದು ಮತ್ತು ಈ ಕಾರ್ಯಕ್ರಮಗಳು ರೇಷ್ಮೆ ಕೈಗಾರಿಕೆಯ ತೀವ್ರ ಪ್ರಗತಿಗೆ ಅವಶ್ಯಕವೆಂದು ಹೊಸದರಲ್ಲಿ ನಂಬಿದ್ದ ನನಗೆ ಮೈಸೂರು ಜಿಲ್ಲೆಯಲ್ಲಿ ಪ್ರವಾಸ ಮಾಡಿದಾಗ ಅಲ್ಲಿಯ ಹಿರಿಯ ಬೆಳೆಗಾರರೊಡನೆ ಚರ್ಚಿಸಿದಾಗ ಅವರ ಕಡ್ಡಿ ತೋಟಗಳನ್ನು ನೋಡಿದಾಗ ವಾಸ್ತವಿಕತೆಯೇ ಬೇರೆ ಆಗಿರುವುದು ತಿಳಿಯಿತು. ಈ ಜಿಲ್ಲೆಯ ಅದರಲ್ಲಿಯೂ ಚಾಮರಾಜನಗರದ ಬೆಳೆಗಾರರು "ಈಗಲೂ ಈ ತಳಿಯ ಮೊಟ್ಟೆಗಳೆ ನಮಗೆ ಉತ್ತಮ ಬೆಳೆ ಕೊಡುತ್ತವೆ" ಎನ್ನುವ ವಾದದಲ್ಲಿ ತಿರುಳು ಇದೆ ಎನ್ನಿಸಿತು. ಕಾನೂನು ಮಾಡುವುದರಿಂದ ಏನನ್ನೂ ಸಾಧಿಸಲು ಸಾಧ್ಯವಿಲ್ಲ. ಇದರಿಂದಾಗುವ ಸಾಧನೆ, ಈ ಕಾನೂನುಗಳನ್ನು ಜಾರಿಗೆ ತರುವವರಿಗೆ ಭ್ರಷ್ಟತನಕ್ಕೆ ಅನುಕೂಲ ಮಾಡಿಕೊಟ್ಟಂತೆ ಆಗುತ್ತದೆ ಎನ್ನುವುದು ಈಗಿನ ವ್ಯವಸ್ಥೆಯನ್ನು ನೋಡಿದ ನನ್ನ ಅಭಿಪ್ರಾಯ. ನಾನು ಈಗಾಗಲೇ ಹೇಳಿರುವಂತೆ ಈ ತಳಿಯನ್ನು ತೊಡೆದುಹಾಕಲು ಮಾಡಿದ ಕಾನೂನಿಂದಾಗಲಿ, ಇಲಾಖೆಯವರು ಮಾಡಿದ ಪ್ರಯತ್ನಗಳಾಗಲಿ ಇಂದಿಗೂ ಸಫಲವಾಗಿಲ್ಲ. ನಾಟಿ ಕಡ್ಡಿ ಸೀನಿಚಿ ತಳಿ ಈಗಲೂ ಅಲ್ಲಿ ಉಳಿದಿವೆ. ಕರ್ನಾಟಕ ರೇಷ್ಮೆ ಉದ್ಯಮ ಮತ್ತು ಈ ತಳಿಯ ಬಗ್ಗೆ ಮುಂದೆ ನನ್ನ ಸ್ಪಷ್ಟ ಅಭಿಪ್ರಾಯವನ್ನು ತಿಳಿಸುತ್ತೇನೆ.

೧೯೮೩ರಲ್ಲಿ ಸಾರ್ವಜನಿಕ ಚುನಾವಣೆಯುಯಲ್ಲಿ ನಾನು ವಿಧಾನಸಭೆಗೆ ಕುಣಿಗಲ್‌ಮತದಾರ ಕ್ಷೇತ್ರದಿಂದ ಜನತಾ ಪಕ್ಷದ ಉಮೇದುವಾರನಾಗಿ ಸ್ಪರ್ಧಿಸಿದೆ.. ಈ ಚುನಾವಣೆಯಲ್ಲಿ ಜನರು ನನ್ನನ್ನು ಸುಮಾರು ೧೨ ಸಾವಿರಕ್ಕೂ ಮಿಗಿಲಾದ ಮತಗಳಿಂದ ಚುನಾಯಿಸಿದರು. ವಕೀಲನಾಗಿ ನಾನು ಗಳಿಸಿದ್ದ ಅಪಾರ ಕಕ್ಷಿದಾರರು, ಅಷ್ಟರಲ್ಲಿ ನಾನು ತಾಲ್ಲೂಕು ಅಭಿವೃದ್ಧಿ ಮಂಡಲಿ ಸದಸ್ಯನಾಗಿ ಹಾಗೂ ಹಲವಾರು ಸಾಮಾಜಿಕ ಚಟುವಟಿಕೆಯಲ್ಲಿ ತೊಡಗಿಸಿಕೊಂಡು ಪಡೆದಿದ್ದ ಜನಸಂಪರ್ಕ ಈ ಗೆಲುವಿಗೆ ಕಾರಣವಾಗಿತ್ತು. ಇದಕ್ಕಿಂತ ಮಿಗಿಲಾಗಿ, ನನ್ನ ಚುನಾವಣಾ ಕ್ಷೇತ್ರದಲ್ಲಿದ್ದ ಸುಮಾರು ೧೫-೨೦ ಸಾವಿರ ಮೈಸೂರು ರೇಷ್ಮೆ ಬಿತ್ತನೆ ಬೆಳೆಯುವ ರೇಷ್ಮೆ ಬೆಳೆಗಾರರು ಮುಖ್ಯವಾಗಿದ್ದರು. ಆಗ ತಾನೆ ಬೋನಸ್ ಘೋಷಣೆ ಮಾಡಲ್ಪಟ್ಟಿತ್ತು. ಅಷ್ಟೇ ಅಲ್ಲ, ಚುನಾವಣೆಯ ಸಮಯಕ್ಕೆ ಸರಿಯಾಗಿ ಮೊಟ್ಟ ಮೊದಲಿಗೆ ಬೋನಸ್ ಹಣವನ್ನು ಎಲ್ಲಾ ಮಾರುಕಟ್ಟೆಗಳಲ್ಲಿಯೂ ಹಂಚುತ್ತಿದ್ದರು. ಈ ಹಣ ಬರಲು ರಾಮಯ್ಯನೇ ಕಾರಣವೆಂದು ಎಲ್ಲಾ ರೈತರಿಗೂ ತಿಳಿದಿತ್ತು. ಇದರಿಂದಾಗಿ ಸ್ವಲ್ಪ ಹೆಚ್ಚು - ಕಡಿಮೆ ಎಲ್ಲಾ ಬೆಳೆಗಾರರು ನನ್ನನ್ನು ಬೆಂಬಲಿಸಿದರು. ರೇಷ್ಮೆ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಅಧಿಕಾರಿಗಳಿಂದ ಹಿಡಿದು ಕೆಳದರ್ಜೆಯ ನೌಕರರೊಡನೆ ನಾನು ಹೊಂದಿದ್ದ ನಿಕಟ ಸಂಪರ್ಕವೂ ಸಹಾಯಕ್ಕೆ ಬಂದಿತು. ವಿದ್ಯಾರ್ಥಿ ದೆಸೆಯಲ್ಲಿ ಇದ್ದಾಗಿನಿಂದಲೂ ಬಯಸಿದ ಗುರಿ ಸಾಧನೆ ಆಗಿತ್ತು. ಜನರಿಗೆ ಕೊಟ್ಟ ಮಾತಿನ ಪ್ರಕಾರ ವಕೀಲ ವೃತ್ತಿಯನ್ನು ಸಂಪೂರ್ಣವಾಗಿ ಕೈಬಿಟ್ಟೆ. ಆ ಚುನಾವಣೆಗೆ ಕೆಲವೇ ದಿನಗಳಿಗೆ ಮುಂಚೆ ನನ್ನಲ್ಲಿದ್ದ ಕಿರಿಯ ವಕೀಲರಾದ ಶ್ರೀ ಎ. ಆರ್. ರಂಗಸ್ವಾಮಿ ಅವರು, ತಮ್ಮದೇ ಆದ ಆಫೀಸು ತೆಗೆದರು. ಅಂದು ಅವರಿಗೆ ನನ್ನಲ್ಲಿ ಅನೇಕ ವರ್ಷಗಳಿಂದ ಇದ್ದ ಪೆನ್ನನ್ನು ಕಾಣಿಕೆಯಾಗಿ ಕೊಟ್ಟೆ. ಆಮೇಲೆ ನಾನು ಇದುವರೆವಿಗೂ “ವಕಾಲತ್ತು” ರುಜು ಮಾಡಲೇ ಇಲ್ಲ. ರಾಜಕಾರಣವನ್ನು ಹಾಗೂ ರಾಜಕೀಯವನ್ನು ಜನರು ತುಚ್ಛವಾಗಿ, ಲಘುವಾಗಿ ಅನುಮಾನದಿಂದ ನೋಡುತ್ತಿದ್ದ ಪರಿಸ್ಥಿತಿಯಲ್ಲಿ ಇದಕ್ಕೆ ಭಿನ್ನವಾಗಿ, ಹೊರತಾಗಿ, ರಾಜಕಾರಣ ಮಾಡಬೇಕೆಂಬ ಕಟಿಬದ್ಧ ತೀರ್ಮಾನದೊಡನೆ ಸಾರ್ವಜನಿಕ ಕ್ಷೇತ್ರದಲ್ಲಿ ಕಾರ್ಯೋನ್ಮುಖನಾದೆ. ಉಳಿದ ಕಾರ್ಯಗಳ ಜೊತೆಗೆ ನನ್ನನ್ನು ಚಿಕ್ಕಂದಿನಿಂದಲೂ ಆಕರ್ಷಿಸಿದ್ದ ನಮ್ಮ ಪ್ರದೇಶದ ರೈತರಿಗೆ ಜೀವನಾಧಾರವಾಗಿದ್ದ ರೇಷ್ಮೆ ಕಸುಬು ಮತ್ತು ಈ ಕಸುಬಿನಲ್ಲಿರುವ ಸಮಸ್ಯೆಗಳನ್ನು ಅರಿತುಕೊಳ್ಳುವುದರಲ್ಲಿ ಹಾಗೂ ಪರಿಹಾರ ಕಂಡುಕೊಳ್ಳಲು ಅಧಿಕಾರ ಅಸ್ತ್ರವಿಲ್ಲದೆ ಸುಮಾರು ಒಂದು ದಶಕದ ನನ್ನ ಹೋರಾಟಕ್ಕೆ ಈಗ ಶಾಸಕ ಸ್ಥಾನದ ಬಲ ಒಂದು ಸಿಂಹ ಬಲವಾಯಿತು. ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷನಾಗಿ ಮುಂದುವರಿದೆ. ಸಂಘವು ನನ್ನನ್ನು ಅಭಿಮಾನದಿಂದ ಸನ್ಮಾನಿಸಿತು. ಸಂಘದ ಉಳಿದ ಪದಾಧಿಕಾರಿಗಳು, ಆಗಿನ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರನ್ನು ಭೇಟಿ ಮಾಡಿ ನನ್ನನ್ನು ರೇಷ್ಮೆ ಖಾತೆ ಮಂತ್ರಿ ಮಾಡಬೇಕೆಂದು ಒತ್ತಾಯಿಸಿದರೆಂದು ನನಗೆ ಆಮೇಲೆ ತಿಳಿಯಿತು.

ನನ್ನ ಕಾರ್ಯವೈಖರಿಯಲ್ಲಿ ಸ್ವಲ್ಪ ಬದಲಾವಣೆ ಮಾಡಿಕೊಂಡೆ. ಕೇವಲ ಪ್ರಾರ್ಥನೆ, ಕೋರಿಕೆ, ವಿನಂತಿಗಳಿಂದ ಕೆಲಸ ಮಾಡಿಸಿಕೊಳ್ಳುತ್ತಿದ್ದ ನಾನು ಅಧಿಕಾರಯುತವಾಗಿ ಅಬ್ಬರಿಸಿ,

ಗದರಿಸಿ ಕೆಲಸ ಮಾಡಿಸಿಕೊಳ್ಳಲು ಮೊದಲು ಮಾಡಿದೆ. ಆಗಿನ ರೇಷ್ಮೆ ಖಾತೆಯ ಮಂತ್ರಿಯಾಗಿದ್ದ ಶ್ರೀಮತಿ ಚಂದ್ರಪ್ರಭಾ ಅರಸರಿಗೆ ಈ ಉದ್ಯಮದ ಬಗ್ಗೆ ಪರಿಣತಿಯಾಗಲಿ, ಆಸಕ್ತಿಯಾಗಲಿ ಇರಲಿಲ್ಲ. ಆಗ ಜಂಟಿ ನಿರ್ದೇಶಕರಾಗಿದ್ದ ಶ್ರೀ ಕೆ. ವೀರಯ್ಯನವರು ಬಹು ಸಂಖ್ಯಾತ ಕೋಮಿನವರೆಂಬ ಒಂದೇ ಕಾರಣಕ್ಕೆ ಇಲಾಖೆಯಲ್ಲಿಯೇ ಅತ್ಯಂತ ಹಿರಿಯ ಅಧಿಕಾರಿಯಾಗಿದ್ದ ಅವರನ್ನು ಕೊನೆಯ ಗುಂಪಿನಲ್ಲಿಯೂ ಜಪಾನಿಗೆ ತರಬೇತಿಗೆ ಕಳುಹಿಸುವಲ್ಲಿ ಇವರ ಹೆಸರನ್ನು ಕೈ ಬಿಟ್ಟರು. ಮಾನ್ಯ ಮುಖ್ಯಮಂತ್ರಿಗಳಲ್ಲಿ ಈ ವಿಷಯ ತಿಳಿಸಿದೆ. ಶ್ರೀ ಮುನಿವೆಂಕಟಪ್ಪ ಅವರನ್ನು ಕೈಬಿಟ್ಟು ಇವರನ್ನು ಕಳುಹಿಸುತ್ತೇವೆ ಎಂದರು. ನಾನು ಒಪ್ಪಲಿಲ್ಲ. ಕೊನೆಗೆ ಇಬ್ಬರೂ ಪ್ರವಾಸ ಮಾಡಲು ಏರ್ಪಾಡಾಯಿತು. ಆಗಿನ್ನೂ ಶ್ರೀ ಮೀನಾಕ್ಷಿ ಸುಂದರಂ ಅವರೇ ನಿರ್ದೇಶಕರಾಗಿದ್ದರು. ಇದಾದ ಕೆಲವೇ ದಿನಗಳಲ್ಲಿ ಸಮಚಿತ್ತ ಸ್ವಭಾವದ, ರಾಗ- ದ್ವೇಷದಿಂದ ಹೊರತಾದ ಪ್ರವೃತ್ತಿಯ, ಸರಳ ನಡತೆಯ ಈ ನಿರ್ದೇಶಕರು ಹಾಲಿನ ವ್ಯವಹಾರದ ಇಲಾಖೆಗೆ ವರ್ಗವಾಗಿ ಶ್ರೀ ಎಸ್. ಆರ್. ವಿಜಯ್ ಅವರು ರೇಷ್ಮೆ ಇಲಾಖೆಯ ನಿರ್ದೇಶಕರಾಗಿ ಬಂದರು. ಬೆಂಗಳೂರಿನ ಪ್ರತಿಷ್ಠಿತ ನೆಟ್ಟಕಲ್ಲಪ್ಪನವರ ಕುಟುಂಬಕ್ಕೆ ಸೇರಿದ ಈ ಕನ್ನಡಿಗ ಕೆಲವೇ ದಿನಗಳಿದ್ದರೂ ಉದ್ಯಮದ ಮೂಲಭೂತ ಸಮಸ್ಯೆಗಳನ್ನು ಬೇಗನೆ ಅರಿತುಕೊಂಡು ಚೆನ್ನಾಗಿಯೇ ಕೆಲಸ ಮಾಡುತ್ತಿದ್ದರು. ಅವರ ಉದ್ಯಮದ ಬಗೆಗಿನ ತಿಳುವಳಿಕೆ ಎಷ್ಟು ಪ್ರಬುದ್ಧವಾಗಿತ್ತೆಂದರೆ ಅವರು ಬರೆದ ೧೯೮೪ರ "ಸಿರಿಕಾಲೋಜಿ" ಪತ್ರಿಕೆಯಲ್ಲಿ ಪ್ರಕಟವಾದ, ೧೬ನೇ ಅಂತರರಾಷ್ಟ್ರೀಯ ಸಿರಿಕಲ್ಚರಲ್ ಕಾಂಗ್ರೆಸ್‌ನಲ್ಲಿ ಅವರು ಮಂಡಿಸಿದ್ದ "ಬೈವೊಲ್ಟಿನ್ ಇನ್ ದಿ ಟ್ರಾಫಿಕ್ಸ್" ಪ್ರಬಂಧವನ್ನು ಓದಿದರೆ ತಿಳಿಯುತ್ತದೆ. ಓದಿದ ನಾನು ಈ ವ್ಯಕ್ತಿಗೆ ಈ ಉದ್ಯಮದ ಬಗ್ಗೆ ಇಷ್ಟೊಂದು ಆಳವಾದ ತಿಳಿವಳಿಕೆ ಹಾಗೂ ನಿಕಟವಾದ ಅಭಿಪ್ರಾಯವು ಇರುವುದನ್ನು ಅರಿತು ಆಶ್ಚರ್ಯಪಟ್ಟೆ. ೧೯೮೫ರ ಆದಿ ಭಾಗದಲ್ಲಿ ಸಚಿವರಿಗೂ, ಇವರಿಗೂ ಹೊಂದಾಣಿಕೆಯಾಗದೆ ಎಸ್.ಆರ್. ವಿಜಯ್ ಅವರು ಇಲಾಖೆಯಿಂದ ವರ್ಗವಾದರು. ಕಾರಿನಲ್ಲಿ ಕುಳಿತು ಹೆಗಡೆಯವರ ಜೊತೆ ಬರುವಾಗ "ಅವರೇ ಕೇಳಿ ಹಾಕಿಸಿಕೊಂಡರು. ಈಗ ಮತ್ತೆ ಅವರೇ ಬೇಡವೆನ್ನುತ್ತಿದ್ದಾರೆ. ಆತ ನನಗೆ ನಿಕಟವಾಗಿ ಗೊತ್ತಿರುವ ಒಳ್ಳೆಯ ಅಧಿಕಾರಿ ಏನು ಮಾಡುವುದು ರಾಮಯ್ಯನೋರೆ" ಎಂದು ಮರುಗಿದರು ಮುಖ್ಯಮಂತ್ರಿ ಹೆಗಡೆಯವರು. ಅದಾದ ಕೇಲವೇ ದಿನಗಳಲ್ಲಿ ಶ್ರೀ ಚಂದ್ರಪ್ರಭಾ ಅರಸ್‌ರವರು ಶ್ರೀ ಅಜೀಜ್ ಸೇಟ್ ಜೊತೆಗೆ ಮಂತ್ರಿ ಪದವಿಗೆ ರಾಜೀನಾಮೆ ಕೊಟ್ಟರು. ನಮ್ಮ ಪಕ್ಷವನ್ನು ಬಿಟ್ಟು ಕಾಂಗ್ರೆಸ್ ಸೇರಿದರು.

ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷನಾಗಿ ಕೆಲಸ ಮಾಡುವಾಗ ನಾನು ಇಡೀ ಉದ್ಯಮದ ಬಗ್ಗೆ ಚಿಂತಿಸುತ್ತಾ ಇದ್ದವನು ಶಾಸಕನಾದ ಮೇಲೆ ಸ್ವಲ್ಪ ಸಂಕುಚಿತನಾದೆನೆಂದು ಕಾಣುತ್ತದೆ. ಈಗ ಇಡೀ ಉದ್ಯಮದ ತಿಳಿವಳಿಕೆಗಿಂತ ನನ್ನನ್ನು ಶಾಸಕನನ್ನಾಗಿ ಮಾಡಿದ ಬೆಳೆಗಾರರ ಬಗ್ಗೆ ಅಂದರೆ ಮೈಸೂರು ಬಿತ್ತನೆ ವಲಯದ ಬಗ್ಗೆ ಹೆಚ್ಚಿನ ಗಮನ ಹರಿಸಿದೆ. ಈ ಕ್ಷೇತ್ರದಲ್ಲಿ ನನಗೆ ಇದ್ದ ಅಪಾರ ಆಸಕ್ತಿ, ಅರಿವು ಮತ್ತು ಸಂಪರ್ಕ, ಪರಿಚಯವಿದ್ದ ಹಾಗೂ ಉದ್ಯಮಕ್ಕೆ

ಸಂಬಂಧಿಸಿದ ಎಲ್ಲರೂ ಕರ್ನಾಟಕದ ವಿಧಾನಸಭೆಯಲ್ಲಿ ರೇಷ್ಮೆ ಉದ್ಯಮದ ಆಗುಹೋಗುಗಳನ್ನು ಪರಿಣಾಮಕಾರಿಯಾಗಿ ಪ್ರತಿನಿಧಿಸಬಲ್ಲ ಶಾಸಕರೊಬ್ಬರು ದೊರೆತರು ಎಂದು ಸಂತೋಷ ಪಟ್ಟರು. ನಾನೀಗಾಗಲೇ ತಿಳಿಸಿರುವ ಹಾಗೆ ಈ ಉದ್ಯಮದಲ್ಲಿ ಆಸಕ್ತಿ ಉಳ್ಳವರಾದ ಕೊಟ್ಟೂರಿನ ಶ್ರೀ ಬಿ. ಎಸ್. ವೀರಭದ್ರಪ್ಪ ನವರೂ, ಕೊಳ್ಳೇಗಾಲದಿಂದ ಶ್ರೀ ಬಿ. ಬಸವಯ್ಯನವರೂ ಸಂತೆಮಾರಳ್ಳಿಯಿಂದ ಶ್ರೀ ಬಿ. ರಾಚಯ್ಯನವರೂ ಹೊಸನಗರದಿಂದ ಶ್ರೀ ಬಿ. ಸ್ವಾಮಿರಾವ್ ಅವರೂ ವಿಧಾನಸಭೆಗೆ ಆರಿಸಿ ಬಂದಿದ್ದರು.

ನಿಜ ಹೇಳಬೇಕೆಂದರೆ ನನ್ನ ಇಡೀ ಆಲೋಚನೆಗಳು ನನ್ನ ಕ್ಷೇತ್ರದಲ್ಲಿ ಆಗಬೇಕಾಗಿರುವ ಕೆಲಸಗಳ ಕಡೆ ಆಗ ಕೇಂದ್ರಿಕೃತವಾಯಿತು.

ಮೈಸೂರು ಬಿತ್ತನೆ ವಲಯದ ರೈತರಿಗೆ ಕೆ. ಜಿ. ಒಂದಕ್ಕೆ ೫-೦೦ ರೂಪಾಯಿ ಬೋನಸ್ ಕೊಡುವ ಯೋಜನೆ ಆಗ ತಾನೆ ಕಾರ್ಯಗತವಾಗುತ್ತಿತ್ತು. ಆದರೆ ಯೋಜನೆಯನ್ನು ನಿರೂಪಿಸಿದ ಇಲಾಖೆಯ ಅಧಿಕಾರಿಗಳ ತಪ್ಪು ತಿಳುವಳಿಕೆಯಿಂದಾಗಿ ಮೈಸೂರು ಬಿತ್ತನೆ ವಲಯಕ್ಕೆ ವಿಶ್ವಬ್ಯಾಂಕಿನ ನೆರವಿನ ಯೋಜನೆಯಲ್ಲಿ ಯಾವ ಸವಲತ್ತನ್ನೂ ಒದಗಿಸಲು ಪ್ರಯತ್ನ ಮಾಡಿರಲಿಲ್ಲ. ಮಾರುಕಟ್ಟೆಗಳಿಲ್ಲದೆ ಕುಣಿಗಲ್, ಹುಲಿಯೂರು ದುರ್ಗ, ಕೆಂಪನಹಳ್ಳಿ, ಹೆಬ್ಬೂರು, ಸಂತೇ ಮಾವತ್ತೂರು, ವೀರೇಗೌಡನ ದೊಡ್ಡಿ ಮತ್ತು ಕುದೂರುಗಳಲ್ಲಿ ಬೀದಿಯಲ್ಲಿಟ್ಟುಕೊಂಡು ಬಿತ್ತನೆ ಗೂಡನ್ನು ಮಾರುತ್ತಿದ್ದರು. ಮಳೆ ಬಂದರಂತೂ ಅವರ ಪಾಡು ನಾಯಿ ಪಾಡು.. ಗುಣಮಟ್ಟದ ರೋಗರಹಿತ ಬಿತ್ತನೆ ಮೊಟ್ಟೆ ತಯಾರಿಸಲು ಕನಿಷ್ಠ ಅನುಕೂಲವೂ ಇಲ್ಲದೆ ಬಾಡಿಗೆ ಮನೆಗಳಲ್ಲಿ ರೇಷ್ಮೆ ಬಿತ್ತನೆ ಮೊಟ್ಟೆ ತಯಾರು ಮಾಡುವ ಬಿತ್ತನೆ ಕೋಠಿಗಳು ಕೆಲಸ ಮಾಡುತ್ತಿದ್ದವು. ಮೂಲ ತಳಿ ಬೆಳೆಯುವ ಇಲ್ಲಿಯ ರೈತರು ಎಲ್ಲಾ ಸವಲತ್ತುಗಳಿಂದ ವಂಚಿತರಾಗಿದ್ದರು.

೧೯೮೩ರ ಜುಲೈ ತಿಂಗಳ ಮೊದಲನೆಯವಾರ ನನ್ನ ವೃತ್ತಿ ಗುರುಗಳಾದ, ಸಿಡುಕುತ್ತಲೇ ನನಗೆ ಒಳಿತು ಬಯಸುವ, ತುಮಕೂರಿನ ಹಿರಿಯ ವಕೀಲರಾದ ಶ್ರೀ ಹೆಚ್.ಎಸ್. ಶೇಷಾದ್ರಿಯವರು ಪ್ರಿನ್ಸಿಪಾಲರಾಗಿರುವ ವಿದ್ಯೋದಯ ಲಾ ಕಾಲೇಜಿನಲ್ಲಿ ನಾನು ಶಾಸಕನಾದುದಕ್ಕೆ ಮತ್ತು ಮತ್ತೊಬ್ಬ ಅವರ ಶಿಷ್ಯ, ನನ್ನ ಗೆಳೆಯ ಶ್ರೀ ಎಚ್. ಎನ್. ನಾರಾಯಣ ಅವರು ಜಿಲ್ಲಾ ನ್ಯಾಯಾಧೀಶರಾಗಿ ನೇಮಕವಾದುದಕ್ಕೆ ಸಂತೋಷ ಕೂಟ ಏರ್ಪಡಿಸಿದ್ದರು. ಊಟ ಮಾಡಿ ನಾವೆಲ್ಲಾ ಆಗ ಅಲ್ಲಿ ವಕೀಲರಾಗಿದ್ದ ಈಗ ನ್ಯಾಯಧೀಶರಾಗಿರುವ ನಮ್ಮ ಶ್ರೀ ದೇವೇಂದ್ರಯ್ಯನವರನ್ನು ಕೂರಿಸಿಕೊಂಡು ಹರಟೆ ಹೊಡೆಯುತ್ತಿದ್ದೆವು. ಆಗ ನನ್ನ ಕ್ಷೇತ್ರದ ಗೊಟ್ಟೆಕೆರೆ ಗ್ರಾಮದ ನನ್ನ ಕಿರಿಯ ಗೆಳೆಯ ಶ್ರೀ ಗಂಗಾಧರಯ್ಯ ನನ್ನನ್ನು ಕರ್ನಾಟಕ ಗೃಹ ಮಂಡಲಿಯ ಅಧ್ಯಕ್ಷನನ್ನಾಗಿ ನೇಮಿಸಿರುವ ವಿಷಯ ಈಗ ತಾನೇ ರೇಡಿಯೋದಲ್ಲಿ ಬಿತ್ತರಿಸಲಾಯಿತೆಂದು ತಿಳಿಸಿದರು. ಶ್ರೀ ದೇವೇಂದ್ರಯ್ಯ ಮಾಮೂಲಿ ಸ್ಟೈಲಿನಲ್ಲಿ “ಈಗೊಳ್ಳಲೇ ನನ್ನ ಮಗನ ಅದೃಷ್ಟನಾ” ಎಂದು “ಸಾರ್, ಈಗ ನೀವು ಮತ್ತೆ ಊಟ ಹಾಕಿಸಬೇಕಲ್ಲ” ಎಂದು ಶೇಷಾದ್ರಿಯವರನ್ನು ಕುರಿತು ಹಾಸ್ಯ ಮಾಡಿದೆ. ಯಾವ ಗುರುವಿಗೆ ತಾನೆ ತನ್ನ ಶಿಷ್ಯನ ಶ್ರೇಯಸ್ಸು ಸಂತಸ ಉಂಟು ಮಾಡುವುದಿಲ್ಲ? ನನ್ನ ಗುರುಗಳು ಹಿಗ್ಗಿ ಈರೇಕಾಯಾದರು.

೧೦

ಕರ್ನಾಟಕ ಗೃಹ ನಿರ್ಮಾಣ ಮಂಡಲಿಯ ಅಧ್ಯಕ್ಷನಾಗಿ ರಾಜ್ಯದ ಎಲ್ಲಾ ಕಡೆ ನಿರ್ಮಾಣವಾಗುತ್ತಿರುವ ಮನೆಗಳ ತಪಾಸಣೆ, ಲೆಕ್ಕಪತ್ರಗಳನ್ನು ಸರಿಯಾಗಿ ಇಡದೆ, ಕೊಳೆತು ನಾರುತ್ತಿದ್ದ ಕೇಂದ್ರ ಕಚೇರಿಯನ್ನು ಸ್ವಚ್ಛ ಮಾಡುವುದು ಕ್ಷೇತ್ರದ ಕೆಲಸ, ಗೃಹ ಮಂಡಲಿಯಲ್ಲಿ ಮನೆ ಮಾಡಿಕೊಂಡಿದ್ದ ನಿಸ್ಸೀಮ ಜಡತ್ವವನ್ನು ತೊಲಗಿಸುವುದು, ಕೇಂದ್ರದಿಂದ ಆರ್ಥಿಕ ನೆರವಿನ ಪ್ರಯತ್ನ ಅನೇಕ ವರ್ಷಗಳಿಂದ ವಸೂಲಿ ಆಗದೆ ಇರುವ, ಅವಧಿ ಮೀರಿದ ಲಕ್ಷಾಂತರ ರೂಪಾಯಿ ಕಂತಿನ ಸಾಲವನ್ನು ವಸೂಲಿ ಮಾಡುವುದು, ಹೀಗೆ ಈ ಕೆಲಸಗಳಲ್ಲಿ ನಾನು ತಲ್ಲೀನನಾದೆನಾದರೂ ರೇಷ್ಮೆಯನ್ನು ಮರೆತಿರಲಿಲ್ಲ. ರೇಷ್ಮೆ ಸಂಘದವರು ತಾ. ೨೮-೭-೧೯೮೩ರಂದು ಮತ್ತೆ ನನ್ನನ್ನು ಸತ್ಕರಿಸಿ, ಯಶಸ್ಸು ಕೋರಿ ನನಗೆ ಸ್ಫೂರ್ತಿ ಕೊಟ್ಟರು.

ರೇಷ್ಮೆ ಉದ್ಯಮದ ಮತ್ತೊಂದು ಪ್ರಮುಖ ಅಂಗವೆಂದರೆ ಖಾಸಗಿ ಮೊಟ್ಟೆ ತಯಾರು ಮಾಡುವವರು. ಆಗ ಅವಶ್ಯಕತೆ ಇದ್ದ ಮೊಟ್ಟೆಗಳಲ್ಲಿ ಸುಮಾರು ಶೇಕಡಾ ೬೦ ಮೊಟ್ಟೆಯನ್ನು ಖಾಸಗಿಯವರು ಒದಗಿಸುತ್ತಿದ್ದರು. ಆದರೂ ಇವರಿಗೂ ವಿಶ್ವ ಬ್ಯಾಂಕಿನ ಯೋಜನೆಯಲ್ಲಿ ಯಾವ ಅನುಕೂಲಗಳನ್ನು ಕಲ್ಪಿಸಿರಲಿಲ್ಲ. ತಾ. ೧೧-೧-೧೯೮೪ರಂದು ನಡೆದ ರಾಜ್ಯದ ಖಾಸಗಿ ಮೊಟ್ಟೆ ತಯಾರಕರ ಬೃಹತ್ ಸಭೆಯಲ್ಲಿ ಬಿತ್ತನೆ ಗೂಡಿಗಾಗಿ ಅವರ ಪರದಾಟ, ಗುಣಮಟ್ಟದ ಗೂಡು ಕೊಡುವುದರಲ್ಲಿ ಸರ್ಕಾರಿ ಮಾರುಕಟ್ಟೆ ಅಧಿಕಾರಿಗಳ ಮಲತಾಯಿ ಧೋರಣೆ, ಇಲಾಖೆಯವರು ಹಮ್ಮಿಕೊಂಡಿದ್ದ ರೈತರಿಗೆ ಚಾಕಿ ಸಾಕಿ ಕೊಡುವ ಯೋಜನೆಯಿಂದ ಈ ಮೊಟ್ಟೆ ತಯಾರಕರ ಮೇಲೆ ಆದ ಪರಿಣಾಮ, ವಿಶ್ವಬ್ಯಾಂಕಿನ ನೆರವಿನ ಯೋಜನೆಯ ಪರಿಹಾರಗಳಿಂದ ಅವರನ್ನು ದೂರವಿಟ್ಟಿರುವುದು, ಹೀಗೆ ಹಲವಾರು ಕುಂದು-ಕೊರತೆಗಳನ್ನು ನನ್ನ ಗಮನಕ್ಕೆ ತಂದು ಸಕಾಲದಲ್ಲಿ ಪರಿಹಾರ ಪಡೆಯಲು ಸಹಾಯ ಮಾಡಬೇಕೆಂದು ಕೋರಿದರು. ಈ ಎಲ್ಲಾ ಬೇಡಿಕೆಗಳ ಬಗ್ಗೆ ನಾನು ಬರೆದ ಪತ್ರಕ್ಕೆ ಅಂದಿನ ನಿರ್ದೇಶಕರಾದ ಎಸ್. ಆರ್. ವಿಜಯ್ ಅವರು ೧೫-೧೨-೮೪ರಂದು ಕಾಗದ ಬರೆದು, ಎಲ್. ಎಸ್. ಪಿ.ಗಳಿಗೆ ಕೆಟ್ಟ ಗೂಡು ಕೊಟ್ಟು ಸರಕಾರದ ಬಿತ್ತನೆ ಕೋಠಿಗಳಿಗೆ ಒಳ್ಳೆಯಗೂಡು ಕೊಡುತ್ತಾರೆ ಎನ್ನುವುದು ಸುಳ್ಳು. ಏಕೆಂದರೆ ಎಲ್.ಎಸ್.ಪಿ.ಗಳು ಮೊಟ್ಟೆ ತಯಾರು ಮಾಡುವ ಗೂಡಿನಿಂದ ೩೦-೪೦ ಶೇಕಡಾ ಮೊಟ್ಟೆ ಬರುತ್ತದೆ. ಸರ್ಕಾರಿ ಕೋಠಿಯಲ್ಲಿ ಶೇಕಡಾ ೨೦-೨೫ ಬರುತ್ತಿದೆ ಎಂದು ತಿಳಿಸಿದರು.

ಬಿತ್ತನೆ ವಲಯಗಳಲ್ಲಿ ಅವಶ್ಯಕವಾಗಿ ಬೇಕಾಗಿರುವ ಮಾರುಕಟ್ಟೆ, ಬಿತ್ತನೆ ಕೋಠಿ ಕಟ್ಟಡಗಳಿಗಾಗಿ ಸರ್ಕಾರದಿಂದ ಸುಮಾರು ೬೦ ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಿಸಿ ಅದಕ್ಕಾಗಿ ತಾ. ೧೬-೧-೮೪ರಂದು ಸರ್ಕಾರವನ್ನು ಅಭಿನಂದಿಸಿ ಕಾಗದ ಬರೆದೆ. "ಜಗಳ ಗಂಟಿ ಮನುಷ್ಯ"ನೆಂದು ಸಚಿವೆಯರೂ ಮೂಗು ಮುರಿದಿದ್ದರೂ ನನ್ನ ಜನರಿಗೆ ಆಗಬೇಕಾದ ಅವಶ್ಯಕ ಅನುಕೂಲ ಆಯಿತೆಂದು ಸಂತೋಷಪಟ್ಟೆ.

ನಮ್ಮ ಹುಳುಗಳಿಗೆ ಬರುವ ರೋಗಕ್ಕೆ ಮೊಟ್ಟೆಗಳಷ್ಟೇ ಕಾರಣವಲ್ಲ. ಹುಳು ಸಾಕಲು ಬೆಳೆಯುವ ಸೊಪ್ಪು ಮತ್ತು ಸಾಕುವ ಮನೆಗಳ ಪಾತ್ರವೂ ಸಾಕಷ್ಟಿದೆ ಎಂದು ತಿಳಿದಿದ್ದ ನಾನು

ಯಾವುದಾದರೂ ಯೋಜನೆಯಲ್ಲಿ ರೈತರಿಗೆ ಪ್ರತ್ಯೇಕವಾದ ಹುಳು ಸಾಕುವ ಮನೆ ಕಟ್ಟಿಸಲು ಕಾರ್ಯಕ್ರಮ ರೂಪಿಸಿದೆ. ಮಂತ್ರಿಗಳೊಡನೆ ಮಾತನಾಡಿ ೧೯೮೫ರ ಜನವರಿ ಕೊನೆಯ ವಾರದಲ್ಲಿ ವಿಧಾನಸೌಧದ ಅವರ ಕೊಠಡಿಯಲ್ಲಿ ಸರ್ಕಾರದ ಕಾರ್ಯದರ್ಶಿಗಳು, ಇಲಾಖೆಯ ನಿರ್ದೇಶಕರು, ಆರ್ಥಿಕ ಇಲಾಖೆಯ ಅಧಿಕಾರಿಗಳು ಮತ್ತು ನಾವು ಸಭೆ ಸೇರಿ ಚರ್ಚಿಸಿ, ೧೯೮೪-೮೫ನೇ ಆಯವ್ಯಯದಲ್ಲಿ ಈ ಯೋಜನೆಗಾಗಿ ಒಂದು ಕೋಟಿ ರೂಪಾಯಿಗಳನ್ನು ಒದಗಿಸಬೇಕೆಂತಲೂ ಈ ಹಣದಿಂದ ರೂ. ೪೦೦೦-೦೦ ವೆಚ್ಚದ ಒಂದು ಸಾವಿರ ಮನೆಗಳನ್ನು ಕಟ್ಟಿಸಿಕೊಡಬೇಕೆಂತಲೂ ಈ ಮನೆ ಕಟ್ಟುವ ಕೆಲಸವನ್ನು ಕೈಗೊಳ್ಳಲು ಕರ್ನಾಟಕ ಗೃಹ ಮಂಡಲಿಗೆ, ಟ್ರಸರಿ ಮೂಲಕ ಹಣ ಒದಗಿಸಬೇಕೆಂದು ತೀರ್ಮಾನವಾಯಿತು. ಈ ತೀರ್ಮಾನದ ಪ್ರಕಾರ ಇಲಾಖೆಯ ಒಂದು ಕೋಟಿ ರೂಪಾಯಿಯನ್ನು ಟ್ರಸರಿಯಲ್ಲಿ ತೊಡಗಿಸುವ ಕಾರ್ಯದಲ್ಲಿ ತಾ.೩೧-೩-೮೫ರಂದು ರಾತ್ರಿ ೧೨.೦೦ ಗಂಟೆಯವರೆಗೆ ನಾವು ಮತ್ತು ಅಧಿಕಾರಿಗಳು ಶ್ರಮಿಸಿದೆವು. ವಿಧಾನಸೌಧದಲ್ಲಿ ಇದಕ್ಕೆ ಬಂದ ಅಡ್ಡಿ ಹೈಬ್ರೀಡ್ ಜಾತಿಯ ಅಧಿಕಾರಿಗಳ ಅಪಕ್ವ ತಿಳುವಳಿಕೆ ಮತ್ತು ಹಳ್ಳಿಗಳ ಬಗ್ಗೆ ಅವರ ಅಸಡ್ಡೆ ನನ್ನ ಸಹನೆಯನ್ನು ಕೆಡಿಸುತ್ತಿದ್ದರೂ ಕೆಲಸ ಗೆಲ್ಲಲು ಸಹಿಸಬೇಕಾಗುತ್ತಿತ್ತು. ಆಗ ಹಣಕಾಸಿನ ಸಚಿವರಾಗಿದ್ದ ಮುಖ್ಯಮಂತ್ರಿಗಳೂ "ಎಲ್ಲಾ ಉಳಿತಾಯವನ್ನು ಈ ಯೋಜನೆಗೆ ಅಳವಡಿಸಿ" ಎಂದು ಒಪ್ಪಿಗೆ ಸೂಚಿಸಿದರು. ನನಗೆ ವಂದನೆ ತಿಳಿಸಿ ಶ್ರೀಮತಿ ಅರಸ್ ಅವರು ೪-೨-೧೯೮೫ರಲ್ಲಿ ಪತ್ರ ಬರೆದರು. ಇಷ್ಟೆಲ್ಲ ಆದರೂ ಈ ಯೋಜನೆ ಕಾರ್ಯರೂಪಕ್ಕೆ ಬರಲಿಲ್ಲ. ರಾತ್ರಿಯೆಲ್ಲಾ ಹೆತ್ತಮಗುವನ್ನು ಬೆಳಗ್ಗೆ ನಾಯಿ ಹೊತ್ತುಕೊಂಡು ಹೋದಂತಾಯಿತು. ಕಾರಣ ಪಟ್ಟಭದ್ರ ಹಿತಾಸಕ್ತಿಗಳ ಕೈವಾಡ.

ವರ್ಷಕ್ಕೆ ಒಂದು ಸಾವಿರ ಮನೆಗಳನ್ನು ಕಟ್ಟಲು ನಿರೂಪಿಸಿದ ಯೋಜನೆಯು ಕಾರ್ಯರೂಪಕ್ಕೆ ಬರಲಿಲ್ಲವೆಂದು ನಾನು ಧೃತಿಗೆಡಲಿಲ್ಲ. ಬೇರೆ ಮಾರ್ಗಗಳನ್ನು ಚಿಂತಿಸುತ್ತಿದೆ. ನಾನು ಅಧ್ಯಕ್ಷನಾಗಿದ್ದ ಕರ್ನಾಟಕ ಗೃಹ ಮಂಡಲಿ ಪಟ್ಟಣಗಳಲ್ಲಿ ವಾಸದ ಮನೆಗಳನ್ನು ಕಟ್ಟಿಕೊಡುವ ಪ್ರಮುಖ ಕರ್ತವ್ಯ ನಿರ್ವಹಿಸುತ್ತಿತ್ತೆ ಹೊರತು, ಹಳ್ಳಿಗಳಲ್ಲಿ ಮನೆ ಕಟ್ಟಿಕೊಡುವ ಯಾವ ಯೋಜನೆಗಳನ್ನೂ ಹೊಂದಿರಲಿಲ್ಲ.

ನಾನು ಈಗಾಗಲೇ ತಿಳಿಸಿರುವಂತೆ ರೇಷ್ಮೆ ಬೆಳೆ ಕೆಡುವುದಕ್ಕೆ ದೋಷಪೂರಿತ ಮೊಟ್ಟೆಗಳಷ್ಟೇ ಕಾರಣವಲ್ಲ. ಸೊಪ್ಪಿನ ತೋಟ ಮತ್ತು ಹುಳು ಸಾಕುವ ಮನೆಗಳು ಹಾಗೂ ಬೆಳೆಗಾರನ ಶ್ರದ್ಧೆ ಕೂಡಾ ಅಷ್ಟೆ ಪ್ರಾಮುಖ್ಯವೆಂದು ನನ್ನ ನಂಬಿಕೆ. ನನಗೆ ಕೊನೆ ಪಕ್ಷ ಮೈಸೂರು ಬಿತ್ತನೆ ವಲಯದಲ್ಲಾದರೂ ಬೆಳೆಗಾರರಿಗೆ ಪ್ರತ್ಯೇಕ ಹುಳು ಸಾಕುವ ಮನೆಗಳನ್ನು ಕಟ್ಟಿಸಿಕೊಡಬೇಕು ಎನ್ನುವ ಹಂಬಲ ಇದ್ದೇಇತ್ತು. ಕರ್ನಾಟಕ ಗೃಹಮಂಡಲಿಯಲ್ಲಿ ನಾನು ತೆಗೆದುಕೊಂಡ ಕ್ರಮದಿಂದ ಆದ ಪ್ರಗತಿಯಿಂದ ಆಕರ್ಷಿತರಾದ ರಾಷ್ಟ್ರೀಯ ಗೃಹನಿರ್ಮಾಣ ನಿಗಮದವರು ನಾವು ಕಳುಹಿಸಿದ ಯೋಜನೆಗೆ ಉದಾರವಾಗಿ ಧನ ಸಹಾಯ ಮಾಡುತ್ತಿದ್ದರು. ಇದರ ಸದುಪಯೋಗ ಪಡೆಯುವ ಇಚ್ಛೆಯಿಂದ ಮೈಸೂರು ಬಿತ್ತನೆ ಪ್ರದೇಶದಲ್ಲಿ ರೇಷ್ಮೆ ಹುಳು ಸಾಕುವ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಪ್ರತ್ಯೇಕ ಹುಳು ಸಾಕುವ ಮನೆಗಳನ್ನು

ಕಟ್ಟಿಕೊಡುವ ಯೋಜನೆಯನ್ನು ರೂಪಿಸಿ ರಾಷ್ಟ್ರೀಯ ಗೃಹ ನಿರ್ಮಾಣ ನಿಗಮಕ್ಕೆ ಕಳುಹಿಸಲು ಆಲೋಚಿಸಿದೆ. ಬಿತ್ತನೆಗೆ ಹೋಗದ ಬಿತ್ತನೆ ಗೂಡಿಗೆ ಬೋನಸ್ ಕೊಡಿಸಲು ಹಾಗೂ ಮಾರುಕಟ್ಟೆಗಳ ಮತ್ತು ಬಿತ್ತನೆ ಕೋಠಿಗಳ ಕಟ್ಟಡಕ್ಕೆ ಮಂಜೂರಾತಿ ಪಡೆಯುವಲ್ಲಿ ಸಫಲನಾಗಿದ್ದ ನನಗೆ ನನ್ನ ಕ್ಷೇತ್ರದಲ್ಲಿ ಒಂದೇ ಮನೆಯಲ್ಲಿ ಕುರಿ, ಕೋಳಿ, ದನ ಸಾಕುವುದಲ್ಲದೆ ತಾವೂ ವಾಸ ಮಾಡುತ್ತಾ ಅದರಲ್ಲೇ ಒಂದು ಕಡೆ ಹುಳು ಸಾಕುವ ದಡೇವು ಇಡುವಂಥ ದಾರುಣ ಪರಿಸ್ಥಿತಿ ನೋವುಂಟು ಮಾಡಿತ್ತು. ಅದರಿಂದಾಗಿ ಹುಳುಗಳು ರೋಗಕ್ಕೆ ತುತ್ತಾಗುವುದು ಸಹನೆಯಾಗಿರಲಿಲ್ಲ. ರೇಷ್ಮೆ ಬೆಳೆಗಾರರಿಗೆ ಗ್ರಾಮೀಣ ಪ್ರದೇಶಗಳಲ್ಲಿ ಮನೆ ಕಟ್ಟಿಕೊಡಲು ಕಳುಹಿಸಿದ ಯೋಜನೆಯನ್ನು ರಾಷ್ಟ್ರೀಯ ಗೃಹನಿರ್ಮಾಣ ಮಂಡಳಿಯವರು ಶ್ಲಾಘಿಸಿದರು. ಆದರೆ ಗ್ರಾಮಾಂತರ ಪ್ರದೇಶಗಳಲ್ಲಿ ಇಂತಹ ಮನೆ ಕಟ್ಟಲು ಧನ ಸಹಾಯ ಮಾಡಲು ಅವಕಾಶವಿಲ್ಲವೆಂದು ಈ ಯೋಜನೆಯನ್ನು ಸುಲಭವಾಗಿ ಒಪ್ಪಿಕೊಳ್ಳಲಿಲ್ಲ. ರಾಷ್ಟ್ರೀಯ ಮಂಡಳಿಯ ಹಿರಿಯ ಅಧಿಕಾರಿಗಳು ಬೆಂಗಳೂರಿಗೆ ಯಾವುದೋ ಕೆಲಸಕ್ಕೆ ಬಂದಿದ್ದ ಸಮಯದಲ್ಲಿ ಕುಣಿಗಲ್‌ಗೆ ಅವರನ್ನು ಕರದುಕೊಂಡು ಹೋಗಿ ರೇಷ್ಮೆ ಹುಳು ಸಾಕುವವರನ್ನು ಭೇಟಿ ಮಾಡಿಸಿದಾಗ ಅವರಿಗೆ ಸಣ್ಣ ರೈತರ ಬವಣೆ- ಬಿತ್ತನೆ ಗೂಡು ಬೆಳೆಯಲು ಬೇಕಾಗುವ ನೈಪುಣ್ಯತೆ, ತಾಂತ್ರಿಕತೆ ಮತ್ತು ಇದರಿಂದ ರೈತರಿಗೆ ಬರುವ ಆದಾಯ ಕಂಡು ಆಶ್ಚರ್ಯಪಟ್ಟರಲ್ಲದೆ ಇಂತಹ ಒಂದು ಅಪೂರ್ವ ಕಸುಬಿಗೆ ರಾಷ್ಟ್ರೀಯ ಮಂಡಳಿ ನೆರವಾದರೆ ಇದೊಂದು ಕ್ರಾಂತಿಕಾರಕ ಹೆಜ್ಜೆಯಾಗುತ್ತದೆಂದು ಮನದಟ್ಟು ಮಾಡಿಕೊಡಲಾಯಿತು. ಈ ಯೋಜನೆಯ ಪ್ರಕಾರ ಸುಮಾರು ಇಪ್ಪತ್ತೊಂಬತ್ತು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ೩೪೦ ಮನೆಗಳನ್ನು ಕಟ್ಟಲು ನಿರ್ಧರಿಸಲಾಯಿತು. ಒಂದು ಮನೆ ಕಟ್ಟಲು ತಗಲುವ ೧೦, ೦೦೦- ೦೦ ರೂಪಾಯಿಗಳ ವೆಚ್ಚದಲ್ಲಿ, ರಾಷ್ಟ್ರೀಯ ಮಂಡಳಿಯಿಂದ ೩,೦೦೦-೦೦ ರೂಪಾಯಿಗಳು, ಕರ್ನಾಟಕ ಗೃಹ ಮಂಡಳಿಯಿಂದ ೨,೫೦೦-೦೦ ರೂಪಾಯಿಗಳು ರೇಷ್ಮೆ ಇಲಾಖೆ ವತಿಯಿಂದ ೪,೦೦೦-೦೦ ರೂಪಾಯಿಗಳು ಮತ್ತು ಫಲಾನುಭವಿಯಿಂದ ರೂ. ೫೦೦-೦೦ ಒದಗಿಸುವುದೆಂದು ತೀರ್ಮಾನವಾಯಿತು. ಮಾಮೂಲಾಗಿ ವಿಧಾನಸೌಧದಲ್ಲಿ ನೆಲೆಯೂರಿರುವ ಪಟ್ಟಭದ್ರ ಹಿತಾಸಕ್ತಿಗಳು ಈ ಯೋಜನೆಗೂ ಅಡ್ಡಿ ತರುವ ಪ್ರಯತ್ನ ಮಾಡಿದಾಗ್ಯೂ ನನ್ನ ಕಟಿಬದ್ಧ ತೀರ್ಮಾನದಿಂದಾಗಿ ಈ ಯೋಜನೆ ಕಾರ್ಯರೂಪಕ್ಕೆ ಬರುವುದನ್ನು ತಡೆಗಟ್ಟಲು ಯಾರಿಗೂ ಸಾಧ್ಯವಾಗಲಿಲ್ಲ. ಯಾವುದೇ ಅಡೆತಡೆ ಇದ್ದಾಗ್ಯೂ ಕೊನೆಗೂ ಸರ್ಕಾರದ ಮಂಜೂರಾತಿ ಇಲ್ಲದೆಯೇ ಈ ಯೋಜನೆಯನ್ನು ಕಾರ್ಯಗತಗೊಳಿಸುವ ಧೈರ್ಯ ಮಾಡಬೇಕಾಯಿತು.

ಕುಣಿಗಲ್ ತಾಲ್ಲೂಕಿನ ಹೊನ್ನೇನಹಳ್ಳಿ ಗ್ರಾಮದಲ್ಲಿ ಸಿಮೆಂಟ್ ಇಟ್ಟಿಗೆಗಳನ್ನು ತಯಾರು ಮಾಡುವ ಒಂದು ಬೃಹತ್ ಘಟಕವನ್ನು ಮಾಡಿ ಯೋಜನೆಯ ಪ್ರಾರಂಭಕ್ಕೆ ಈ ಪ್ರದೇಶದಲ್ಲಿ ೩೪೦ ಮನೆಗಳನ್ನು ನಿರ್ಮಿಸಲಾಯಿತು. ಇದನ್ನು ಗಮನಿಸಿದ ನನ್ನ ಕೆಲವು ಶಾಸಕ ಮಿತ್ರರು ಮಿಶ್ರ ತಳಿ ಗೂಡು ಬೆಳೆಯುವ ಪ್ರದೇಶದಲ್ಲಿಯೂ ಸಹಾ ಇಂತಹ ಯೋಜನೆಯನ್ನು ಜಾರಿಗೆ ತರಬೇಕೆಂದು ಒತ್ತಾಯಿಸಿದರು. ಅಷ್ಟೇ ಅಲ್ಲದೆ ಇದೇ ಪ್ರದೇಶದವರಾದ ಕೆಲವು ಸ್ನೇಹಿತರು,

ನನ್ನ ಯೋಜನೆ ಮತ್ತು ನನಗೆ ರೇಷ್ಮೆ ವ್ಯವಸಾಯದಲ್ಲಿರುವ ಕಾಳಜಿ ಅರಿತುಕೊಳ್ಳಲಾಗದೆ ನಾನು ನನ್ನ ಕ್ಷೇತ್ರದಲ್ಲಿ ಮಾತ್ರ ಈ ಯೋಜನೆಯ ಪ್ರಯೋಜನ ಪಡೆಯುತ್ತಿರುವುದಾಗಿ ದೂರಿದರು ಮತ್ತು ದೂಷಿಸಿದರು. ಆದರೆ ನನ್ನ ಮನಸ್ಸಿನಲ್ಲಿ ಈ ಯೋಜನೆಯನ್ನು ಎಲ್ಲಾ ಪ್ರದೇಶದಲ್ಲೂ ಹಂತ ಹಂತವಾಗಿ ಕಾರ್ಯರೂಪಕ್ಕೆ ತರುವ ಆಕಾಂಕ್ಷೆಯಿತ್ತು.

ಈ ಸಮಯಕ್ಕೆ ಕೆ.ಜಿ. ಗೆ ೫-೦೦ ರೂಪಾಯಿ ಬೋನಸ್ ಕೊಡುವ ಯೋಜನೆ ಜಾರಿಗೆ ಬಂದು ಸುಮಾರು ಎರಡು ವರ್ಷಗಳು ತುಂಬಿತ್ತು. ಈ ಅಲ್ಪ ಪರಿಹಾರದಿಂದ ಮಿಶ್ರತಳಿ ಗೂಡಿನ ಬೆಲೆಗೂ ಮತ್ತು ಮೈಸೂರು ಬಿತ್ತನೆ ಗೂಡಿನ ಬೆಲೆಗೂ ಇರುವ ಅಂತರವನ್ನು ಮುಚ್ಚಲು ಸಾಧ್ಯವಾಗಿರಲಿಲ್ಲ. ಉತ್ಪಾದನಾ ವೆಚ್ಚ, ಮಿಶ್ರತಳಿಯ ಗೂಡಿನ ಬೆಲೆ, ಬೈವೋಲ್ಟಿನ್ ಬಿತ್ತನೆ ಗೂಡುಗಳಿಗೆ ಸಿಗುತ್ತಿದ್ದ ಬೆಲೆ ಇವುಗಳನ್ನು ಗಮನಿಸದಾಗ ಮೈಸೂರು ಬಿತ್ತನೆ ಗೂಡಿಗೆ ಕೊಡುತ್ತಿದ್ದ ಬೆಲೆ ಮತ್ತು ನೂಲು ಬಿಚ್ಚಲು ಹೋಗುತ್ತಿದ್ದ ಬಿತ್ತನೆ ಗೂಡಿಗೆ ಕೊಡುತ್ತಿದ್ದ ಬೋನಸ್ ಏನೇನೂ ಅಲ್ಲವೆನಿಸಿತು. ಇದನ್ನು ವಿವರಿಸಿ ಅಂದಿನ ರೇಷ್ಮೆ ಖಾತೆಯ ಸಚಿವೆ ಶ್ರೀಮತಿ ಚಂದ್ರಪ್ರಭಾ ಅರಸ್ ಅವರಿಗೆ ೧೯.೧. ೧೯೮೮ರಂದು ಪತ್ರ ಬರೆದು, ಈ ಬೋನಸ್ ಹಣವನ್ನು ರೂ. ೫.೦೦ ರಿಂದ ರೂ. ೧೦.೦೦ಕ್ಕೆ ಹೆಚ್ಚುವರಿ ಮಾಡಬೇಕೆಂದು ವಿನಂತಿಸಿದೆ. ಹೂಜಿ ನೊಣಗಳ ಕಾಟದಿಂದಾಗಿ ಹಣ್ಣಾದ ಹುಳುಗಳನ್ನು ಚಂದ್ರಿಕೆಗೆ ಬಿಟ್ಟ ಮೇಲೆ ಹೂಜಿ ನೊಣಗಳಿಂದ ಅವನ್ನು ರಕ್ಷಿಸುವುದು ಒಂದು ದೊಡ್ಡ ಸಮಸ್ಯೆಯಾಗಿತ್ತು. ಇದನ್ನು ಗಮನದಲ್ಲಿಟ್ಟುಕೊಂಡು ಬಿತ್ತನೆ ವಲಯದಲ್ಲಿ ಹತ್ತು ಕಡೆ ಚಂದ್ರಿಕೆ ಇಡುವ ೧೨ ಲಕ್ಷ ರೂಪಾಯಿ ವೆಚ್ಚದ ಹತ್ತು 'ಹಜಾರ' (ಮೌಂಟಿಂಗ್ ಹಾಲ್) ಗಳನ್ನು ಕಟ್ಟುವ ಯೋಜನೆಗಾಗಿ ಸರ್ಕಾರವನ್ನು ಒತ್ತಾಯಿಸಿದೆ.

## ೧೧

೧೯೮೮ರ ಅಂತ್ಯ ಭಾಗದಲ್ಲಿ ಆದ ರಾಜಕೀಯ ಬದಲಾವಣೆಯಿಂದ ಶಾಸಕ ಮತ್ತು ಕರ್ನಾಟಕ ಗೃಹ ನಿರ್ಮಾಣ ಮಂಡಳಿಯ ಅಧ್ಯಕ್ಷನಾಗಿದ್ದ ನಾನು ತುಮಕೂರು ಲೋಕಸಭಾ ಕ್ಷೇತ್ರದಲ್ಲಿ  ಜನತಾ ಪಕ್ಷದ ಉಮೇದುವಾರನಾಗಿ ಚುನಾವಣೆಯಲ್ಲಿ ಸ್ಪರ್ಧಿಸಿ ಶ್ರೀಮತಿ ಇಂದಿರಾಗಾಂಧಿಯವರ ಸೋಲಿನ ಅನುಕಂಪದ ಅಲೆಯಿಂದಾಗಿ ಅಲ್ಪಮತಗಳ ಅಂತರದಲ್ಲಿ ಸೋಲಬೇಕಾಯಿತು. ೧೯೮೩- ೮೮ರಲ್ಲಿ ಆಡಳಿತ ಮತ್ತು ಒಳ್ಳೆಯ ಕೆಲಸ ಮಾಡಿದ್ದಾಗ್ಯೂ ಈ ಚುನಾವಣೆಯಲ್ಲಿ ಜನತಾ ಪಕ್ಷಕ್ಕೆ ಬಹುಮತ ಸಿಗಲಿಲ್ಲ. ಜನರ ಅಭಿಮತಕ್ಕೆ ಮಣಿದು ಕರ್ನಾಟಕ ವಿಧಾನಸಭೆಯನ್ನು ವಿಸರ್ಜಿಸಿ ಹೊಸ ಚುನಾವಣೆಗೆ ಕರೆ ಕೊಡಲಾಯಿತು. ೧೯೮೫ರಲ್ಲಿ ನಡೆದ ಈ ಸಾರ್ವತ್ರಿಕ ಚುನಾವಣೆಯಲ್ಲಿ ನಾನು ಪುನಃ ಕುಣಿಗಲ್ ವಿಧಾನಸಭಾ ಕ್ಷೇತ್ರದಿಂದ ಸ್ಪರ್ಧಿಸಿ ಸುಮಾರು ೨೫,೦೦೦ ಅಧಿಕ ಮತಗಳ ಅಂತರದಿಂದ ಗೆದ್ದು ಬಂದೆ. ನನ್ನ ಅಲ್ಪ ಸೇವೆಗೆ ಜನರು ತೋರಿದ ಅಗಾಧ ಪ್ರೀತಿ-ವಿಶ್ವಾಸ ನನ್ನನ್ನು ಬೆರಗುಗೊಳಿಸಿತು. ದೈನ್ಯತೆಯಿಂದ ನಾನು ಮೂಕನಾದೆ. ಈ ಮುಗ್ಧ ಜನರು ತೋರಿರುವ ಪ್ರೀತಿ-ವಿಶ್ವಾಸಗಳಿಗೆ ನಾನು ಅರ್ಹನೆ ಎನ್ನುವ ಪ್ರಶ್ನೆ ನನ್ನನ್ನು ಕಾಡಿತು. ನನಗೆ ಈ ಜನರು ಕೊಟ್ಟಿರುವ ಈ ಶಕ್ತಿಯನ್ನು ಅವರ ಸೇವೆಗಾಗಿ ತೊಡಗಿಸಬೇಕೆಂಬ ಹಂಬಲ ನನ್ನಲ್ಲಿ ಮತ್ತೂ ತೀವ್ರವಾಯಿತು.

ಶ್ರೀ ರಾಮಕೃಷ್ಣ ಹೆಗಡೆಯವರ ನೇತೃತ್ವದಲ್ಲಿ ರಚಿತವಾದ ಮಂತ್ರಿಮಂಡಲದಲ್ಲಿ ನಾನು ಸಚಿವನಾಗಿ ಪ್ರಮಾಣ ವಚನ ಸ್ವೀಕರಿಸಿದ ದಿನ ಖಾತೆಗಳ ನಿರ್ಧಾರವಾಗಿರಲಿಲ್ಲ. ನನಗೆ ಗೊತ್ತಿರುವ ಎಲ್ಲಾ ಸ್ನೇಹಿತರೂ ಸರಿಯಾಗಿಯೇ ಊಹಿಸಿದ್ದಂತೆ ನನಗೆ ರೇಷ್ಮೆ ಖಾತೆಯನ್ನು ವಹಿಸಿದ್ದರು. ಅಧಿಕಾರ ನನಗೆ ಬೇಕೇ ಬೇಕು. ಆದರೆ ಅದು ಜನರ ಸೇವೆಗೆ ಹೊರತು ಸ್ವಾರ್ಥ ಸಾಧನೆಗಲ್ಲವೆಂಬ ನಂಬಿಕೆಯುಳ್ಳ ನನಗೆ ಈ ಪ್ರಬಲ ಅಧಿಕಾರದ ಅಸ್ತ್ರ ಒದಗಿ ಬಂದದ್ದು ಅದರಲ್ಲೂ ಅನೇಕ ವರ್ಷಗಳ ಕಾಲ ಹೋರಾಡಿದ್ದ ಕ್ಷೇತ್ರವಾದ ರೇಷ್ಮೆ ಖಾತೆಯ ಮಂತ್ರಿಯಾದುದು ಒಂದು ಒಳ್ಳೆಯ ಅವಕಾಶ ಮತ್ತು ಸವಾಲೆಂದು ತಿಳಿದು ಕೆಲಸಕ್ಕೆ ತೊಡಗಿದೆ. ಅನೇಕ ವರ್ಷಗಳಿಂದ ನಾನಾ ವೇದಿಕೆಗಳಲ್ಲಿ ನಾನು ಈ ಉದ್ಯಮದ ಬಗ್ಗೆ ಹಂಬಲಿಸಿದ ಕೆಲಸಗಳನ್ನು ನಾನೇ ಮಾಡುವ ಅವಕಾಶ ಒದಗಿ ಬಂದಿತ್ತು. ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷನಾಗಿ ಈ ಉದ್ಯಮದ ಬಗ್ಗೆ ಚರ್ಚಿಸಲು ಕರ್ನಾಟಕದ ರೇಷ್ಮೆ ಸಚಿವರನ್ನು ಭೇಟಿಮಾಡಲು ಅನೇಕ ಸಾರಿ ಪ್ರಯತ್ನಪಟ್ಟು ವಿಫಲನಾಗಿದ್ದ ನಾನೇ ರೇಷ್ಮೆ ಖಾತೆಯ ಸಚಿವನಾದಾಗಿನ ನನ್ನ ಮನಃ ಸ್ಥಿತಿಯನ್ನು ಊಹಿಸಿಕೊಳ್ಳಲು ನಿಮಗೇ ಬಿಡುತ್ತೇನೆ.

ಮೂಲ ಬಿತ್ತನೆ ಪ್ರದೇಶಗಳಿಗೆ ವಿಶ್ವಬ್ಯಾಂಕಿನ ನೆರವಿನ ರೇಷ್ಮೆ ಅಭಿವೃದ್ಧಿಯ ಯೋಜನೆಯಡಿಯಲ್ಲಿ ಯಾವ ನೆರವು ಮತ್ತು ಕಾರ್ಯಕ್ರಮ ಇಲ್ಲದಿದ್ದುದರ ಬಗ್ಗೆ ಪ್ರತಿಭಟಿಸಲು ನನಗೆ ಇದೊಂದು ವಿಪರ್ಯಾಸವಾಗಿ ಕಂಡಿತು. ಮೂಲಭೂತವಾಗಿ ಬಿತ್ತನೆ ಪ್ರದೇಶದ ಅಭಿವೃದ್ಧಿಯಾಗದೆ ರೇಷ್ಮೆ ಉತ್ಪಾದನೆ ಹೆಚ್ಚಿಸಲು ತರುವ ಕಾರ್ಯಕ್ರಮಗಳು ಎಷ್ಟರಮಟ್ಟಿಗೆ ಯಶಸ್ವಿಯಾಗುತ್ತದೆಂದು ತೀವ್ರವಾಗಿ ಪರಿಶೀಲಿಸಲು ಇಲಾಖೆಯ ಆಯುಕ್ತರು ಮತ್ತು ನಿರ್ದೇಶಕರಿಗೆ ಸೂಚನೆ ಕೊಟ್ಟೆ. ಈಗಿರುವ ಲೋಪ-ದೋಷಗಳನ್ನು ಒಪ್ಪಿಕೊಂಡ ಅಧಿಕಾರಿಗಳು ಈ ಲೋಪ-ದೋಷಗಳನ್ನು ಪರಿಹರಿಸುವ ಪ್ರಯತ್ನದಲ್ಲಿ ನಿರತರಾದರು. ರೇಷ್ಮೆ ಅಭಿವೃದ್ಧಿ ಯೋಜನೆಯ ಮಧ್ಯಕಾಲಿಕ ಗುಣಸಮೀಕ್ಷೆ ಅದೇ ಸಂದರ್ಭಕ್ಕೆ ಒದಗಿ ಬಂತು. ಇದರ ಸದುಪಯೋಗ ಪಡೆದು ಮೈಸೂರು ಬಿತ್ತನೆ ಪ್ರದೇಶ ಬೈವೋಲ್ಟಿನ್ ಬಿತ್ತನೆ ಪ್ರದೇಶ ಮತ್ತು ಮೂಲ ಬಿತ್ತನೆ ಪ್ರದೇಶಗಳಿಗೆ ಬೇಕಾಗಿರುವ ಸವಲತ್ತು ಮತ್ತು ಸಲಕರಣೆಗಳನ್ನು ಒದಗಿಸಲು ಬೇಕಾದ ಕಾರ್ಯಕ್ರಮವನ್ನು ಪರಿಷ್ಕೃತ ರೇಷ್ಮೆ ಅಭಿವೃದ್ಧಿ ಯೋಜನೆಯ ಅಡಿಯಲ್ಲಿ ಅಳವಡಿಸಲಾಯಿತು. ಹೀಗಾಗಿ ಮೈಸೂರು ಬಿತ್ತನೆ ಪ್ರದೇಶದಲ್ಲಿ ಬೇಕಾದ ಕಟ್ಟಡಗಳು ಮತ್ತು ಗುಣಮಟ್ಟದ ಮೂಲ ತಳಿಯನ್ನು ರೈತರ ಹಂತದಲ್ಲಿ ಬೆಳೆಯಲು ಬೇಕಾಗುವ ಚಾಕಿ ಮತ್ತು ತಾಂತ್ರಿಕ ಕೇಂದ್ರಗಳನ್ನು ಸ್ಥಾಪಿಸಲಾಯಿತು. ಹಾಗೆಯೇ ಗುಣಮಟ್ಟದ ಬಿತ್ತನೆ ಮೊಟ್ಟೆಗಳನ್ನು ತಯಾರಿಸಲು ಮತ್ತು ಬೆಳೆದ ಬಿತ್ತನೆ ಗೂಡುಗಳನ್ನು ಯೋಗ್ಯ ರೀತಿಯಲ್ಲಿ ಶೇಖರಿಸಿ ವಿಲೇವಾರಿ ಮಾಡಲು ಸೂಕ್ತ ಕಟ್ಟಡ ಕಟ್ಟಿಸಲು ಕ್ರಮ ತೆಗೆದುಕೊಳ್ಳಲಾಯಿತು. ನಾನು ರೇಷ್ಮೆ ಖಾತೆ ಸಚಿವನಾದ ಮೇಲೆ ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷ ಪದವಿಗೆ ರಾಜೀನಾಮೆ ಕೊಟ್ಟೆ. ಸಂಘದ ಅನೇಕ ಸದಸ್ಯರು ನಾನು ಅಧ್ಯಕ್ಷನಾಗಿ

ಮುಂದುವರಿಯುವಂತೆ ಒತ್ತಾಯ ತಂದರು. ಆದರೆ ನಾನು ರೇಷ್ಮೆ ಖಾತೆಯ ಸಚಿವನಾಗಿ ಕೈಗಾರಿಕೆಗೆ ಸಂಬಂಧಪಟ್ಟ ಸಂಘದ ಅಧ್ಯಕ್ಷನಾಗಿರುವುದು ಉಚಿತವಲ್ಲವೆಂದು ಸಂಘದ ಧ್ಯೇಯ ಧೋರಣೆಗಳಿಗೂ ಮತ್ತು ಸರ್ಕಾರದ ಧ್ಯೇಯ ಧೋರಣೆಗಳಿಗೂ ಸಂಘರ್ಷ ಉಂಟಾದಾಗ ಆಗಬಹುದಾದ ಪರಿಣಾಮದ ದೃಷ್ಟಿಯಿಂದಲೂ ಹಾಗೂ ಅನೇಕ ಹಿತಾಸಕ್ತಿಗಳ ಒತ್ತಡದಲ್ಲಿ ಕೆಲಸ ಮಾಡಬೇಕಾದ ಸಚಿವನಾಗಿ ಸಂಘದ ಅಧ್ಯಕ್ಷನಾಗಿ ಸಮರ್ಥವಾಗಿ ಕೆಲಸ ಮಾಡಲು ಸಾಧ್ಯವಾಗುವುದಿಲ್ಲವೆಂದು ಹೇಳಿ ನನ್ನ ರಾಜೀನಾಮೆಯ ತೀರ್ಮಾನಕ್ಕೆ ಅಂಟಿಕೊಂಡೆ. ನಾನು ರಾಜೀನಾಮೆ ಕೊಟ್ಟಿದ್ದರೂ ಇದುವರೆಪಿಗೂ ಯಾವ ಹೊಸ ಅಧ್ಯಕ್ಷನನ್ನು ಆರಿಸದೆ ಸಂಘದ ಉಪಾಧ್ಯಕ್ಷರಾದ ಶ್ರೀ ಗುರುಮಲ್ಲ ದೇವರು ಅವರೇ ಅಧ್ಯಕ್ಷರಾಗಿ ಮುಂದುವರೆದರು.

ನಾನು ಸಚಿವನಾದಾಗ ನೂರಾಹತ್ತು ಕೋಟಿ ರೂಪಾಯಿಗಳ ವೆಚ್ಚದ ವಿಶ್ವ ಬ್ಯಾಂಕ್ ನೆರವಿನ ಐದು ವರ್ಷಗಳ ಕರ್ನಾಟಕ ರೇಷ್ಮೆ ಅಭಿವೃದ್ಧಿ ಯೋಜನೆಯು ಒಂದು ಹಂತ ತಲುಪಿತ್ತು. "ನಾನಾ ವೇದಿಕೆಗಳಲ್ಲಿ ನಾನು ರೇಷ್ಮೆ ಉದ್ಯಮದ ಬಗ್ಗೆ ಮಾಡಿದ ಹೋರಾಟ. ದುಡಿದ ದುಡಿಮೆ, ಇದರಿಂದ ಪಡೆದ ಅನುಭವಗಳನ್ನು ಆಧಾರವಾಗಿಟ್ಟುಕೊಂಡು ಸಮರ್ಪಕವಾಗಿ ಈ ಖಾತೆಯನ್ನು ನಿರ್ವಹಿಸುವ ವಿಶ್ವಾಸದಿಂದಲೇ ಈ ಖಾತೆಯನ್ನು ನನಗೆ ವಹಿಸಲಾಯಿತೆಂದು" ಸೂಲಿಬೆಲೆಯಲ್ಲಿ ಸರ್ಕಾರಿ ರೇಷ್ಮೆ ಬಿತ್ತನೆ ಕೋಟಿ ಕಟ್ಟಡದ ಉದ್ಘಾಟನೆ ಮಾಡುವಾಗ ಮಾನ್ಯ ಮುಖ್ಯಮಂತ್ರಿಯವರು ಸಾರ್ವಜನಿಕವಾಗಿ ಹೇಳಿ ವಿಶ್ವಬ್ಯಾಂಕಿನ ನೆರವಿನ ಯೋಜನೆಯನ್ನು ಉತ್ತಮವಾಗಿ ಕಾರ್ಯರೂಪಕ್ಕೆ ತರಲು ನನಗೆ ತಿಳಿಸಿದ್ದರು. ಅವರು ನಿರೀಕ್ಷಿಸಿದ ಮಟ್ಟಕ್ಕೆ ಕೆಲಸ ಮಾಡುವುದು ನನ್ನ ಕರ್ತವ್ಯವಾಗಿತ್ತು. ಅಧಿಕಾರಿಗಳೊಡನೆ ಚರ್ಚಿಸಿ, ಯೋಜನೆಯನ್ನು ಕೂಲಂಕಷವಾಗಿ ಅಭ್ಯಸಿಸಿ, ಕಾರ್ಯಪ್ರವೃತ್ತನಾದೆ. ಈ ಯೋಜನೆಯ ಬಗ್ಗೆ ಸ್ಥೂಲವಾಗಿ ಹೇಳಬಹುದಾದಾರೆ:

೧) ಯೋಜನೆಯ ಕೊನೆಯ ವರ್ಷದಲ್ಲಿ ರೇಷ್ಮೆ ಉತ್ಪಾದನೆ ೧೬೦೦ ಟನ್ ಹೆಚ್ಚಾಗಬೇಕು, ಅಂದರೆ ೧೯೭೯-೮೦ರಲ್ಲಿ ೨೬೩೧ ಟನ್ ಇದ್ದ ರೇಷ್ಮೆ ಉತ್ಪಾದನೆ, ಐದು ವರ್ಷದ ಕೊನೆಯಲ್ಲಿ ೪೨೩೧ ಟನ್ ಉತ್ಪಾದನಾ ಸಾಮರ್ಥ್ಯ ಗಳಿಸಬೇಕು. ಇದರಲ್ಲಿ ೧,೦೦೦ ಟನ್ ರೇಷ್ಮೆ ಅಂತರರಾಷ್ಟ್ರೀಯ ಗುಣಮಟ್ಟದ ಬೈವೋಲ್ಟಿನ್ ರೇಷ್ಮೆಯಾಗಿರಬೇಕು.

೨) ಕಚ್ಚಾ ರೇಷ್ಮೆ ಮತ್ತು ಸ್ಪನ್ ರೇಷ್ಮೆಯ ದಾರವನ್ನು ರಫ್ತು ಮಾಡಲು ಯೋಗ್ಯ ಗುಣಮಟ್ಟಕ್ಕೇರಿಸಲು ಅನುಕೂಲಕರವಾದ ಆಧುನಿಕ ಸಂಸ್ಕರಣ ಘಟಕಗಳನ್ನು ಮತ್ತು ತಾಂತ್ರಿಕತೆಯನ್ನು ಅಳವಡಿಸುವುದು.

೩) ಹೆಚ್ಚು ಕಾಲಾವಧಿ ಬೇಕಾಗಿರುವ ರೇಷ್ಮೆ ಕೃಷಿ ಸುಧಾರಣೆಗೆ ರೇಷ್ಮೆ ಕೃಷಿಯಲ್ಲಿ ಮುಂದುವರಿದ ಪ್ರದೇಶಗಳಿಂದ ಅತ್ಯಾಧುನಿಕ ತಾಂತ್ರಿಕ ಜ್ಞಾನ ಪಡೆದು ಆಚರಣೆಗೆ ತರುವುದು ಮತ್ತು ಸ್ಥಳೀಯ ರೇಷ್ಮೆ ಸಂಶೋಧನಾಲಯವನ್ನು ವಿಸ್ತರಿಸುವುದು.

೪) ಈ ಗುರಿ ಸಾಧನೆಗೆ ಪೂರಕವಾಗಿ ೧೪೦೦ ಹೆಕ್ಟೇರ್ ಪ್ರದೇಶದಲ್ಲಿ ಹಿಪ್ಪುನೇರಳೆ ತೋಟಗಳನ್ನು ಹೊಸದಾಗಿ ಬೆಳೆಯಲು ಅನುಕೂಲ ಕಲ್ಪಿಸುವುದು ಮತ್ತು ಯೋಜನೆಯ

ಪ್ರಾರಂಭದಲ್ಲಿದ್ದ ೨೪,೦೦೦ ಹೆಕ್ಟೇರ್ ನೀರಾವರಿ ಹಿಪ್ಪುನೇರಳೆಗೆ ಮತ್ತು ೪,೬೦, ೦೦೦ ಹೆಕ್ಟೇರ್ ಮಳೆ ಆಧಾರಿತ ಹಿಪ್ಪುನೇರಳೆ ಪ್ರದೇಶಗಳಲ್ಲಿ ಮತ್ತು ಹೊಸ ಪ್ರದೇಶಗಳಿಗೆ ಗುಣಮಟ್ಟದ ರೇಷ್ಮೆ ಮೊಟ್ಟೆಗಳನ್ನು ಮತ್ತು ತಾಂತ್ರಿಕ ನೆರವನ್ನು ಕೊಡುವುದು. ಇದಕ್ಕೋಸ್ಕರ ವರ್ಷಕ್ಕೆ ಒಂದು ಲಕ್ಷ ಮೊಟ್ಟೆ ತಯಾರು ಮಾಡುವ ಸಾಮರ್ಥ್ಯವುಳ್ಳ ೧೦ ಆಧುನಿಕ ಮೊಟ್ಟೆ ತಯಾರಿಕಾ ಕೇಂದ್ರಗಳು, ೧೫೦ ತಾಂತ್ರಿಕ ಸೇವಾ ಕೇಂದ್ರಗಳು, ೧೫೦೦ ಚಾಕಿ ಸಾಗಾಣಿಕೆ ಕೇಂದ್ರಗಳು ಮತ್ತು ಇದಕ್ಕೆ ಬೇಕಾದ ಸಿಬ್ಬಂದಿ ಸವಲತ್ತುಗಳು ಹಾಗೂ ೧೧ ಗೂಡಿನ ಮಾರುಕಟ್ಟೆಗಳಿಗೆ ಹೊಸ ಕಟ್ಟಡಗಳನ್ನು ಒದಗಿಸಿ, ವಿಸ್ತರಿಸುವುದು.

ಕರ್ನಾಟಕ ರೇಷ್ಮೆ ಅಭಿವೃದ್ಧಿ ಯೋಜನೆ ಎಲ್ಲೆಲ್ಲೂ ಕುತೂಹಲ ಕೆರಳಿಸಿತ್ತು. ಇಡೀ ರಾಷ್ಟ್ರದಲ್ಲಿ ಏಕೆ? ವಿಶ್ವದಲ್ಲಿಯೇ ಈ ಯೋಜನೆಯ ಪ್ರಗತಿಯನ್ನು ಕುತೂಹಲ ಮತ್ತು ಆಸಕ್ತಿಗಳಿಂದ ನೋಡುತ್ತಿದ್ದ ಕಾಲ ಅದು. ವರ್ಷ ವರ್ಷವೂ ರೇಷ್ಮೆ ಬೇಡಿಕೆ ಹೆಚ್ಚಾಗುತ್ತಿತ್ತು. ವಿಶ್ವದಲ್ಲೇ ರೇಷ್ಮೆ ಉತ್ಪಾದನೆಯಲ್ಲಿ ಅಗ್ರಗಣ್ಯ ದೇಶವಾದ ಜಪಾನ್ ಮತ್ತು ಅಷ್ಟೇ ಪ್ರಮುಖವಾದ ಮತ್ತೊಂದು ರಾಷ್ಟ್ರ ಕೋರಿಯಾದಲ್ಲಿ ರೇಷ್ಮೆಯ ಉತ್ಪಾದನೆ ಗಣನೀಯವಾಗಿ ಕಡಿಮೆಯಾಗಿತ್ತು. ಇಂತಹ ಸಂದರ್ಭದಲ್ಲಿ ಭಾರತ ದೇಶದ ಅದರಲ್ಲೂ ಕರ್ನಾಟಕದ ರೇಷ್ಮೆ ಉತ್ಪತ್ತಿಯ ಬಗ್ಗೆ, ವಿಶ್ವದ ಗಮನವಿದ್ದದ್ದು ಆಶ್ಚರ್ಯವಾಗಿರಲಿಲ್ಲ. ಕಚ್ಚಾ ರೇಷ್ಮೆಗೆ ಇದ್ದ ಬೇಡಿಕೆಯಿಂದಾಗಿ, ಉದ್ಯಮದಲ್ಲಿ ತೊಡಗಿದ್ದ ಬೆಳೆಗಾರರಿಗೆ, ನೂಲು ಬಿಚ್ಚುವವರಿಗೆ, ಕೈ ಮಗ್ಗದವರಿಗೆ ಮತ್ತು ರೇಷ್ಮೆ ರಫ್ತುದಾರರಿಗೆ ಬಹಳ ಲಾಭ ಬರುತ್ತಿತ್ತು. ಇಂತಹ ಸಂದರ್ಭದಲ್ಲಿ ರೇಷ್ಮೆ ನೂಲಿನ ಉತ್ಪಾದನೆ ಗುರಿಯನ್ನು ಮುಟ್ಟುವುದರಲ್ಲಿ ಅನುಮಾನವಿರಲಿಲ್ಲ. ಆದರೆ ಒಂದು ಸಾವಿರ ಟನ್ ಅಂತರರಾಷ್ಟ್ರೀಯ ಗುಣಮಟ್ಟದ ರೇಷ್ಮೆ ತಯಾರಿಕೆ ಮತ್ತು ರೇಷ್ಮೆಯನ್ನು ರಫ್ತು ಮಾಡುವ ನಮ್ಮ ಗುರಿ ಕನಸಾಗಿಯೇ ಉಳಿದಿತ್ತು. ಈ ದೃಷ್ಟಿಯಿಂದ ಕರ್ನಾಟಕ ರೇಷ್ಮೆ ಅಭಿವೃದ್ಧಿ ಯೋಜನೆ ನಿರೀಕ್ಷಿಸಿದಷ್ಟು ಸಫಲವಾಗಿಲ್ಲವೆಂದು ನಾನು ಅಭಿಪ್ರಾಯಪಟ್ಟು, ಅದು ಪತ್ರಿಕೆಯಲ್ಲಿ ಪ್ರಕಟವಾದಾಗ ಅಂದಿನ ಸರ್ಕಾರದ ಕಾರ್ಯದರ್ಶಿಗಳಾಗಿದ್ದ ಶ್ರೀ ಪದ್ಮನಾಭ ಅವರು ದಿಗಿಲುಗೊಂಡು ನನ್ನಲ್ಲಿ ಬಂದಾಗ ನಾನು "ನಾನು ಕೊಟ್ಟಿರುವ ಹೇಳಿಕೆಯನ್ನು ನಾನು ಸಮರ್ಥಿಸಿಕೊಳ್ಳಬಲ್ಲೆ, ನೀವು ಗಾಬರಿಯಾಗವುದು ಬೇಡವೆಂದು ತಿಳಿಸಿದೆ."

ಹೊರ ದೇಶಗಳಿಂದ ಮುಖ್ಯವಾಗಿ ಚೀನಾದಿಂದ ಗುಣಮಟ್ಟದ ರೇಷ್ಮೆಯನ್ನು ಕಡಿಮೆ ದರದಲ್ಲಿ ಆಮದು ಮಾಡಿಕೊಳ್ಳುವುದು ವರ್ಷ ವರ್ಷ ಜಾಸ್ತಿಯಾಗುತ್ತಿತ್ತು. ಈ ಗೊತ್ತುಗುರಿಯಿಲ್ಲದ ಆಮದು ಮಾರುಕಟ್ಟೆಯಲ್ಲಿ ತೀವ್ರತರವಾದ ಏರು-ಪೇರುಗಳಿಗೆ ಅವಕಾಶವಾಯಿತು. ತುಂಬಾ ಉತ್ಸಾಹದಿಂದ ಕರ್ನಾಟಕ ರೇಷ್ಮೆ ಅಭಿವೃದ್ಧಿ ಯೋಜನೆಯನ್ನು ಕಾರ್ಯರೂಪಕ್ಕೆ ತರುತ್ತಿರುವ ಈ ಸಮಯದಲ್ಲಿ ರೇಷ್ಮೆ ಉತ್ಪಾದನೆಯನ್ನು ಕರ್ನಾಟಕದಲ್ಲೇ ಅಲ್ಲದೆ, ಇತರ ರಾಜ್ಯಗಳಲ್ಲೂ ಹೆಚ್ಚಿಸುವ ಚಿನ್ನದಂತಹ ಅವಕಾಶಕ್ಕೆ ಈ ಆಮದು ನೀತಿ ಮಾರಕವಾಗುತ್ತದೆ ಎನ್ನುವುದು ನನಗೆ ಖಚಿತವಾಗಿ ಮನವರಿಕೆಯಾಯಿತು. ನಮ್ಮ ದೇಶದಲ್ಲಿ ರೇಷ್ಮೆ ಕಸುಬು ಶತಮಾನಗಳಿಂದ ಇದ್ದರೂ ಬ್ರಿಟಿಷರ ಆಮದು ನೀತಿ ಒಂದು ಕಾಲದಲ್ಲಿ

ನಮ್ಮ ಈ ಕೈಗಾರಿಕೆಗೆ ಮಾರಕವಾಗಿತ್ತು. ನಮ್ಮ ದೇಶದಲ್ಲಿ ಬ್ರಿಟಿಷರ ಕಾಲದಿಂದಲೂ ಉತ್ಪತ್ತಿಯಾಗುತ್ತಿರುವ ರೇಷ್ಮೆ ಬೇಡಿಕೆಗಿಂತ ಕಡಿಮೆಯಾಗಿದೆ. ಸ್ವಾತಂತ್ರ್ಯಪೂರ್ವ ದಿನಗಳಲ್ಲಿ ದೊರೆತ ಅನುಕೂಲ ಪರಿಸ್ಥಿತಿಯಿಂದಾಗಿ ಈ ಕೈಗಾರಿಕೆ ಚೇತರಿಸಿಕೊಳ್ಳಲು ಅವಕಾಶವಾಯಿತು.

ಇತ್ತೀಚಿನ ವರ್ಷಗಳಲ್ಲಿ ರಫ್ತು ವಹಿವಾಟು ಹೆಚ್ಚಾದುದರಿಂದಲೂ ಹಾಗೂ ಆಂತರಿಕ ಬೇಡಿಕೆ ಜಾಸ್ತಿಯಾಗಿದ್ದುದರಿಂದಲೂ ರೇಷ್ಮೆಯ ಬೇಡಿಕೆ ಹೆಚ್ಚಾಗಿತ್ತು. "ಉತ್ತಮ ಬೆಳೆ ಅದಕ್ಕೆ ತಕ್ಕ ಬೆಲೆ ಈ ಉದ್ಯಮದ ವಿಕಾಸಕ್ಕೆ ಇರುವ ಒಂದೇ ಒಂದು ದಾರಿ" ಎಂದು ಯಾವಾಗಲೂ ನಂಬಿದವನು ನಾನು. ಇದರಿಂದಾಗಿ ರೇಷ್ಮೆ ದಾರಕ್ಕೆ ಎಷ್ಟೇ ಬೆಲೆ ಹೆಚ್ಚಾದರೂ ಅದು ಒಳ್ಳೆಯದೆಂದು ಭಾವಿಸಿದವನು. ಕಾರಣ ಇಲ್ಲಿ ಕೊಂಡುಕೊಳ್ಳುವವನು ಧನಿಕ, ಉತ್ಪಾದನೆ ಮಾಡುವವನು ಬಡವ, ಬೆಲೆ ಹೆಚ್ಚಿದಂತೆಲ್ಲ ಉದ್ಯಮ ವಿಕಾಸವಾಗುತ್ತದೆ.

ಭಾರತದ ರೇಷ್ಮೆ ಉದ್ಯಮಕ್ಕೆ ತಿರುವು ಕೊಡುವಂತಹ ಅವಕಾಶವಿರುವ ಈ ಸಂದರ್ಭದಲ್ಲಿ ರಾಜಕೀಯವಾಗಿ ಪ್ರಬಲವಾಗಿರುವ ಉತ್ತರ ಪ್ರದೇಶದ ವಾರಣಾಸಿಯ ಹಿತಾಸಕ್ತಿಯ ಗುಂಪೊಂದು ಆಮದು ನೀತಿಯನ್ನು ಸಡಿಲಪಡಿಸಲು ಕೇಂದ್ರ ಸರ್ಕಾರದ ಮೇಲೆ ಪ್ರಭಾವ ಬೀರತೊಡಗಿತು. ಈ ಆಮದು ನೀತಿಯ ಅನಿಷ್ಟ ಪರಂಪರೆಯ ನಿಜರೂಪದ ಅರಿವಿಲ್ಲದ ಬೇರೆ ರಾಜ್ಯದವರೂ ಸಹ ಕಡಿಮೆ ಬೆಲೆಯಲ್ಲಿ ಉತ್ತಮ ಗುಣಮಟ್ಟದ ಚೀನಾದೇಶದ ರೇಷ್ಮೆಯನ್ನು ಆಮದು ಮಾಡಿಕೊಳ್ಳುವುದರಲ್ಲಿ ಆಸಕ್ತಿ ತೋರಿದರು. ರಾಷ್ಟ್ರದ ರೇಷ್ಮೆ ಉತ್ಪತ್ತಿ ಮಾಡುವ ಇತರ ರಾಜ್ಯದ ಸಂಬಂಧಪಟ್ಟ ಸಚಿವರುಗಳಿಗೆ ಮತ್ತು ಅಧಿಕಾರಿಗಳಿಗೆ ನಾನು ಈ ವಿಷಯದಲ್ಲಿ ಪತ್ರ ಬರೆದು ಆಮದು ನೀತಿಯನ್ನು ಬೆಂಬಲಿಸುವುದರ ಪರಿಣಾಮದ ಬಗ್ಗೆ ಎಚ್ಚರಿಸಿದೆ. ಅಂದಿನ ಜವಳಿ ಖಾತೆ ಸಚಿವರೂ, ಈಗಿನ ನಮ್ಮ ರಾಜ್ಯಪಾಲರೂ ಆಗಿರುವ ಶ್ರೀ ಖುರ್ಷಿದ್ ಆಲಂ ಖಾನ್‌ರನ್ನು ಹಾಗೂ ತಮಿಳುನಾಡಿನ ಅಂದಿನ ಸಣ್ಣ ಕೈಗಾರಿಕೆಗಳ ಸಚಿವರನ್ನು ಖುದ್ದಾಗಿ ಭೇಟಿ ಮಾಡಿ ವಾರಾಣಾಸಿ ಮತ್ತು ತಮಿಳುನಾಡಿಗೆ ಬೇಕಾದಷ್ಟು ರೇಷ್ಮೆ ನೂಲನ್ನು ಒದಗಿಸುವ ಭರವಸೆ ಕೊಟ್ಟು ರೇಷ್ಮೆ ಆಮದು ಮಾಡಿಕೊಳ್ಳುವುದನ್ನು ಬೆಂಬಲಿಸಬೇಡಿರೆಂದು ಅವರನ್ನು ಒತ್ತಾಯಿಸಿದೆ. ಬೆಂಗಳೂರಿನಲ್ಲಿ ನಡೆದ ರಾಷ್ಟ್ರೀಯ ರೇಷ್ಮೆ ಉದ್ಯಮದ ಸಭೆಯೊಂದರಲ್ಲಿ ಕೇಂದ್ರ ಸರ್ಕಾರದ ಈ ನೀತಿಯನ್ನು ಕಟುವಾಗಿ ನಾನು ಟೀಕಿಸಿದಾಗ ಈ ನನ್ನ ಟೀಕೆ ಅತಿಯಾಯಿತೆಂದು ಹೇಳಿದವರೂ ಉಂಟು. ಒಂದು ಕಡೆ ರೇಷ್ಮೆಯ ಬೆಲೆ ಹೆಚ್ಚುತ್ತಿರುವಾಗ ಬೇಡಿಕೆ ಇರುವಷ್ಟು ರೇಷ್ಮೆಯನ್ನು ಭಾರತದಲ್ಲಿ ಉತ್ಪತ್ತಿ ಮಾಡಲು ಸಾಧ್ಯವಿಲ್ಲದಿರುವಾಗ ಕೇಂದ್ರ ಸರ್ಕಾರದಿಂದ ಆಮದು ಅನಿವಾರ್ಯವೆಂದು ಆಗ ಕರ್ನಾಟಕ ವಿಧಾನಸಭೆಯಲ್ಲಿ ವಿರೋಧ ಪಕ್ಷದ ನಾಯಕರಾಗಿದ್ದ ಶ್ರೀ ವೀರಪ್ಪ ಮೊಯಿಲಿಯವರು ಹೇಳಿದ್ದಲ್ಲದೆ "ನೀವು ಈಗ ಕೇವಲ ರೇಷ್ಮೆ ಬೆಳೆಗಾರರ ಸಂಘದ ಅಧ್ಯಕ್ಷರಲ್ಲ, ಕರ್ನಾಟಕದ ಇಡೀ ರೇಷ್ಮೆ ಉದ್ಯಮದ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಕೆಲಸ ಮಾಡಬೇಕಾಗಿರುವ ಸಚಿವರಾಗಿದ್ದೀರಿ. ಆದ್ದರಿಂದ ಬೆಳೆಗಾರರ ಪಕ್ಷಪಾತಿ ಆಗಿ ಮಾತಾಡುವುದು ಸರಿಯಲ್ಲ" ಎಂದು ವಿಧಾನಸಭೆಯಲ್ಲಿ ನನ್ನನ್ನು ಛೇಡಿಸಿದಾಗ "ರಾಷ್ಟ್ರದ ರೇಷ್ಮೆ ಬೆಳೆಗಾರರ ಪಕ್ಷಪಾತಿ ಎಂದು ನೀವು ನನ್ನನ್ನು ಆಪಾದಿಸುತ್ತಿದ್ದೀರಾ?

ಆದರೆ ರೈತನ ಪಕ್ಷಪಾತಿ ಆಗುವುದಕ್ಕೆ ನಾನು ಹೆಮ್ಮೆ ಪಡುತ್ತೇನೆ" ಎಂದೆ. ರೇಷ್ಮೆ ನೂಲಿನ ಧಾರಣೆ ಆಗ ಸುಮಾರು ೪೫೦ ರಿಂದ ೫೦೦ ರವರೆಗೆ ಇದ್ದಿರಬಹುದು. ಕೆಲವು ವ್ಯಾಪಾರಿಗಳ ಅಭಿಪ್ರಾಯವನ್ನು ನಂಬಿ ಕೆಲವು ಸದಸ್ಯರು ನಮ್ಮ ಪಕ್ಷದವರೇ ಆದ ಶ್ರೀ ಲಕ್ಷ್ಮಿಸಾಗರ್‌ರವರೂ ಸೇರಿದಂತೆ ಉದ್ಗಾರ ತೆಗೆದಾಗ "ರೇಷ್ಮೆ ನೂಲಿನ ದಾರದ ಬೆಲೆ ಒಂದು ಸಾವಿರ ರೂ. ಆಗಲಿಬಿಡಿ. ಇದರಿಂದ ಈ ದೇಶದ ಯಾವ ಬಡವನಿಗೂ ಅನಾನುಕೂಲ ಆಗುವುದಿಲ್ಲ" ಎಂದಾಗ ಎಲ್ಲರೂ ಗೊಳ್ಳನೆ ನಕ್ಕರು. ಈಗ ರೇಷ್ಮೆಯ ಬೆಲೆ ೧,೮೦೦ ರಿಂದ ೨,೦೦೦ ರೂಪಾಯಿಗಳವರೆಗೆ ಹೆಚ್ಚಿರುವುದನ್ನು ನೋಡಿ ಆಗ ನಕ್ಕ ಜನ ಈಗ ಏನು ಹೇಳುತ್ತಾರೋ ಗೊತ್ತಿಲ್ಲ.

ಕರ್ನಾಟಕ ರಾಜ್ಯ ಒಂದೇ ಕೇಂದ್ರದ ಆಮದು ನೀತಿಯನ್ನು ಪ್ರಬಲವಾಗಿ ವಿರೋಧಿಸಿತು. ಅದರಲ್ಲೂ ನಾನು ರೇಷ್ಮೆ ಖಾತೆಯ ಸಚಿವನಾಗಿ ಈ ನೀತಿಯನ್ನು ವಿರೋಧಿಸುವುದರಲ್ಲಿ ತಳೆದ ಕಟುಧೋರಣೆ ಇತರೆ ರಾಜ್ಯಗಳು ಕರ್ನಾಟಕದ ಕಡೆ ಬೆರಳು ಮಾಡಿ "ರೇಷ್ಮೆಯ ಬೆಲೆ ಏರಿಕೆಗೆ ಕರ್ನಾಟಕ ಸರ್ಕಾರವೇ ಕಾರಣ" ವೆಂದು ದೂಷಿಸತೊಡಗಿದರು. ಅಷ್ಟೇ ಅಲ್ಲದೆ ವಿಶ್ವ ಬ್ಯಾಂಕಿನ ಯೋಜನೆ ಅಡಿಯಲ್ಲಿ ಗುಣಮಟ್ಟದ ಬೈವೋಲ್ಟಿನ್ ರೇಷ್ಮೆಯ ಉತ್ಪಾದನೆಯಾಗಿದ್ದರೆ ಆಮದು ಮಾಡಿಕೊಳ್ಳುವ ಪ್ರಮೇಯವೇ ಬರುತ್ತಿರಲಿಲ್ಲವೆಂದು ಆಪಾದಿಸತೊಡಗಿದರು.

ಈ ಹಿನ್ನೆಲೆಯಲ್ಲಿ ನಾನು ವಿಶ್ವ ಬ್ಯಾಂಕ್ ನೆರವಿನ ಕರ್ನಾಟಕ ರೇಷ್ಮೆ ಅಭಿವೃದ್ಧಿ ಯೋಜನೆಯ ಕಾರ್ಯಕ್ರಮಗಳ ಪ್ರಗತಿಯನ್ನು ಕೂಲಂಕಷವಾಗಿ ಅಭ್ಯಸಿಸಿ, ತಿಳಿದುಕೊಳ್ಳುವುದು ಅಗತ್ಯವಾಗಿತ್ತು.

ಕಚ್ಚಾ ರೇಷ್ಮೆಯನ್ನು ಮತ್ತು ಸ್ಪನ್ ರೇಷ್ಮೆಯನ್ನು ಆಧುನಿಕ ರೀತಿಯಲ್ಲಿ ಪರಿಷ್ಕರಿಸಲು ಮತ್ತು ಬಟ್ಟೆಗಳನ್ನು ನೇಯಲು ಅವಶ್ಯಕವಾಗಿ ಬೇಕಾಗಿದ್ದ, ಕಟ್ಟಡಗಳ ಮತ್ತು ಯಂತ್ರಗಳ ಜೋಡಣೆಯ ಕೆಲಸ ಮುಗಿದು ಉತ್ಪಾದನಾ ಕಾರ್ಯ ನಡೆಯುತ್ತಿತ್ತು. ಎಷ್ಟೋ ದಶಕಗಳ ಹಿಂದೆ ಸ್ಥಾಪಿತವಾಗಿದ್ದ, ಇಲಾಖೆಯವರು ನಡೆಸುತ್ತಿದ್ದ, ಸರ್ಕಾರಿ ನೂಲು ಬಿಚ್ಚುವ ಕಾರ್ಖಾನೆಗಳನ್ನು ಆಧುನೀಕರಿಸುವ ಕಾರ್ಯ ಆಗ ತಾನೇ ಮುಗಿದಿತ್ತು. ಎಲ್ಲಾ ಕಾಲದಲ್ಲಿಯೂ ನಷ್ಟದಿಂದಲೇ ನಡೆಯುತ್ತಿರುವುದು ಈ ಕಾರ್ಖಾನೆಗಳ ವೈಶಿಷ್ಟ್ಯವಾಗಿತ್ತು. ಖಾಸಗಿ ನೂಲು ತೆಗೆಯುವವರ ಕೃಪಾಕಟಾಕ್ಷಕ್ಕೆ ಬೆಳೆಗಾರನು ಯಾವಾಗಲೂ ಕಾಯಬೇಕಾದ ಪರಿಸ್ಥಿತಿಯನ್ನು ತಪ್ಪಿಸಲು ನಷ್ಟವಾದರೂ ಈ ಘಟಕಗಳನ್ನು ಹಿಂದಿನ ಮಹಾರಾಜರ - ಬ್ರಿಟಿಷರ ಕಾಲದಿಂದಲೂ ಇಂದಿನವರೆಗೂ ಸರ್ಕಾರ ನಡೆಸಿಕೊಂಡು ಬಂದಿದೆ. ಕನಕಪುರದ ಘಟಕದಲ್ಲಿ ನಷ್ಟಕ್ಕೆ ಕಾರಣವನ್ನು ಕೇಳಿದರೆ "ಹಳೇ ಯಂತ್ರಗಳು, ಆದ್ದರಿಂದ ಉತ್ಪಾದನಾ ವೆಚ್ಚ ಹೆಚ್ಚಿ ನಷ್ಟ ಅನುಭವಿಸಬೇಕಾಗಿದೆ" ಎನ್ನುವ ವಿವರಣೆ ದೊರೆಯುತ್ತಿತ್ತು. ಆದರೆ ಅತ್ಯಾಧುನಿಕ ಯಂತ್ರಗಳಿಂದ ಸುಸಜ್ಜಿತವಾಗಿ ನಿಂತಿರುವ ಟಿ. ನರಸೀಪುರದ ಘಟಕದಲ್ಲಿಯೂ ನಷ್ಟ ಆಗುತ್ತಿರುವುದರ ಕಾರಣ ತಿಳಿಸಲು ಅಧಿಕಾರಿಗಳು ಮುಂದಾಗುತ್ತಿರಲಿಲ್ಲ. ಈಗಾಗಲೇ ನಾನು ಹೇಳಿದ್ದೇನೆ "ಅನೇಕ ಸಾರಿ ಪ್ರಾಮಾಣಿಕ ಪ್ರಯತ್ನಗಳು ಫಲ ಕೊಡಲು

ವಿಫಲವಾಗಬಹುದೆಂದು" ಟಿ. ನರಸೀಪುರ ಘಟಕದಲ್ಲಿ ಉತ್ತಮ ಗುಣಮಟ್ಟದ ಬೈವೊಲ್ಟಿನ್ ಗೂಡುಗಳು ದಾರ ತೆಗೆಯುವ ಹೊಸ ಯಂತ್ರಗಳನ್ನು ವಿದೇಶದಿಂದ ತರಿಸಿ, ಅಳವಡಿಸಿದ್ದರು. ಆದರೆ ಬೈವೊಲ್ಟಿನ್ ಗೂಡುಗಳನ್ನು ಉತ್ಪಾದಿಸುವುದರಲ್ಲಿ ವಿಫಲವಾದ ಮೇಲೆ ಈ ಯಂತ್ರ ಕೆಲಸವಿಲ್ಲದೆ ನಿಲ್ಲಬೇಕಾಯಿತು. ಈ ಯಂತ್ರಕ್ಕೆ ಬೇಕಾಗಿರುವುದು ಬೈವೊಲ್ಟಿನ್ ಗೂಡಿನ ಉತ್ಪಾದನೆ. ಉತ್ಪಾದನೆಯಾಗುತ್ತಿರುವ ಮಿಶ್ರ ತಳಿ ಗೂಡುಗಳಿಂದ ಈ ಯಂತ್ರದಲ್ಲಿ ದಾರ ತೆಗೆಯಲು ಬರುವುದಿಲ್ಲ. ಇಡೀ ದೇಶದಲ್ಲಿಯೇ ಒಂದು ಏಕೈಕ ಸ್ಪನ್ ಸಿಲ್ಕ್ ಉತ್ಪಾದನಾ ಘಟಕವಾದ ಚನ್ನಪಟ್ಟಣದ ಕಾರ್ಖಾನೆಯನ್ನೂ ಕೂಡ ವಿದೇಶೀ ಯಂತ್ರಗಳಿಂದ ಅಭಿವೃದ್ಧಿಪಡಿಸಲಾಗಿತ್ತು. ಅಲ್ಲಿ ಕೆಲಸ ಮಾಡುತ್ತಿದ್ದವರ ನಿಸ್ಸೀಮ ಜಡತ್ವ, ನಿರ್ಲಕ್ಷ್ಯ ಪ್ರವೃತ್ತಿ ಯಾರಿಗಾದರೂ ಬೇಸರ ತರುವಂತಿತ್ತು. ಆಡಳಿತ ಬಿಗಿ ತಪ್ಪಿತ್ತು. ಸ್ಪನ್ ಸಿಲ್ಕ್‌ಗೆ ಬೇಡಿಕೆ ಇಲ್ಲದೆ ಸಾವಿರಾರು ಮೆಟ್ರಿಕ್ ಟನ್ ದಾರ ಉಳಿದುಹೋಗಿತ್ತು. ನೂತನ ಕಾರ್ಖಾನೆಯನ್ನು ಸಂಪೂರ್ಣಗೊಳಿಸಿ, ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ರಾಮಕೃಷ್ಣ ಹೆಗಡೆಯವರಿಂದ ಉದ್ಘಾಟನೆ ಮಾಡಿಸಿದೆ. ಉಳಿದಿರುವ ದಾರಕ್ಕೆ ಒಳ್ಳೆಯ ಮಾರುಕಟ್ಟೆ ಹುಡುಕುವ ಪ್ರಯತ್ನ ಮಾಡಿದೆ. ಈ ಘಟಕದ ಆವರಣದಿಂದ ಹಿಡಿದು ಆಡಳಿತದವರೆಗೆ ಸ್ವಚ್ಛ ಮಾಡುವ ಪ್ರಯತ್ನ ಮಾಡಿ ಸ್ವಲ್ಪ ಮಟ್ಟಿಗೆ ಸಫಲನಾದೆ. ಸರ್ಕಾರದ ಈ ಘಟಕದಲ್ಲಿ ಮಾರುಕಟ್ಟೆ ಇಲ್ಲದೆ, ರೇಷ್ಮೆ ದಾರ ಬಿದ್ದಿದ್ದಾಗ ಅಂದಿನ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ನಿರ್ದೇಶಕರಾಗಿದ್ದ ಐ.ಎ.ಎಸ್. ಅಧಿಕಾರಿಯೊಬ್ಬರು, ಮಂಡಳಿಯ ಅಧ್ಯಕ್ಷನಾಗಿದ್ದ ನನಗೂ ಮತ್ತು ಆಡಳಿತ ಮಂಡಳಿಯ ಗಮನಕ್ಕೂ ತರದೆ ಖಾಸಗಿ ಕಾರ್ಖಾನೆಯಿಂದ ಸ್ಪನ್ ಸಿಲ್ಕ್ ಖರೀದಿ ಮಾಡಿದ ವಿಷಯ ತಿಳಿದು, ಈ ವಿಷಯದಲ್ಲಿ ವಿಚಾರಣೆಯನ್ನು ಮಾಡುವ ಏರ್ಪಾಟು ಮಾಡಿಸಿದೆ. ಐ.ಎ. ಎಸ್. ಅಧಿಕಾರಿ ತಾನೆ? ವಿಚಾರಣೆ ಮುಗಿಯಲೂ ಇಲ್ಲ. ತಪ್ಪು ಮಾಡಿದ ಅಧಿಕಾರಿಗೆ ಶಿಕ್ಷೆಯೂ ಇಲ್ಲ. ಯಾವ ಸರಕಾರ ಬಂದರೂ ಈ ಸಮಸ್ಯೆಗೆ ಪರಿಹಾರವಿಲ್ಲ.

ಮೈಸೂರಿನ ಕ್ರೇಪ್ ಸಿಲ್ಕ್ ನೇಯ್ಗೆಯ ಕೆಲಸ ಇದ್ದುದರಲ್ಲಿ ಉತ್ತಮವಾಗಿ ನಡೆಯುತ್ತಿತ್ತು. ಮಾರುಕಟ್ಟೆಯೂ ಇತ್ತು. ವಿಶ್ವವಿಖ್ಯಾತ "ಮೈಸೂರು ರೇಷ್ಮೆ" ಬಟ್ಟೆಗಳಿಗೆ ಮಾರುಕಟ್ಟೆಯೂ ಇತ್ತು.

ಸ್ಥಳೀಯ ಸಂಶೋಧನಾ ಕೇಂದ್ರಗಳಿಗೆ ಯೋಜನೆಯಡಿಯಲ್ಲಿ ಅಗತ್ಯವಾದ ನೆರವು ನೀಡಿ ಬಲಪಡಿಸುವುದರ ಜೊತೆಗೆ ತಲಘಟ್ಟಪುರದಲ್ಲಿ ನಡೆಯುತ್ತಿದ್ದ ಕರ್ನಾಟಕ ರೇಷ್ಮೆ ಅಭಿವೃದ್ಧಿ ಸಂಸ್ಥೆಯ ಕಟ್ಟಡಗಳ ಕೆಲಸವನ್ನು ಜರೂರಾಗಿ ಮುಗಿಸಿ, ಆ ಕಟ್ಟಡದ ಉದ್ಘಾಟನೆಯನ್ನು ನಾನೇ ನೆರವೇರಿಸಿದೆ.

ಜಪಾನ್‌ನ ಅನೇಕ ರೇಷ್ಮೆ ಸಂಶೋಧಕರು ಇಲ್ಲಿ ಬಂದು ಆಧುನಿಕ ತಂತ್ರಜ್ಞಾನದ ಮತ್ತು ತಾಂತ್ರಿಕತೆಯ ಅನುಭವವನ್ನು ಉಪಯೋಗಿಸಿಕೊಳ್ಳುವುದರ ಬಗ್ಗೆ ಚರ್ಚಿಸಿ ತಮ್ಮ ಅನಿಸಿಕೆಗಳ ಬಗ್ಗೆ ವರದಿಯನ್ನು ಕೊಟ್ಟಿದ್ದರು. ಬೆಂಗಳೂರು, ಮೈಸೂರು, ಕರ್ನಾಟಕ ಮತ್ತು ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯಗಳಲ್ಲಿ ರೇಷ್ಮೆ ಉದ್ಯಮದ ಬಗ್ಗೆ

ಸಂಶೋಧನೆಯ ಜೊತೆಗೆ ಪದವಿ ಶಿಕ್ಷಣ ಕೊಡಲು ಬೇಕಾಗುವ ಅನುಕೂಲಗಳನ್ನು ಕಲ್ಪಿಸಲು ಯೋಜನೆಯ ಅಡಿಯಲ್ಲಿ ನೆರವು ನೀಡಲಾಗಿತ್ತು. ಈ ಎಲ್ಲಾ ವಿಶ್ವವಿದ್ಯಾನಿಲಯಗಳಲ್ಲಿ ನಡೆಯುತ್ತಿರುವ ಕಾರ್ಯಕ್ರಮಗಳನ್ನು ಪರಿಶೀಲಿಸಿ ಅರಿತುಕೊಳ್ಳಲು ಪ್ರಯತ್ನಪಟ್ಟೆ. ದೊಡ್ಡ ಪ್ರಮಾಣದ ೧೦ ಮೊಟ್ಟೆ ತಯಾರಿಕಾ ಕೇಂದ್ರಗಳ ಕಟ್ಟಡದ ಕೆಲಸ ಭರದಿಂದ ಸಾಗುತ್ತಿತ್ತು. ನಾನು ಸಚಿವನಾಗುವ ವೇಳೆಗೆ ಚಿತ್ರದುರ್ಗದ ಬಿತ್ತನೆ ಕೋಠಿ ಕಟ್ಟಡದ ಕೆಲಸ ಮುಗಿದಿತ್ತು. ಇನ್ನು ಉಳಿದ ೯ ಕಟ್ಟಡಗಳ ಕೆಲಸವನ್ನು ಮುಗಿಸಿ, ಅವುಗಳಲ್ಲಿ ಚನ್ನಪಟ್ಟಣದ ಒಂದು ಕಟ್ಟಡವನ್ನು ಬಿಟ್ಟು ಉಳಿದ ಎಲ್ಲಾ ಕಟ್ಟಡಗಳನ್ನು ಉದ್ಘಾಟನೆ ಮಾಡುವ ಸೌಭಾಗ್ಯ ನನ್ನದಾಯಿತು. ರೇಷ್ಮೆ ಗೂಡಿನ ಮಾರುಕಟ್ಟೆಗಳು ಮತ್ತು ಯೋಜನೆಯ ಪ್ರಕಾರ ನಿರ್ಮಾಣವಾಗುತ್ತಿರುವ ಇತರೆ ಕಟ್ಟಡದ ಕೆಲಸಗಳನ್ನು ಪೂರ್ಣಗೊಳಿಸಲು ಒತ್ತಾಯಿಸಿದೆ. ನಿಗದಿತ ಅವಧಿಯಲ್ಲಿ ಎಲ್ಲಾ ಕಟ್ಟಡಗಳು ಪೂರ್ಣವಾದುವು. ಯೋಜನೆಯಲ್ಲಿ ಅಡಕವಾಗಿದ್ದ ಎಲ್ಲಾ ವ್ಯವಸ್ಥೆಗಳು, ಸೌಕರ್ಯ ಸವಲತ್ತುಗಳನ್ನೆಲ್ಲ ಸ್ವಲ್ಪಮಟ್ಟಿಗೆ ಒದಗಿಸಲಾಯಿತು. ನಾನೀಗಾಗಲೇ ತಿಳಿಸಿರುವ ೧೦ ದೊಡ್ಡ ಪ್ರಮಾಣದ ರೇಷ್ಮೆ ಮೊಟ್ಟೆ ತಯಾರಿಕಾ ಕೇಂದ್ರಗಳಿಗೆ ಸಂಗ್ರಹಣಾಗಾರಗಳನ್ನು ಅಳವಡಿಸಬೇಕಾಗಿತ್ತು. ಇದಕ್ಕೆ ಬೇಕಾದ ಅಂತರರಾಷ್ಟ್ರೀಯ ಟೆಂಡರ್ ಕರೆದು, ಟೆಂಡರ್‌ದಾರರಲ್ಲಿ ಕೋರಿಯಾ ಮತ್ತು ಜಪಾನ್‌ಗಳ ಸಂಸ್ಥೆಗಳವರು ಪೈಪೋಟಿಯಲ್ಲಿದ್ದು, ಯಾವುದಾದರೂ ಒಂದಕ್ಕೆ ಮಂಜೂರಾತಿ ಕೊಡುವ ಹಂತ ತಲುಪಿತ್ತು. ಈ ವಿಷಯದಲ್ಲಿ ನಡೆದ ವ್ಯವಹಾರದ ಬಗ್ಗೆ, ಆಮೇಲೆ ನಡೆದ ಕೆಲವು ಪ್ರಮುಖ ಅವ್ಯವಹಾರದ ಬಗ್ಗೆ ಶ್ರೀ ಲಂಕೇಶ್‌ರವರು ತಮ್ಮ ಪತ್ರಿಕೆಯಲ್ಲಿ ಈಗಾಗಲೇ ಪ್ರಕಟಿಸಿ, ಸಾರ್ವಜನಿಕರ ಗಮನಕ್ಕೆ ತಂದಿರುವುದರಿಂದ ಅದರ ಉಲ್ಲೇಖವನ್ನು ನಾನು ಇಲ್ಲಿ ಕೈ ಬಿಡುತ್ತೇನೆ. ನನಗೆ ತಿಳಿದಂತೆ ಇಷ್ಟೆಲ್ಲ ಸೌಕರ್ಯ- ಸವಲತ್ತುಗಳಿದ್ದರೂ ಇಂದಿಗೂ ಗುಣಮಟ್ಟದ ರೇಷ್ಮೆ ಮೊಟ್ಟೆ, ಗೂಡು ಮತ್ತು ರೇಷ್ಮೆ ದಾರದ ಉತ್ಪಾದನೆಯಲ್ಲಿ ಅವ್ಯಕ್ತ ಮತ್ತು ನಿರ್ದಿಷ್ಟವಾಗಿ ಹೇಳಲಾಗದ ಕೊರತೆ ಇದೆ ಎನ್ನಿಸುತ್ತದೆ.

ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷನಾಗಿ ಕೆಲಸ ಮಾಡಿದ್ದ ನನಗೆ ರಾಜ್ಯದ ರೇಷ್ಮೆ ಬೆಳೆಯುವ ಪ್ರದೇಶಗಳು ಚೆನ್ನಾಗಿ ಪರಿಚಯವಾಗಿದ್ದುವು. ಬೆಳೆಗಾರರ ಮತ್ತು ಇತರೆ ರೇಷ್ಮೆ ಉದ್ಯಮಗಳ ಸಮಸ್ಯೆಗಳು ಸ್ಥೂಲವಾಗಿ ತಿಳಿದಿದ್ದವು. ರೇಷ್ಮೆ ಖಾತೆಯ ಸಚಿವನಾಗಿ ನಾನು ಪ್ರವಾಸ ಮಾಡುವಾಗ ಈ ಸಮಸ್ಯೆಗಳಿಗೆ ಇರುವ ಮತ್ತೊಂದು ಮುಖದ ಪರಿಚಯವೂ ಆಯಿತು. ಸಮಸ್ಯೆಗಳನ್ನು ಆಳವಾಗಿ ತುಲನೆ ಮಾಡಿದಷ್ಟೂ ಜಟಿಲವಾಗತೊಡಗಿದುವು. ಮೇಲುನೋಟಕ್ಕೆ ಸಾಮಾನ್ಯವಾಗಿ ಕಾಣುತ್ತಿದ್ದ ಸಮಸ್ಯೆಗಳು ಮತ್ತು ಅವುಗಳ ಪರಿಹಾರ ನಾನು ತಿಳಿದುಕೊಂಡಷ್ಟು ಸುಲಭವಾಗಿರಲಿಲ್ಲ. ಪಟ್ಟಭದ್ರ ಹಿತಾಸಕ್ತಿಗಳಿಂದ ಕೂಡಿದ ಉದ್ಯಮದ ಅರಿವಿಲ್ಲದ, ಆಡಳಿತ ವ್ಯವಸ್ಥೆಯಲ್ಲಿ ಯಾವುದೇ ಸಮಸ್ಯೆಗೆ ಪರಿಹಾರ ಒದಗಿಸುವುದು ಎಷ್ಟು ಕಷ್ಟ ಎನ್ನುವುದರ ಅನುಭವ ಹೆಜ್ಜೆ ಹೆಜ್ಜೆಗೂ ಆಗುತ್ತಿತ್ತು.

ನಾವೆಷ್ಟೇ ಶ್ರಮಿಸಿದರೂ ಕರ್ನಾಟಕದಲ್ಲಿ ಬೈವೊಲ್ಟಿನ್ ರೇಷ್ಮೆಯ ಉತ್ಪಾದನೆ ನಿಗದಿತ ಗುರಿಯನ್ನು ತಲುಪಲೇ ಇಲ್ಲ. ಒಂದು ಸಾವಿರ ಟನ್ ರೇಷ್ಮೆ ಉತ್ಪಾದನೆ ಗುರಿ ಇದ್ದಾಗ್ಯೂ

ನಮ್ಮಲ್ಲಿ ಉತ್ಪಾದನೆಯಾಗುತ್ತಿದ್ದುದು ಕೇವಲ ೧೦ ಟನ್‌ಗಿಂತಲೂ ಕಡಿಮೆ. ಇದೂ ಸಹ ಲೆಕ್ಕದ ಪ್ರಕಾರ. ಇಷ್ಟೇ ಅಲ್ಲ, ರಾಜ್ಯಕ್ಕೆ ಬೇಕಾಗಿರುವ ಮಿಶ್ರ ತಳಿಯ ಮೊಟ್ಟೆ ತಯಾರಿಸಲು ಬೇಕಾಗುವಷ್ಟು ಬೈವೊಲ್ಟಿನ್ ತಳಿಯ ಬಿತ್ತನೆ ಗೂಡಿನ ಉತ್ಪಾದನೆಗೂ ನಾವು ಅಧಿಕಾರಿಗಳೊಡನೆ ಚರ್ಚಿಸಿ, ಕಾರ್ಯಕ್ರಮವನ್ನು ರೂಪಿಸಬೇಕಾಗಿತ್ತು. ಅದರಲ್ಲಿಯೂ ಬೇಸಿಗೆ ಕಾಲದಲ್ಲಿ ಇದು ಪ್ರಮುಖವಾಗಿತ್ತು.

ರೈತರನ್ನು ಕೇಳಿದರೆ "ಬೈವೊಲ್ಟಿನ್ ನಮ್ಮ ವಾತಾವರಣಕ್ಕೆ ಹೊಂದುವಂತಹುದಲ್ಲ ಬೆಳೆ ಹಾಳಾಗುತ್ತದೆ, ಇದಕ್ಕೆ ಬದಲು ಮಿಶ್ರ ಜಾತಿ ಮೊಟ್ಟೆ ಚೆನ್ನಾಗಿ ಇಳುವರಿ ಕೊಡುತ್ತದೆ, ಗೂಡಿನ ಗುಣಮಟ್ಟವೂ ಉತ್ತಮವಾಗಿದ್ದು, ನಮಗೆ ಒಳ್ಳೆಯ ಬೆಲೆ ಸಿಗುತ್ತದೆ" ಎನ್ನುತ್ತಿದ್ದರು. "ಇಲಾಖಾ ಅಧಿಕಾರಿಗಳ ತಾಂತ್ರಿಕ ವಿಸ್ತರಣಾ ಕಾರ್ಯದ ವಿಫಲತೆ ಬೈವೊಲ್ಟಿನ್ ತಳಿಗಳ ಬೆಳೆಯ ಸಫಲತೆಗೆ ಅಡ್ಡವಾಗಿದೆ " ಎಂದು ಮೈಸೂರು ಸಂಶೋಧನಾಲಯದ ವಿಜ್ಞಾನಿಗಳ ವಾದವಾಗಿತ್ತು. ಇಲಾಖೆಯ ಅಧಿಕಾರಿಗಳನ್ನು ಕೇಳಿದರೆ ವಿಜ್ಞಾನಿಗಳ ವಾದವನ್ನು ಅಲ್ಲಗಳೆದು "ಈಗ ಚಾಲ್ತಿಯಲ್ಲಿರುವ ಬೈವೊಲ್ಟಿನ್ ತಳಿಗಳು ನಮ್ಮ ವಾತಾವರಣಕ್ಕೆ, ನಮ್ಮ ಬೆಳೆಗಾರರ ಸ್ಥಿತಿ, ಗತಿಗಳಿಗೆ ಹೊಂದಿಕೊಳ್ಳುವಷ್ಟು ಬಲಿಷ್ಠವಾದ ತಳಿಗಳಲ್ಲ. ಬಲಿಷ್ಠ ತಳಿಗಳನ್ನು ಸಂಶೋಧನಾಲಯದವರು ಕಂಡುಹಿಡಿದರೆ ಮಾತ್ರ ಬೈವೊಲ್ಟಿನ್ ಬೆಳೆಯನ್ನು ರೇಷ್ಮೆ ಕೃಷಿ ಕ್ಷೇತ್ರಗಳಲ್ಲಿ ಜನಪ್ರಿಯಗೊಳಿಸಲು ಸಾಧ್ಯ" ಎನ್ನುತ್ತಿದ್ದರು. ಸಂಶೋಧನಾಲಯದವರು ತಮ್ಮದೇ ಆದ ತಾಂತ್ರಿಕ ವಿಸ್ತರಣಾ ಕೇಂದ್ರಗಳಿಗೆ ಒಳಪಟ್ಟಿರುವ ಕ್ಷೇತ್ರಗಳಲ್ಲಿ ಹಾಗೂ ಅವರು ದತ್ತು ತೆಗೆದುಕೊಂಡ ಆನೇಕಲ್ ತಾಲ್ಲೂಕಿನ ರೇಷ್ಮೆ ಬೆಳೆಯುವ ಹಳ್ಳಿಗಳಲ್ಲಿಯೂ ಬೈವೊಲ್ಟಿನ್ ಬೆಳೆ ಜನಪ್ರಿಯವಾಗದೆ ಇರುವುದನ್ನು ಗಮನಿಸಿದ ನನಗೆ "ತಮ್ಮ ಪ್ರತಿಷ್ಠೆಯನ್ನು ಉಳಿಸಿಕೊಳ್ಳಲು ಇಲಾಖೆಯನ್ನು ಬಲಿಪಶುಗಳನ್ನಾಗಿ ಮಾಡುತ್ತಿದ್ದಾರೆ" ಎನ್ನುವ ಇಲಾಖೆಯವರ ವಾದದಲ್ಲಿ ತಿರುಳಿಲ್ಲದೆ ಇಲ್ಲ ಎನ್ನಿಸಿತು. ಅಂದಿನ ಸಂಶೋಧನಾಲಯದ ನಿರ್ದೇಶಕರಾದ ಡಾ. ಮಂಜಿತ್ ಸಿಂಗ್ ಜಾಲಿ ಅವರು ಮತ್ತೊಂದು ವಾದವನ್ನು ನನ್ನ ಮುಂದಿಟ್ಟರು. ಅವರ ಪ್ರಕಾರ "ಬೈವೊಲ್ಟಿನ್ ಗೂಡು ಮತ್ತು ರೇಷ್ಮೆ ಗುಣಮಟ್ಟಕ್ಕೆ ತಕ್ಕಂತೆ ಬೆಲೆ ಸಿಗುತ್ತಿಲ್ಲ. ಸಿಗುವ ಬೆಲೆ ಮಲ್ಟಿ ಒಲ್ಟೀನ್ ಗೂಡು ಮತ್ತು ರೇಷ್ಮೆಗಿಂತ ಕಡಿಮೆ ಇರುತ್ತದೆ. ಇದರಿಂದ ರೈತರು ಈ ತಳಿಯ ಗೂಡು ಬೆಳೆಯಲು ಹಿಂಜರಿಯುತ್ತಾರೆ" ಎನ್ನುವುದಾಗಿತ್ತು. ಸಮಚಿತ್ತದಿಂದ ಅದನ್ನು ಪರಿಶೀಲಿಸಿದಾಗ ಈ ವಾದದಲ್ಲಿಯೂ ಅಷ್ಟೇನೂ ಹುರುಳಿರಲಿಲ್ಲ. ಏಕೆಂದರೆ ಬೈವೊಲ್ಟಿನ್ ಗೂಡು ಬಿತ್ತನೆ ಪ್ರದೇಶಗಳಾಗಿದ್ದ ಆನೇಕಲ್ ಅತ್ತಿಬೆಲೆ ಮತ್ತು ಕೆ. ಆರ್. ಪೇಟೆಗಳಲ್ಲಿ ಬಿತ್ತನೆ ಗೂಡುಗಳಿಗೆ ಹೆಚ್ಚಿನ ಬೆಲೆ ಕೊಟ್ಟು ಗೂಡುಗಳನ್ನು ಕೊಂಡುಕೊಳ್ಳುತ್ತಿದ್ದರು. ಇದಲ್ಲದೆ ಬಿತ್ತನೆಗೆ ಉಪಯೋಗಿಸಿಕೊಂಡು ಉಳಿದರೆ ಆ ಗೂಡುಗಳನ್ನು ಇಲಾಖೆಯವರು ಬಿತ್ತನೆ ಗೂಡಿನ ಬೆಲೆಗೆ ಕೊಂಡುಕೊಂಡು ಅವನ್ನು ಕರ್ನಾಟಕ ರೇಷ್ಮೆ ಕೈಗಾರಿಕಾ ನಿಗಮಕ್ಕೆ ಕಡಿಮೆ ದರದಲ್ಲಿ ದಾರ ತೆಗೆಯಲು ಮಾರಿ ಬಿತ್ತನೆ ಗೂಡು ಬೆಳೆಯುವ ರೈತರಿಗೆ ನಷ್ಟವಾಗದಂತೆ ನೋಡಿಕೊಳ್ಳುತ್ತಿದ್ದರು. ಇದರ ಜೊತೆಗೆ ಬೆಳೆ ವಿಮಾ ಯೋಜನೆಯೂ ಜಾರಿಯಲ್ಲಿತ್ತು. ಇಷ್ಟಾದರೂ ರೈತರು ಬೈವೊಲ್ಟಿನ್ ಬೆಳೆ

ಬೆಳೆಯಲು ನಿರಾಕರಿಸುತ್ತಿದ್ದುದು ಬೈವೊಲ್ಟಿನ್ ತಳಿಯ ಬೆಳೆಯ ಅನಿಶ್ಚಿತತೆ ಕಾರಣವಾಗಿತ್ತು. ನಿಜ ಹೇಳಬೇಕೆಂದರೆ ರೇಷ್ಮೆ ಬೆಳೆಯ ವಿಷಯದಲ್ಲಿ ಅವರು ಜೂಜಾಡಲು ಇಷ್ಟಪಡುತ್ತಿರಲಿಲ್ಲ.

ತಮಾಷೆಯ ವಿಷಯವೆಂದರೆ ಬೈವೊಲ್ಟಿನ್ ಗೂಡು ಮತ್ತು ರೇಷ್ಮೆ ಉತ್ಪಾದನೆಯಲ್ಲಿ ಇಲಾಖೆಯವರಿಗೂ, ಮೈಸೂರು ಸಂಶೋಧನಾಲಯದವರಿಗೂ ಕಣ್ಣುಮುಚ್ಚಾಲೆ ಆಟ ಇನ್ನೂ ನಡೆಯುತ್ತಲೇ ಇದೆ.

ಆಗಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ರಾಮಕೃಷ್ಣ ಹೆಗಡೆ, ರಾಷ್ಟ್ರದ ಅನೇಕ ಬುದ್ಧಿಜೀವಿಗಳಿಂದ ಕೂಡಿದ 'ಥಿಂಕ್ ಟ್ಯಾಂಕ್' ರಚಿಸಿ, ರಾಜ್ಯದ ಪ್ರಮುಖ ಅಭಿವೃದ್ಧಿ ಯೋಜನೆಗಳ ಬಗ್ಗೆ ಚಿಂತಿಸಿ ಸಲಹೆ ಕೊಡುವ ಏರ್ಪಾಡು ಮಾಡಿದ್ದರು. ಈ ಥಿಂಕ್ ಟ್ಯಾಂಕ್‌ಗಳ ವಿಮರ್ಶೆ ಮಾಡಲು ಸೇರಿದ್ದ ಸಭೆಯಲ್ಲಿ ರಾಜ್ಯದ ಮಾಜಿ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ಜಿ.ವಿ.ಕೆ. ರಾವ್ ಅವರು ವಿಶ್ವಬ್ಯಾಂಕ್ ನೆರವಿನ ಯೋಜನೆಯ ಪ್ರಕಾರ ರೇಷ್ಮೆ ಇಲಾಖೆಗೆ ಗುಣಮಟ್ಟದ ಬೈವೊಲ್ಟಿನ್ ರೇಷ್ಮೆ ಉತ್ಪತ್ತಿಯಲ್ಲಿ ವಿಫಲವಾಗಿರುವುದರ ಬಗ್ಗೆ ತುಂಬಾ ಅಸಮಾಧಾನ ವ್ಯಕ್ತಪಡಿಸುದುದಲ್ಲದೆ "ಲನೇ ಪಂಚವಾರ್ಷಿಕ ಯೋಜನೆಯಲ್ಲಾದರೂ ಈ ಗುರಿಯನ್ನು ಮುಟ್ಟಲು ಸಾಧ್ಯವೆ?" ಎನ್ನುವುದರ ಬಗ್ಗೆ ತಿಳಿಯಬಯಸಿದರು. ಇವರ ಈ ದನಿಗೆ ಇತರೆ ಸದಸ್ಯರು ದನಿಗೂಡಿಸಿದರು. ಅಷ್ಟು ಹೊತ್ತಿನವರೆಗೂ ಬೆಪ್ಪನಂತೆ ಸುಮ್ಮನೆ ಕುಳಿತಿದ್ದ ನನ್ನ ಕಡೆ ಬೆರಳು ಮಾಡಿ ತೋರಿದ ಮುಖ್ಯಮಂತ್ರಿಗಳು "ಇದಕ್ಕೆ ನಮ್ಮ ರೇಷ್ಮೆ ಖಾತೆ ಸಚಿವರು ವಿವರ ಕೊಡುತ್ತಾರೆ. "He himself is an expert on the subject" ಎಂದು ತಿಳಿಸಿದಾಗ ನಾನು ಹೇಳಿದೆ: "ಈಗಿರುವ ಸ್ಥಿತಿಯಲ್ಲಿ ಲ ಮತ್ತು ೧೦ನೇ ಪಂಚವಾರ್ಷಿಕ ಯೋಜನೆಯಲ್ಲಿಯೂ ಸಾಧ್ಯವಿಲ್ಲ."

ಉತ್ತಮವಾದ ಹಿಪ್ಪು ನೇರಳೆ ತೋಟ ಮತ್ತು ಸಕಲ ಸೌಕರ್ಯಗಳಿಂದ ಕೂಡಿದ ಹುಳು ಸಾಕುವ ಮನೆಗಳನ್ನು ಒದಗಿಸಿದರೆ ಹಾಲಿ ಇರುವ ತಳಿಗಳನ್ನು ಬೆಳೆಸಬಹುದು. ಈ ರಾಜ್ಯದ ಲಕ್ಷಾಂತರ ಬೆಳೆಗಾರರಿಗೆ ಸರ್ಕಾರ ಇದನ್ನು ಒದಗಿಸಲು ಸದ್ಯಕ್ಕೆ ಸಾಧ್ಯವಿಲ್ಲ. ಆದ್ದರಿಂದ ಇರುವ ಒಂದೇ ಒಂದು ಮಾರ್ಗ ಈಗಿರುವ ನಮ್ಮ ರೈತರ ಸಾಮಾನ್ಯ ತೋಟದ ಸೊಪ್ಪು ತಿಂದು ಅವರ ಗುಡಿಸಿಲಿನಲ್ಲಿ ಬೆಳೆಯುವಂತಹ ಗಟ್ಟಿಮುಟ್ಟಾದ ಬೈವೊಲ್ಟಿನ್ ತಳಿಯನ್ನು ಕಂಡುಹಿಡಿದರೆ ಮಾತ್ರ ನೀವು ನಿರೀಕ್ಷಿಸುವಷ್ಟು ಬೈವೊಲ್ಟಿನ್ ರೇಷ್ಮೆ ಉತ್ಪತ್ತಿ ಮಾಡಲು ಸಾಧ್ಯ ಎಂದು ಸ್ಪಷ್ಟವಾಗಿ ನಾನು ತಿಳಿಸಿದಾಗ ಅದರ ಬಗ್ಗೆ ಚರ್ಚೆಯನ್ನೇ ಮುಕ್ತಾಯಗೊಳಿಸಿದರು.

ಬೈವೊಲ್ಟಿನ್ ಗೂಡು ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಅನುಕೂಲಕರ ಋತುಗಳಲ್ಲಿ ಚೆನ್ನಾಗಿ ಬೆಳೆಯಾಗುತ್ತಿರುವುದು ಕಂಡುಬಂದಿದೆ. ಮಲೆನಾಡಿನ ಕೆಲವು ಪ್ರದೇಶಗಳಲ್ಲಿ ಉತ್ತರ ಕರ್ನಾಟಕ ಜಿಲ್ಲೆಯಲ್ಲಿ ಉತ್ತಮ ಬೆಳೆಯಾಗುತ್ತಿರುವುದನ್ನು ನಾನು ನೋಡಿದ್ದೇನೆ. ಇದೊಂದು ಶುಭ ಸೂಚನೆ. ಎಲ್ಲಾ ಋತುಗಳಿಗೂ ಎಲ್ಲಾ ಪ್ರದೇಶಗಳಿಗೂ (For all reasons

and for all seasons) ಹೊಂದುವ ತಳಿ ಜಪಾನಿನಲ್ಲಿಯೇ ಇಲ್ಲ ಎಂದ ಮೇಲೆ ಎಲ್ಲಾ ಕಾಲದಲ್ಲಿಯೂ ಎಲ್ಲಾ ಪ್ರದೇಶದಲ್ಲಿಯೂ ಈ ತಳಿಯ ಗೂಡು ಬೆಳೆಯುವ ದುಷ್ಟ ಪ್ರಯತ್ನವನ್ನು ಕೈ ಬಿಟ್ಟು ಋತುಮಾನಗಳನ್ನು ಅನುಸರಿಸಿ ಹಿತಕರ ವಾತಾವರಣದಲ್ಲಿ ಬೈವೊಲ್ಟಿನ್ ಬೆಳೆ ಮಾಡುವುದು ಸೂಕ್ತವೆಂದು ನನ್ನ ಖಚಿತ ಅಭಿಪ್ರಾಯ. ಇದು ಸಫಲವಾಗಬೇಕಾದರೆ ಇಲಾಖೆಯವರು, ವಿಜ್ಞಾನಿಗಳು ತೆರೆದ ಮನಸ್ಸಿನಿಂದ ವಿಚಾರ ವಿನಿಮಯ ಮಾಡಿಕೊಂಡು ಅರ್ಪಣಾ ಮನೋಭಾವದಿಂದ ಕೆಲಸ ಮಾಡಬೇಕಾಗಿರುತ್ತದೆ.

ನಾನು ಈ ಉದ್ಯಮದಲ್ಲಿ ತೊಡಗಿಸಿಕೊಂಡ ದಿನದಿಂದಲೂ ರೈತರು "ಉತ್ತಮ ಮೊಟ್ಟೆಗಳನ್ನು ಸರ್ಕಾರದವರು ಒದಗಿಸದಿರುವುದರಿಂದಲೇ ರೈತನ ಬೆಳೆಗಳು ಕೆಡುತ್ತವೆ" ಎಂದು ಹೇಳುವುದನ್ನು ಗಮನಿಸಿದ್ದೇನೆ. "ಅದೇ ರೀತಿ ಬೆಳೆ ಬೆಳೆಯಲು ರಸಭರಿತವಾದ ಹಿಪ್ಪುನೇರಳೆ ಸೊಪ್ಪು, ಹುಳು ಸಾಕಲು ಸ್ವಚ್ಛವಾದ ವಾತಾವರಣ ಮತ್ತು ತಾಂತ್ರಿಕ ನಿಪುಣತೆಯೂ, ಅವಶ್ಯಕ" ಎನ್ನುವುದು ತಜ್ಞರ ಮತ್ತು ಇಲಾಖೆಯವರ ವಾದ. ರೇಷ್ಮೆ ಬೆಳೆ ಕೆಡುವುದಕ್ಕೆ ಅಥವಾ ಆಗುವುದಕ್ಕೆ ಯಾವ ಯಾವ ವಿಷಯಗಳು ಎಷ್ಟರಮಟ್ಟಿಗೆ ಕಾರಣವಾಗುತ್ತವೆ ಎನ್ನುವುದರ ಬಗ್ಗೆ ವಿವರ ತಿಳಿಯಲು ನಾನು ಮೈಸೂರಿನ ಸಂಶೋಧನಾಲಯಕ್ಕೆ ಭೇಟಿ ಕೊಟ್ಟು ವಿವರ ತಿಳಿಯಲು ಪ್ರಯತ್ನಿಸಿದಾಗ ಅಲ್ಲಿಯ ತಜ್ಞರೊಬ್ಬರು "ಹುಳುಗಳಿಗೆ ಬರುವ ರೋಗಕ್ಕೂ ಅದು ತಿನ್ನುವ ಸೊಪ್ಪಿಗೂ ಯಾವ ಸಂಬಂಧವೂ ಇಲ್ಲ"(There is no relationship between diet and desease) ಎಂದು ತಿಳಿಸಿದಾಗ ಈ ದೇಶದ ಕೃಷಿ ಕ್ಷೇತ್ರದಲ್ಲಿ ಸಂಶೋಧನೆ ಮತ್ತು ಸಂಶೋಧಕರ ಬಗ್ಗೆ ಅತ್ಯಂತ ಕೀಳು ಮನೋಭಾವ ನನ್ನದಾಯಿತು. ಮುಂದೆ ನಾನು ಜಪಾನಿಗೆ ಪ್ರವಾಸ ಹೋದಾಗ ಅಲ್ಲಿಯ ತಜ್ಞರು ಈ ವಿಷಯದಲ್ಲಿ ನಡೆಸಿರುವ ಸಂಶೋಧನೆಯನ್ನು ಪರಿಶೀಲಿಸಿದಾಗ ಈ ಮೇಲ್ಕಂಡ ವಿಷಯಗಳ ಶೇಕಡವಾರು ಪರಿಣಾಮ ಎಷ್ಟೆಂಬುದು ನನಗೆ ತಿಳಿಯಿತು. ಯಾವ ಊರಿಗೆ ಹೋದರೂ "ಮೊಟ್ಟೆ ಸರಿಯಾಗಿ ಕೊಡದೆ ಹೋದುದರಿಂದ ನನ್ನ ಬೆಳೆ ಹಾಳಾಯಿತು" ಎನ್ನುವುದೇ ಮುಖ್ಯ ವಿಷಯವಾಗಿರುತಿತ್ತು. ಇದನ್ನು ಸಂಪೂರ್ಣವಾಗಿ ನಂಬಲು ಅಥವಾ ಒಪ್ಪಲು ನಾನು ಸಿದ್ಧನಿರಲಿಲ್ಲ. ಕಾರಣ ಮೊಟ್ಟೆಯನ್ನು ಮನೆಗೆ ತಂದುಕೊಟ್ಟ ತರುವಾಯ ನಮ್ಮ ಕೆಲವು ಗಂಡಸರು ಗೂಡನ್ನು ಹೆಡೆದು ಬುಟ್ಟಿಗೆ ತುಂಬಿದಾಗ ತನ್ನ ಮಡಿಚಿಟ್ಟ ಪಂಚೆಯನ್ನು ಹೆಗಲ ಮೇಲೆ ಹಾಕಿಕೊಂಡು ಗೂಡನ್ನು ಮಾರುಕಟ್ಟೆಗೆ ತೆಗೆದುಕೊಂಡು ಹೋಗಲು ಮಾತ್ರ ಕಾಣಿಸಿಕೊಳ್ಳುತ್ತಾರೆ. ತೋಟ ಹದ ಮಾಡುವುದು, ಸೊಪ್ಪು ಕೀಳುವುದು, ಹುಳ ಸಾಕುವುದು ಎಲ್ಲವನ್ನೂ ಮನೆಯ ಹೆಂಗಸರು ಮತ್ತು ಮಕ್ಕಳುಗಳೇ ನಿರ್ವಹಿಸಬೇಕಾಗಿರುತ್ತದೆ. ನಮ್ಮ ಅನೇಕ ಜನ ಗಂಡಸರು ಬೆಳಿಗ್ಗೆ ಗುಡಿಸಲು ಹೋಟೆಲುಗಳಲ್ಲಿ ಅರ್ಧ ಟೀ ಕುಡಿದು ಸಂಜೆ ಸಾರಾಯಿ ಅಂಗಡಿಗಳಲ್ಲಿ ಕ್ವಾರ್ಟರ್ ಸಾರಾಯಿ ಕುಡಿದು, ಕೆಲಸಕ್ಕೆ ಬಾರದ ಕಾಡುಹರಟೆ ಹೊಡೆಯುತ್ತಾ ಕಾಲ ಕಳೆಯುವುದು ನನಗೆ ತಿಳಿದಿದ್ದರಿಂದ ನಾನು ಇವರ ವಾದವನ್ನು ಸಂಪೂರ್ಣವಾಗಿ ನಂಬುತ್ತಿರಲಿಲ್ಲ. ಮೊಟ್ಟೆ ವಿತರಣೆ ಮಾಡಿದ ಲಾಟಿನಲ್ಲಿ ನೂರಕ್ಕೆ ೯೦ ಜನರ ಬೆಳೆ ಚೆನ್ನಾಗಿ ಬಂದು ಇನ್ನು ೧೦ ಜನರ ಬೆಳ

ಕೆಟ್ಟಾಗಲೂ ಮೊಟ್ಟೆಗಳದೇ ದೋಷ ಎಂದರೆ ಇದನ್ನು ನಂಬಲು ಹೇಗೆ ಸಾಧ್ಯ? ಇದರೆಲ್ಲದರ ಹಿನ್ನೆಲೆಯಲ್ಲಿ ಉತ್ತಮ ಬೆಳೆಗೆ ಒಳ್ಳೆಯ ಹಿಪ್ಪುನೇರಳೆ ಸೊಪ್ಪು, ಉತ್ತಮ ಹುಳು ಸಾಕುವ ಮನೆ, ಸಾಕುವವನ ಶ್ರದ್ಧೆ ಇವು ರೋಗರಹಿತ ಗುಣಮಟ್ಟದ ಮೊಟ್ಟೆಗಳಷ್ಟೇ ಮುಖ್ಯ ಎನ್ನುವುದನ್ನು ಅರಿವು ಮಾಡಿಕೊಡಲು ನನ್ನದೇ ಆದ ಆಡು ಭಾಷೆಯಲ್ಲಿ ಎಲ್ಲಾ ಕಡೆಯಲ್ಲಿಯೂ ಪ್ರಯತ್ನಿಸಿದೆ.

ಎಲ್ಲರೂ ಒಪ್ಪುವಂತಹ ನಿರ್ವಿವಾದ ವಿಷಯವೆಂದರೆ ಹುಳು ಸಾಕುವುದರಲ್ಲಿ ಮೊದಲನೆಯ ೨ ಹಂತಗಳಲ್ಲಿ ಚಾಕಿಯನ್ನು ಜಾಗರೂಕತೆಯಿಂದ ಅತ್ಯಂತ ಹಿತಕರವಾದ ಉಷ್ಣಾಂಶ ಮತ್ತು ತೇವಾಂಶಗಳಲ್ಲಿ ರಸಭರಿತ ಹಿಪ್ಪುನೇರಳೆ ಸೊಪ್ಪುಗಳನ್ನು ಹಾಕಿ ಸಾಕಿದರೆ ಮುಂದಿನ ಹಂತಗಳಲ್ಲಿ ದೃಢಕಾಯವಾದ ಆರೋಗ್ಯಕರ ಹುಳುಗಳ ಬೆಳವಣಿಗೆ ಸಾಧ್ಯ ಹಾಗೂ ಬೆಳೆ ಹಾಳಾಗುವುದನ್ನು ತಡೆಯಬಹುದು. ಬೆಳೆದ ಹುಳುಗಳಿಗೆ ನೀರು ಸೋರುತ್ತಿರುವ ದೊಡ್ಡ ದೊಡ್ಡ ರೆಕ್ಕೆಗಳ ಸೊಪ್ಪನ್ನು ನಾವು ಮೇಕೆಗಳಿಗೆ ಸೊಪ್ಪು ಹಾಕುವಂತೆ ಹಾಕುವುದನ್ನು ಮತ್ತು ನಮ್ಮ ಆಸ್ಪತ್ರೆಗಳಲ್ಲಿರುವ ಶಸ್ತ್ರ ಚಿಕಿತ್ಸಾಲಯಗಳಷ್ಟು ಸ್ವಚ್ಛವಾಗಿ ಇಟ್ಟುಕೊಂಡಿರುವ ಚಾಕಿ ಸಾಕಾಣಿಕೆ ಕೇಂದ್ರಗಳನ್ನು ನಾನು ಜಪಾನಿನಲ್ಲಿ ನೋಡಿದಾಗ ಇದು ಶೇಕಡಾ ೧೦೦ಕ್ಕೆ ೧೦೦ ನಿಜವೆನಿಸಿತು. ಇದನ್ನು ಗಮನದಲ್ಲಿಟ್ಟುಕೊಂಡೇ ವಿಶ್ವಬ್ಯಾಂಕಿನ ನೆರವಿನ ಯೋಜನೆಯಲ್ಲಿ ತಾಂತ್ರಿಕ ಕೇಂದ್ರಗಳನ್ನು ಮತ್ತು ಚಾಕಿ ಸಾಕಾಣಿಕಾ ಕೇಂದ್ರಗಳನ್ನು ಸ್ಥಾಪಿಸಿ, ರೈತರಿಗೆ ಮೊಟ್ಟೆಯ ಬದಲು ಚಾಕಿಯನ್ನು ಹಂಚುವ ಏರ್ಪಾಡು ಮಾಡಲಾಗಿದೆ. ಇತ್ತೀಚಿನ ದಿನಗಳಲ್ಲಿ ಈ ಚಾಕಿ ಹಂಚುವ ಕಾರ್ಯಕ್ರಮ ಸ್ಥಗಿತಗೊಂಡಿದೆ. ಮಿಶ್ರತಳಿ ಮೊಟ್ಟೆ, ತಯಾರಿಕೆ ಮತ್ತು ಅದರ ವಿತರಣೆಯನ್ನೂ ಇಲಾಖೆಯವರು ಮತ್ತು ಖಾಸಗಿ ಮೊಟ್ಟೆ ತಯಾರಕರು ಮಾಡುತ್ತಿದ್ದಾರೆ. ಮನೆ ಕಟ್ಟಲು ಅಡಿಪಾಯ ಎಷ್ಟು ಮುಖ್ಯವೋ ಹಾಗೆಯೇ ರೇಷ್ಮೆ ಕೈಗಾರಿಕೆಯ ಅಭಿವೃದ್ಧಿಗೆ ಬಿತ್ತನೆ ವಲಯಗಳ ಪ್ರಾಮುಖ್ಯತೆಯೂ ಅಷ್ಟೇ ಮುಖ್ಯ.

೧೨

ರೇಷ್ಮೆ ಖಾತೆ ಸಚಿವನಾದ ಮೇಲೆ ಈ ಉದ್ಯಮವನ್ನು ನೋಡುವ ನನ್ನ ದೃಷ್ಟಿಯಲ್ಲಿನ ಸಮಸ್ಯೆಗಳ ಬಗೆಗಿನ ಅನಿಸಿಕೆಗಳಲ್ಲಿ ಆಮೂಲಾಗ್ರ ಬದಲಾವಣೆ ಆಯಿತೆಂದರೆ ತಪ್ಪಾಗಲಾರದು. ಅಂಕಿ- ಅಂಶಗಳ ಕಡೆ ನನ್ನ ಗಮನ ಅತಿಯಾಯಿತು. ಅಂತರರಾಷ್ಟ್ರೀಯ ಮಟ್ಟದಲ್ಲಿ ೭ನೇ ಸ್ಥಾನದಲ್ಲಿರುವ ಭಾರತವನ್ನು ಹೇಗಾದರೂ ಮಾಡಿ ೫ನೇ ಸ್ಥಾನಕ್ಕಾದರೂ ತರಬೇಕೆಂಬ ಚಪಲ ತಲೆಯಲ್ಲಿ ತೂರಿತ್ತು. ಅಂದರೆ ಹೇಗಾದರೂ ಮಾಡಿ ರೇಷ್ಮೆ ಉತ್ಪಾದನೆ ಹೆಚ್ಚಿಸಬೇಕು ಎನ್ನುವ ಆಲೋಚನೆ ಕಾಡಿತ್ತು. ಈ ದಿಸೆಯಲ್ಲಿ ಸುಮಾರು ೫೦ ಭಾಗ ರೇಷ್ಮೆ ವ್ಯವಸಾಯವಿರುವ ಮೈಸೂರು ಜಿಲ್ಲೆಯಲ್ಲಿ ಬೈವೊಲ್ಟಿನ್ ಬೆಳೆಯುವುದು ಹೋಗಲಿ, ಹೊಸ ಮಿಶ್ರ ತಳಿಯನ್ನು ಬೆಳೆಯಲೂ ರೈತರು ತಿರಸ್ಕರಿಸುತ್ತಿದ್ದುದು ರೇಷ್ಮೆ ಗುಣಮಟ್ಟವನ್ನು ಅಂತರರಾಷ್ಟ್ರೀಯ ಮಟ್ಟಕ್ಕೆ ತರಬೇಕೆಂಬ ನಮ್ಮ ಹಂಬಲಕ್ಕೆ ತಣ್ಣೀರು ಎರಚಿದಂತಾಗಿತ್ತು. ನನಗೆ ಪರಿಚಯವಿರುವ ಆ ಪ್ರದೇಶದ ಎಲ್ಲರನ್ನೂ ಹೇಗಾದರೂ ಮಾಡಿ ಒಂದು ಕಡೆ

ಸೇರಿಸಿ ಮನವೊಲಿಸಿಕೊಂಡು, ಚಾಮರಾಜನಗರ ಪ್ರದೇಶದಲ್ಲಿ ಕೊನೆಯ ಪಕ್ಷ ಮಿಶ್ರ ತಳಿಯನ್ನಾದರೂ ಬೆಳೆಸಲು ಒಪ್ಪಿಸಬೇಕೆಂದು ಕಾರ್ಯೋನ್ಮುಕನಾಗಿದ್ದೆ.

ಚಾಮರಾಜನಗರದ ಹೊಸ ಬಿತ್ತನೆ ಕೋಠಿಯ ಪ್ರಾರಂಭೋತ್ಸವ. ಅಲ್ಲಿಂದ ಆರಿಸಿ ಬಂದಿದ್ದ ಬಿ. ರಾಚಯ್ಯನವರು ಆಗ ಸಚಿವರು, ಶ್ರೀ ಪುಟ್ಟಸ್ವಾಮಯ್ಯನವರು ಶಾಸನಸಭೆ ಸದಸ್ಯರು. ಈ ಸಭೆ ನಡೆಸಬೇಕಾದ ಸಮಯಕ್ಕೆ ಶಾಸಕರಾದ ಶ್ರೀ ಪುಟ್ಟಸ್ವಾಮಯ್ಯನವರು ಪ್ರವಾಸ ಹೋಗಿದ್ದರು. ಶ್ರೀ ರಾಚಯ್ಯನವರು ಅವರಿಗೆ ಕಾಯಲು ಸಿದ್ಧರಿಲ್ಲ. ಸಮಾರಂಭ ಮಾಡಿ ಮುಗಿಸೋಣವೆಂದರೆ ನಾನು ಒಪ್ಪಲಿಲ್ಲ. ಶ್ರೀ ಪುಟ್ಟಸ್ವಾಮಯ್ಯನವರು ಬಂದ ಮೇಲೆಯೇ ಮಾಡೋಣವೆಂದು ಮುಂದಕ್ಕೆ ಹಾಕಿದೆ. ಕಾರಣ ವಿರೋಧ ಪಕ್ಷದ ಸ್ಥಳೀಯ ಶಾಸಕರನ್ನು ಕಡೆಗಣಿಸಲು ನಾನು ಸಿದ್ಧನಿರಲಿಲ್ಲ. ಜೊತೆಗೆ ಅಲ್ಲಿನ ರಾಜಕೀಯ ಹಿನ್ನೆಲೆ ಕೂಡ ನನಗೆ ತಿಳಿದಿತ್ತು. ಜೊತೆಗೆ ಹೇಗಾದರೂ ಮಾಡಿ ಈ ಸೀಸಿಬಿ ತಳಿ ನಿಲ್ಲಿಸಲು ಎಲ್ಲರನ್ನೂ ಒಂದು ಕಡೆ ಸೇರಿಸಿ ಮನವೊಲಿಸಬೇಕೆಂಬ ಆಸೆ ಕೂಡ ಇದಕ್ಕೆ ಕಾರಣವಾಗಿತ್ತು. ಸಭೆಗೆ ಎಲ್ಲರೂ ಸೇರಿದೆವು. ಆದರೆ ಸೀನಿಬಿ, ವಿಷಯ ಬಂದಾಗ ಈ ನಾಯಕರೂ ಕೂಡ ಹಳೆ ಮಿಶ್ರತಳಿ ಮೊಟ್ಟೆಯನ್ನೇ ಹಂಚುವುದು ಒಳ್ಳೆಯದು. ಅದರಲ್ಲಿಯೂ ಬೇಸಿಗೆಯಲ್ಲಿ ಇದು ಅನಿವಾರ್ಯ. ಏಕೆಂದರೆ ಬಹುತೇಕ ತೋಟಗಳು ಮಳೆ ಆಶ್ರಿತ ತೋಟಗಳು. ಮಳೆ ಕೂಡ ಕಾಲಕ್ಕೆ ತಕ್ಕ ಹಾಗೆ ಆಗುವುದಿಲ್ಲ. ಬರಗಲು ಸೊಪ್ಪು ತಿಂದರೂ ಹಳೆ ಮಿಶ್ರ ತಳಿ ಹುಳುಗಳು ಬೇಸಿಗೆಯಲ್ಲೂ ಅಷ್ಟಿಷ್ಟು ಇಳುವರಿ ಕೊಡುತ್ತವೆ. ಆದರೆ ಇಂತಹ ಸೊಪ್ಪು ಹಾಕಿ ಸಾಕಿದರೆ ಹೊಸ ಮಿಶ್ರತಳಿ ಹುಳುಗಳು ಸಂಪೂರ್ಣ ಹಾಳಾಗುತ್ತವೆ. ಜೊತೆಗೆ ಹೊಸ ಮಿಶ್ರತಳಿ ಮೊಟ್ಟೆ ತಯಾರಿಕೆಗೆ ಬೇಕಾದ ಬೈವೊಲ್ಟಿನ್ ಗೂಡುಗಳು ಬೇಸಿಗೆಯಲ್ಲಿ ಸಿಕ್ಕುವುದಿಲ್ಲ ಎಂಬ ರೈತರ ಅಭಿಪ್ರಾಯಕ್ಕೆ ಇವರೂ ದನಿ ಸೇರಿಸಿದರು. ಈಗ ತಾನೆ ಮೊದಲಾಗಿರುವ ಈ ಬಿತ್ತನೆ ಕೋಠಿಯಲ್ಲಿ ಒಳ್ಳೆಯ ಮೊಟ್ಟೆ ಮಾಡಿಸಿ ವಿಶ್ವಬ್ಯಾಂಕ್ ನೆರವಿನ ಯೋಜನೆಯ ಚಾಕಿ ಸಾಕಾಣಿಕೆ ಕೇಂದ್ರದಿಂದ ಚಾಕಿಕೊಡಿ, ಹೊಸದಾಗಿ ಆಗಿರುವ ತಾಂತ್ರಿಕ ಕೇಂದ್ರಗಳಿಂದ ರೈತರಿಗೆ ಪ್ರಚುರಪಡಿಸಿ, ಮೈಸೂರು ಜಿಲ್ಲೆ ಬೆಳೆಗಾರರು ಕಂದಾಚಾರದವರಾದರೂ ಹಂಸ ಮಿಶ್ರತಳಿ ಹೆಚ್ಚು ಲಾಭದಾಯಕವಾದರೆ ಅವರೇ ಮುಂದೆ ಬಂದು ಆ ತಳಿ ಮೇಯಿಸುವವರು, ಸದ್ಯದಲ್ಲಿ ಹೊಸ ತಳಿಯನ್ನು ರೈತರ ಮೇಲೆ ಹೇರುವುದು ಬೇಡ ಎಂದು ವಾದಿಸಿದರು. ಅಷ್ಟೇ ಅಲ್ಲ, ಬೇಸಿಗೆಯಲ್ಲಿ ಇಲಾಖೆಯವರೇ ಹಳೆ ಮಿಶ್ರ ತಳಿ ಮೊಟ್ಟೆ ಹಂಚಲು ಏರ್ಪಾಡು ಮಾಡಬೇಕೆಂದು ಒತ್ತಾಯಿಸಿದರು. ಸಚಿವನಾಗುವ ಮೊದಲು ಇವರ ವಾದವೇ ನನ್ನ ವಾದವಾಗಿತ್ತು. ಅಂದರೆ "ಯಾವುದು ಚೆನ್ನಾಗಿ ಬೆಳೆ ಆಗುತ್ತೋ ಅದನ್ನು ಬೆಳೆಯುತ್ತಾನೆ ರೈತ". ಆದರೆ ಈಗ ನಾನು ಏನಾದರೂ ಸಾಧಿಸಬೇಕೆಂಬ ಚಪಲ ಹೊತ್ತ ಸಚಿವನಲ್ಲವೆ? ಅನೇಕ ವರ್ಷಗಳಿಂದ ನಂಬಿದ್ದ ಅನಿಸಿಕೆಗಳನ್ನು ಮರೆತು ಹೇಗೆ ತೀರ್ಮಾನ ಮಾಡಲಿ? ಮಂತ್ರಿಯಾಗಿ ನಾನು ಈ ಬೇಡಿಕೆಯನ್ನು ಇಲಾಖೆಯ ನಿರ್ಣಯದ ವಿರುದ್ಧ ತೆಗೆದುಕೊಳ್ಳಬೇಕಾಗಿತ್ತು. ನನ್ನವೇ ಆದ ನಂಬಿಕೆ, ಅನಿಸಿಕೆ, ಅಭಿಪ್ರಾಯಗಳಿಗೂ, ಈಗ ಆಡಳಿತಗಾರನಾಗಿ ನಾನು ತೆಗೆದುಕೊಳ್ಳಬೇಕಾದ ತೀರ್ಮಾನಗಳಿಗೂ ಒಂದು ವಿಧವಾದ

ಸಂಘರ್ಷವೇ ಪ್ರಾರಂಭವಾಯಿತು. ಬೆಳೆಗಾರನ ಹಿತ, ಆಡಳಿತಗಾರನ ಹಂಬಲ ಮನ ತಲ್ಲಣಿಸಿತು. ಇಲಾಖೆಯವರ ಅಡ್ಡಿ-ಆತಂಕಗಳಿರಲಿಲ್ಲ. ಮಂತ್ರಿ, ಶಾಸಕರ ಒತ್ತಾಯಕ್ಕೆ ಮಣಿಯುವ ಅನಿವಾರ್ಯತೆ ಇರಲಿಲ್ಲ. ಆದರೂ ಏನೋ ಗೊಂದಲ. "ಆಡಳಿತಗಾರನ ದಿಢೀರ್ ಪರಿಹಾರ ಮಾರ್ಗ ಮತ್ತು ಕ್ರಮಗಳು ಪ್ರಾಣಿ ಮತ್ತು ಸಸ್ಯಗಳ ಅಭಿವೃದ್ಧಿ ಕಾರ್ಯಾಚರಣೆಯಲ್ಲಿ ಸಲ್ಲದು. ಅಲ್ಲದೆ ಪರಿಸರದ ವಾಸ್ತವಿಕತೆ ಮತ್ತು ವಿವೇಚನಾ ಜ್ಞಾನವಿಲ್ಲದೆ ಅತಿ ಬುದ್ಧಿವಂತಿಕೆ ಮತ್ತು ಆಡಳಿತದ ದಕ್ಷತೆಯ ದೃಷ್ಟಿಯಿಂದ ತೆಗೆದುಕೊಂಡ ತೀರ್ಮಾನಗಳು, ನಿರ್ಣಯಗಳು ಮತ್ತು ಕಾರ್ಯನಿರ್ವಹಣೆಗಳು ಒಳಿತನ್ನು ಮಾಡುವ ಬದಲು ಕೆಡುಕನ್ನೇ ತರುವ ಸಂಭವಗಳೇ ಹೆಚ್ಚೆಂದು ನನಗನ್ನಿಸಿತು. ಆನೇಕಲ್‌ನಲ್ಲಿ ಬೈವೊಲ್ಟಿನ್ ತಳಿಯನ್ನು ಬಲವಂತವಾಗಿ ಹೇರಿ ಆದ ಅನುಭವ ಹಸಿರಾಗಿತ್ತು. ಬೆಳೆ ಕಳೆದುಕೊಂಡ ಬೆಳೆಗಾರನ ಬೆಳಕಿಲ್ಲದ ಮನೆಯ ಚಿತ್ರ ಕಣ್ಣ ಮುಂದೆ ಕಟ್ಟಿ ಬಂತು. ಅಬ್ಬಾ! ಈ ವಿಜ್ಞಾನಿಗಳ, ಸಂಶೋಧಕರ, ಪರಿಣತರ, ಆಡಳಿತಗಾರರ ಹಾಗೂ ಇಲಾಖೆಯ ಅಧಿಕಾರಿಗಳ ದೃಷ್ಟಿಕೋನಕ್ಕೂ, ಸಾಮಾನ್ಯ ರೇಷ್ಮೆ ಬೆಳೆಗಾರನ ದೃಷ್ಟಿಕೋನಕ್ಕೂ ಅದೆಷ್ಟು ಅಂತರ. ದೊಡ್ಡ ಕಂದಕವೇ ನಿರ್ಮಾಣವಾಗಿದೆ ಎನಿಸಿತು. ಇವರೆಲ್ಲರಿಗೂ ಒಂದಲ್ಲ ಒಂದು ವಿಧದಲ್ಲಿ "ಕೀರ್ತಿ". ಶನಿಕಾಟ. ಆದರೆ, ಬೆಳೆಗಾರನಿಗೆ ಯಾವ ತಳಿಯಾದರೇನು? ಸುಲಭವಾಗಿ ಸಾಕುವಂತಿರಬೇಕು. ಬೆಳೆ ಹಾಳಾಗಬಾರದು, ಖರ್ಚು ಹೆಚ್ಚಾಗಬಾರದು, ಆದಾಯ ಉತ್ತಮವಾಗಿರಬೇಕು. ಆಡಳಿತಗಾರರ ಮತ್ತು ಇತರರ ಗುರಿ ಹೆಚ್ಚು ಇಳುವರಿ ಕೊಡುವ ಅಂತರರಾಷ್ಟ್ರೀಯ ಗುಣಮಟ್ಟದ ರೇಷ್ಮೆ ತಳಿಗಳನ್ನು ಪ್ರಚುರಪಡಿಸಬೇಕು. ನಮ್ಮ ದೇಶ ಪ್ರಪಂಚದ ಭೂಪಟದಲ್ಲಿ ಮೊದಲನೇ ಸ್ಥಾನ ಗಳಿಸಬೇಕು, ಈ ಎರಡು ದೃಷ್ಟಿಕೋನಗಳ ಸಮಾಗಮವಾದರೆ ಮಾತ್ರ ಅಭಿವೃದ್ಧಿ ಸಾಧ್ಯ ಎನ್ನುವ ಸತ್ಯ ನಿಚ್ಚಳವಾಗಿ ಗೋಚರಿಸಿತು. ಇಲಾಖೆ ನಿರ್ಣಯದ ವಿರುದ್ಧವಾದರೂ ವಾಸ್ತವಿಕತೆಯ ಹಾಗೂ ಬೆಳೆಗಾರನ ದೃಷ್ಟಿಯಿಂದ ಹಳೆ ಮಿಶ್ರ ಚಾಕಿ ಮೊಟ್ಟೆಯನ್ನು ಕೆಲವು ಕಾಲ ಅದರಲ್ಲಿಯೂ ಬೇಸಿಗೆಯಲ್ಲಿ ಖಾಸಗೀ ಮೊಟ್ಟೆ ತಯಾರಕರು ತಯಾರಿಸಿ ಹಂಚಲು ಅನುಮತಿ ಕೊಡುವ ನಿರ್ಣಯ ಮಾಡಿದೆ. ಅಲ್ಲಿನ ಮೊಟ್ಟೆ ತಯಾರಕರೂ ಹಾಗೂ ರೈತರು ಖುಷಿಪಟ್ಟರು. ಕೆಲವರು ಉದ್ಯಮದಲ್ಲಿ ಇದು ಹಿಂಜರಿತವೆಂದೂ ಮಾತನಾಡಿಕೊಂಡರು. ನಾನೀಗಾಗಲೇ ಹೇಳಿರುವಂತೆ ನಾವು ಯಾರೇ ಏನೇ ಮಾಡಿದರೂ ಹೇಳಿದರೂ 'ನಾಟಿ ಕಡ್ಡಿ', 'ಸೀನಿಚಿ ತಳಿ' ಇನ್ನೂ ಅಲ್ಲಿ ಉಳಿದಿದೆ.

ನಿರ್ದಿಷ್ಟ ಕಾರ್ಯಕ್ರಮಗಳ ಬಗ್ಗೆ ನಾನು ಆಲೋಚಿಸತೊಡಗಿದೆ. ಅಂದಿನ ಸರ್ಕಾರಿ ಕಾರ್ಯದರ್ಶಿಗಳಾಗಿದ್ದ ಶ್ರೀ ಪದ್ಮನಾಭ ಅವರು ಮತ್ತು ಇಲಾಖೆ ನಿರ್ದೇಶಕರಾಗಿದ್ದ ಶ್ರೀ ಬಿ.ಕೆ. ದಾಸ್‌ರವರು ನನ್ನನ್ನು ಅರ್ಥ ಮಾಡಿಕೊಂಡು ನಡೆದುಕೊಳ್ಳುತ್ತಿದ್ದರು. ನಡೆದುಕೊಳ್ಳದೆ ವಿಧಿ ಇರಲಿಲ್ಲ!

ಮೊದಲನೆಯದಾಗಿ ಬಿತ್ತನೆ ಕ್ಷೇತ್ರಗಳು ಮತ್ತು ವಲಯಗಳ ಗುಣಮಟ್ಟದ ಬಿತ್ತನೆ ಗೂಡುಗಳನ್ನು ಒದಗಿಸಲು ಅಗತ್ಯವಾದ ಕಾರ್ಯಕ್ರಮ ಕೈಗೊಳ್ಳುವುದು. ಎರಡನೆಯದಾಗಿ ಗುಣಮಟ್ಟದ ರೋಗರಹಿತವಾದ ಮೊಟ್ಟೆಗಳನ್ನು ಸರ್ಕಾರಿ ಮತ್ತು ಖಾಸಗಿ ತಯಾರಿಕಾ

ಕೇಂದ್ರಗಳಲ್ಲಿ ಒದಗಿಸುವಂತೆ ಏರ್ಪಾಡು ಮಾಡುವುದು. ಪೂರಕವಾಗಿ ಬಾಕಿ ಸರ್ಕಾರಿ ಕೇಂದ್ರಗಳು ಮತ್ತು ತಾಂತ್ರಿಕ ಸೇವಾ ಕೇಂದ್ರಗಳು ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುವಂತೆ ನೋಡಿಕೊಳ್ಳುವುದು.

ಈ ಉದ್ಯಮದ ಮತ್ತೊಂದು ವಿಶೇಷವೆಂದರೆ ಮೂಲ ಬಿತ್ತನೆ ಗೂಡುಗಳನ್ನು ಮೂರು ಹಂತಗಳಲ್ಲಿ ಸಂಸ್ಕರಿಸುವುದು. ಇದರ ಮೂಲ ಉದ್ದೇಶ ಬಿತ್ತನೆಯನ್ನು ದೃಢಕಾಯವಾಗಿ ಮತ್ತು ರೋಗರಹಿತವಾಗಿ ಕಾಪಾಡುವುದು, ಈ ಹಂತಗಳನ್ನು ಪಿ೧, ಪಿ೨, ಪಿ೩ ಗಳೆಂದು ಕರೆಯುತ್ತಾರೆ. ಮನುಷ್ಯರಲ್ಲಿ ತಂದೆ, ಅಜ್ಜ, ಮುತ್ತಜ್ಜ ಇದ್ದ ಹಾಗೆ ಎಂದು ಹೇಳಬಹುದು. ಈ ಬಿತ್ತನೆ ಗೂಡುಗಳನ್ನು ಎಲ್ಲಾ ಹಂತದಲ್ಲಿಯೂ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರಗಳಲ್ಲಿ ಬೆಳೆದು ಆ ಗೂಡುಗಳನ್ನು ಮೊಟ್ಟೆ ತಯಾರಿಕಾ ಕೇಂದ್ರಗಳಲ್ಲಿ ಸಂಸ್ಕರಿಸಿ ಮೊಟ್ಟೆ ತಯಾರು ಮಾಡುತ್ತಾರೆ. ಪಿ೧ ಹಂತದ ಗೂಡುಗಳಿಂದ ತಯಾರಾದ ಮೊಟ್ಟೆಗಳನ್ನು ಬಿತ್ತನೆ ಬೆಳೆಯುವ ರೈತರಿಗೆ ಸಾಕಲು ಹಂಚುತ್ತಾರೆ. ರೈತರು ಬೆಳೆದ ಗೂಡುಗಳು ರೋಗರಹಿತವಾಗಿದ್ದು, ಗುಣಮಟ್ಟದವುಗಳಾಗಿದ್ದರೆ ಮಾತ್ರ ಬಿತ್ತನೆಗೆ ಯೋಗ್ಯವೆಂದು ದೃಢೀಕರಿಸಿ ಮಿಶ್ರತಳಿ ಮೊಟ್ಟೆ ತಯಾರು ಮಾಡಲು ಹಂಚುತ್ತಾರೆ. ಈ ವಿಧಾನವನ್ನು ಮೈಸೂರು ಬಿತ್ತನೆ ವಲಯ ಹಾಗೂ ಬೈವೋಲ್ಟಿನ್ ಬಿತ್ತನೆ ವಲಯಗಳಲ್ಲಿ ಅನುಸರಿಸುತ್ತಾರೆ. ಒಳಹೊಕ್ಕು ನೋಡಬೇಕು ಈಗಿನ ವ್ಯವಸ್ಥೆಯಲ್ಲಿನ ನಮ್ಮ ಕಾರ್ಯಕ್ರಮಗಳು ಕೆಲಸ ಮಾಡುವ ಕಾರ್ಯವೈಖರಿಯನ್ನು ಕಂಡು ಕೆಲವು ಸಾರಿ ಅಳಬೇಕೆನ್ನಿಸುತ್ತದೆ, ಇನ್ನೂ ಕೆಲವು ಸಾರಿ ಕಪಾಳಕ್ಕೆ ಬಾರಿಸಬೇಕೆನ್ನಿಸುತ್ತದೆ. ತತ್ವಗಳಿಗೂ ಆಚರಣೆಗಳಿಗೂ ನಮ್ಮ ಆಡಳಿತ ವ್ಯವಸ್ಥೆಯಲ್ಲಿ ಅಷ್ಟೇ ಏಕೆ ನಮ್ಮ ಬದುಕಿನಲ್ಲಿಯೂ ಅಂತರ ಹಾಗೆ ಆಷಾಢಭೂತಿತನ! "ತತ್ವ ಹೇಳಲಿಕ್ಕೆ ಬದನೆಕಾಯಿ ತಿನ್ನಲಿಕ್ಕೆ" ಎಂದು ಇದಕ್ಕಾಗಿಯೇ ನಮ್ಮ ಹಿರಿಯರು ಹೇಳಿದರು ಎಂದು ಕಾಣುತ್ತದೆ. ಪ್ರಗತಿ ಆಗಬೇಕಾದರೆ, ವ್ಯವಸ್ಥೆ ಸ್ವಚ್ಛವಾಗಬೇಕಾದರೆ ಈ ಅಂತರ ಆದಷ್ಟೂ ಕಡಿಮೆ ಆಗಬೇಕು. ನಮ್ಮ ಪಿ೩, ಪಿ೨, ಪಿ೧, ಕೃಷಿ ಕ್ಷೇತ್ರಗಳು ಮಾದರಿಯಾಗಿ ಕೆಲಸ ಮಾಡಬೇಕಾಗಿದ್ದ ಕೇಂದ್ರಗಳು. ಆದರೆ ಅವು ಹಾಗೆ ಕೆಲಸ ಮಾಡುತ್ತಿರಲಿಲ್ಲ. ಇದಕ್ಕೆ ಕೊಡುತ್ತಿದ್ದ ಕಾರಣಗಳು ಹಲವಾರು. ಮಾಮೂಲಿ ಕಾರಣ ಸಾಧನ-ಸಂಪತ್ತುಗಳ ಕೊರತೆ. ಇರುವುದರಲ್ಲಿಯೇ ಪರಿಣಾಮಕಾರಿಯಾಗಿ ಉಪಯೋಗಿಸಿಕೊಳ್ಳುವಂತೆ ಕೆಲವು ಕ್ಷೇತ್ರಗಳನ್ನು ಪಿ೩, ಪಿ೨, ಪಿ೧ ಗಳಾಗಿ ಆಯ್ದು ತಾಂತ್ರಿಕತೆಯನ್ನು ಅಳವಡಿಸಿ ಬಿತ್ತನೆಯನ್ನು ಸಂಸ್ಕರಿಸಲು ಕಾರ್ಯಕ್ರಮ ಒಂದನ್ನು ರೂಪಿಸಿ ವಿಧಿವತ್ತಾಗಿ ಆಚರಿಸಲು ಕ್ರಮ ತೆಗೆದುಕೊಳ್ಳಲಾಯಿತು.

ಮೈಸೂರು ಬಿತ್ತನೆ ವಲಯದಲ್ಲಿ ಒಂದು ಕೆ. ಜಿ. ನೂಲು ಬಿಚ್ಚಲು ಹೋಗುವ ಬಿತ್ತನೆ ಗೂಡಿಗೆ ಕೊಡುತ್ತಿದ್ದ ೫-೦೦ ರೂ, ಬೋನಸ್, ಮಿಶ್ರತಳಿ ಗೂಡಿನ ಬೆಲೆಯ ಅಂತರವನ್ನು ಮುಚ್ಚಲು ಸಾಧ್ಯವಾಗಿರಲಿಲ್ಲ. ಲೆಕ್ಕಾಚಾರದ ಪ್ರಕಾರ ೧೦ ರೂಪಾಯಿಗಳ ಪರಿಹಾರ ಕೊಡಬೇಕಾಗಿತ್ತು. ನಮ್ಮ ಜನ ಎಂತಹವರೆಂದರೆ ಯಾವುದಾದರೂ ಸವಲತ್ತು ಅದಾಗಿ ಬಂದರೆ ಅನುಭವಿಸುತ್ತಾರೆ. ಇಲ್ಲದಿದ್ದರೆ ಸುಮ್ಮನಿರುತ್ತಾರೆ. ತಮಗೆ ನ್ಯಾಯವಾಗಿ

ಸಲ್ಲಬೇಕಾದ ಸವಲತ್ತಿಗೆ ಹೋರಾಡುವ ಪ್ರವೃತ್ತಿಯನ್ನು ಇವರಿಗೆ ಕಲಿಸುವುದರಲ್ಲೇ ನನ್ನ ಅರ್ಧ ಆಯಸ್ಸು ಮುಗಿಯಿತು.

ಇಂತಹ ಪರಿಹಾರಗಳಿಗಾಗಿ ಬೇರೆಯವರ ಕೃಪಾಕಟಾಕ್ಷಕ್ಕಾಗಿ ಕಾಯುತ್ತಿದ್ದ ನನಗೆ ನನ್ನ ಜನರು ಆ ಪರಿಹಾರವನ್ನು ಕೊಡುವ ಅಧಿಕಾರವನ್ನು ಈಗ ನನಗೇ ಕೊಟ್ಟಿದ್ದಾರೆ. ಬೆಳೆಗಾರನ ಅರ್ಜಿಗಳಿಲ್ಲ, ಒತ್ತಾಯಗಳಿಲ್ಲ, ಘೇರಾವೊ, ಮುಷ್ಕರಗಳಿಲ್ಲ. ಅದಾಗ್ಯೂ ಬೆಳೆಗಾರರಿಗೆ ೫-೦೦ರೂ. ನಿಂದ ೧೦-೦೦ ರೂಪಾಯಿಗಳಿಗೆ ಬೋನಸ್ ಹೆಚ್ಚಿಸಬೇಕೆಂದು ನಾನು ಕಳುಹಿಸಿದ ಪ್ರಸ್ತಾವನೆಗೆ ಹಣಕಾಸು ಇಲಾಖೆಯವರು "ಈ ಹಣಕ್ಕೆ ಆಯವ್ಯಯದಲ್ಲಿ ಅವಕಾಶ ಮಾಡಿಕೊಂಡಿಲ್ಲವಾದ್ದರಿಂದ ಈ ವರ್ಷ ಕೊಡಲಾಗುವುದಿಲ್ಲ" ಎಂಬ ಕೊಕ್ಕೆಯೊಡನೆ ಕಡತ ವಾಪಸ್ಸು ಬಂದಿತು. ಇಷ್ಟನ್ನು ಮಾಡಲಾಗದ ಮೇಲೆ ನಾನೇಕೆ ಮಂತ್ರಿಯಾಗಿರಬೇಕು? ಕಾಸಿನ ಸಚಿವರೂ ಆಗಿದ್ದ, ಮುಖ್ಯಮಂತ್ರಿಯವರಿಗೆ ಹೇಳಿದೆ: "ನಾನು ನನ್ನ ಖಾತೆಯ ಆಯವ್ಯಯದ ಚರ್ಚೆಗೆ ಉತ್ತರಿಸುವಾಗ ಈ ಪರಿಹಾರವನ್ನು ಘೋಷಿಸಲು ಆಗದಿದ್ದರೆ ನಾನು ಉತ್ತರವನ್ನು ಕೊಡುವುದಿಲ್ಲ" ವೆಂದು. ನನ್ನ ಹಠಮಾರಿತನದ ಅನುಭವವಿದ್ದ ಮುಖ್ಯಮಂತ್ರಿಗಳು ಸಂಬಂಧಪಟ್ಟವರಿಗೆ ಮಂಗಳಾರತಿ ಮಾಡಿದ ಮೇಲೆ ಕಡತ ತರಿಸಿಕೊಂಡ ಹಣಕಾಸು ಇಲಾಖೆಯಿಂದ ಒಪ್ಪಿಗೆ ಸೂಚಿಸಿ ಕಳುಹಿಸಿದರು. ಅನಂತರ ಅತ್ಯಂತ ಹೆಮ್ಮೆಯಿಂದ ೫-೦೦ ರೂಪಾಯಿ ಬೋನಸ್‌ನ್ನು ೧೦-೦೦ ರೂಪಾಯಿಗೆ ಹೆಚ್ಚಿಸಿದೆ ಎಂದು ವಿಧಾನಸಭೆಯಲ್ಲಿ ಘೋಷಿಸಿದೆ.

ನಾನು ಈಗಾಗಲೇ ತಿಳಿಸಿರುವಂತೆ ಮೈಸೂರು ತಳಿ ಕಡಿಮೆ ಇಳುವರಿ ಕೊಡುವ ಬಹು ಸಂತತಿ ತಳಿ. ಅನೇಕ ಶತಮಾನಗಳಿಂದ ಇದನ್ನು ಸಾಕುತ್ತಾ ಬಂದಿರುವುದರಿಂದ ಸ್ವಾಭಾವಿಕವಾಗಿ ಇದು ಬಹಳ ಶಕ್ತಿಹೀನವಾದ ತಳಿಯಾಗಿದೆ. ಇದಕ್ಕೆ ಬದಲು ಬಹುಸಂತತಿಯ ಉತ್ಪಾದನಾ ಶಕ್ತಿಯುಳ್ಳ ಹೊಸ ತಳಿಯ ಅವಶ್ಯಕತೆ ಇದೆ ಎಂದು ಮೊದಲಿನಿಂದಲೂ ಹಾರೈಸುತ್ತಿದ್ದ ನನಗೆ ನಾನು ಸಚಿವನಾದಾಗಲಾದರೂ ಒಂದು ಹೊಸ ತಳಿಯನ್ನು ಪ್ರಚುರಪಡಿಸಬೇಕೆಂದು ಆಸೆ ಪಟ್ಟೆ.

ಬೈವೊಲ್ಟಿನ್ ಗಂಡು ಚಿಟ್ಟೆಯಿಂದ ಆದ ಗುಣಮಟ್ಟದ ಪ್ರಗತಿಗೆ ಒತ್ತುಕೊಡಲು ಬಹುಸಂತತಿಯ ಹೊಸ ತಳಿ ಅನುಕೂಲವಾಗುವುದೆಂದು ಆಲೋಚಿಸಿದೆ. ಈ ವಿಷಯದಲ್ಲಿ ವಿಶ್ವವಿದ್ಯಾಲಯಗಳ ಮೈಸೂರು ಸಂಶೋಧನಾ ಕೇಂದ್ರದ ಹಾಗೂ ಕರ್ನಾಟಕ ರೇಷ್ಮೆ ಅಭಿವೃದ್ಧಿ ಕೇಂದ್ರದ ಸಂಶೋಧಕರೊಡನೆ ಚರ್ಚಿಸಿದೆ. ಆಗ ಮೈಸೂರಿನ ಸಂಶೋಧನಾ ಕೇಂದ್ರದವರು ತಮ್ಮಲ್ಲಿ ಇತ್ತೀಚೆಗೆ ಸಂಸ್ಕರಿಸಿದ ಆಶಾದಾಯಕ ಬಹುಸಂತತಿ ತಳಿಗಳಿವೆ ಎಂದು ಹೇಳಿ ನನಗೆ ಅವುಗಳ ಫಲಿತಾಂಶವನ್ನು ವಿವರಿಸಿದರು, ಸಂತೋಷಪಟ್ಟೆ. ಈ ತಳಿಯನ್ನು ಮೊದಲು ಕುಣಿಗಲ್‌ನಲ್ಲಿ ಸರ್ಕಾರಿ ಕೃಷಿ ಕ್ಷೇತ್ರದಲ್ಲಿ ಬೆಳೆಸಲು ಎಲ್ಲಾ ಏರ್ಪಾಡು ಮಾಡಿದೆವು. ಆಗ ಶ್ರೀ ವಿಶ್ವೇಶ್ವರಯ್ಯನವರು ಜಂಟಿ ನಿರ್ದೇಶಕರು. ಅವರೇ ಸ್ವತಃ ಮುತುವರ್ಜಿ ವಹಿಸಿ ಸಾಕಿಸುತ್ತಿದ್ದರು. ಆಗ ಅಲ್ಲಿ ಕೆಲಸ ಮಾಡುತ್ತಿದ್ದ ಒಬ್ಬ ಮಹಿಳಾ ನೌಕರಳಿಗೆ ಸಾಕುವ ಜವಾಬ್ದಾರಿ ವಹಿಸಿ, ಇದು ಫಲಪ್ರದವಾದರೆ ಈ ತಳಿಗೆ ನಿಮ್ಮ

ಹೆಸರಿಡುತ್ತೇನೆ ಎಂದು ಪ್ರೋತ್ಸಾಹಿಸಿದರು.(ಇದರ ಹೆಸರು ಎಂ. ಡಬ್ಲ್ಯೂ. ೧ ಮತ್ತು ಎಂ. ಡಬ್ಲ್ಯೂ. ೨ ಎಂದು ಕಾಣುತ್ತದೆ) ಇದೂ ಅಲ್ಲದೆ ಸಂಶೋಧನಾಲಯದವರು ತಮ್ಮ ಚಾಕೇನಹಳ್ಳಿ ಕೃಷಿ ಕ್ಷೇತ್ರದಲ್ಲಿ ಮತ್ತು ಅಲ್ಲಿನ ಕೆಲವು ರೈತರ ಮೂಲಕ ಈ ಹೊಸ ತಳಿಯನ್ನು ಸಾಕಲು ಪ್ರಯತ್ನಿಸಿದರು. ನಾನು ಕುಣಿಗಲ್‌ಗೆ ಹೋದ ಕೂಡಲೇ ಹೋಗಿ ಕುತೂಹಲದಿಂದ ಈ ಹೊಸ ತಳಿಯ ಪ್ರಗತಿಯನ್ನು ಪ್ರತಿ ಹಂತದಲ್ಲೂ ಗಮನಿಸುತ್ತಾ ಬಂದೆ. ಪ್ರಯೋಜನವಾಗಲಿಲ್ಲ. ಎರಡು-ಮೂರು ಸಂತಾನಗಳಲ್ಲಿ ಈ ಹೊಸ ತಳಿಯಿಂದ ಹಳೆ ತಳಿಯನ್ನು ಬದಲಾಯಿಸಲು ಸಾಧ್ಯವಿಲ್ಲವೆಂದು ಮನದಟ್ಟಾಯಿತು. ನನಗೆ ತುಂಬಾ ನಿರಾಶೆಯಾಯಿತು. ಶ್ರೀ ವಿಶ್ವೇಶ್ವರಯ್ಯ, ಶ್ರೀ ಕೃಷ್ಣಪ್ಪ ಮತ್ತು ಶ್ರೀ ಬೋರಯ್ಯ ಅವರೊಡನೆ ಚರ್ಚಿಸಿ ಕೈಬಿಡಲು ತೀರ್ಮಾನಿಸಿದೆವು. ಸಂಶೋಧನಾ ಸಂಸ್ಥೆಯವರು ತಾವು ಬಿಡುಗಡೆ ಮಾಡಿರುವ ತಳಿಗಳನ್ನು ಮತ್ತಷ್ಟು ಸಂಸ್ಕರಿಸಿ ಲೋಪದೋಷಗಳನ್ನು ಸರಿಪಡಿಸುವುದಾಗಿ ಹೇಳಿ ಹಿಂದಕ್ಕೆ ತೆಗೆದುಕೊಂಡರು.

೧೩

ಇದಾದ ಕೆಲವು ದಿನಗಳ ಮೇಲೆ ಅಂದರೆ ಆಗ ನನ್ನ ಖಾತೆ ಬದಲಾವಣೆ ಆಗಿ ನಾನು ತೋಟಗಾರಿಕೆ ಖಾತೆ ಸಚಿವನಾಗಿದ್ದೆ. ತೆರೆದಕುಪ್ಪೆಯ ರೇಷ್ಮೆ ಕೃಷಿ ಕ್ಷೇತ್ರದ ಉದ್ಘಾಟನೆಗಾಗಿ ಆಗಿನ ಕೇಂದ್ರ ಹಣಕಾಸು ಸಚಿವರಾಗಿದ್ದ ಶ್ರೀ ಎಸ್. ಬಿ. ಚೌಹಾಣ್ ಅವರು ಬಂದಿದ್ದರು. ಅವರಿಗೆ ವಿವರಣೆ ನೀಡುತ್ತಿದ್ದ ಅಧಿಕಾರಿ ಒಬ್ಬರು ಒಂದು ಚಾರ್ಟನ್ನು ತೋರಿಸಿ "ಇದು ನಮ್ಮ ಸಂಶೋಧನಾಲಯದವರು ಸಂಸ್ಕರಿಸಿದ ಬಹುಸಂತತಿಯ ಹಂಸ ತಳಿ ಎಂ. ಡಬ್ಲ್ಯೂ. ೧. ಇದು ಹಳೆ ಮೈಸೂರು ತಳಿಯನ್ನು ಯಶಸ್ವಿಯಾಗಿ ಬದಲಾಯಿಸಿದೆ " ಎಂದು ವಿವರಿಸಿದರು. ನಾನು ಬೆಚ್ಚಿದೆ. ಆಶ್ಚರ್ಯಗೊಂಡೆ. ಸಿಟ್ಟು ನೆತ್ತಿಗೇರಿದರೂ ಸುಮ್ಮನಾದೆ. ವೇದಿಕೆಯಲ್ಲಿ ನಾನು ಮಾತನಾಡುವ ಸರದಿ ಬಂದಾಗ ಸಂಪೂರ್ಣವಾಗಿ ವಿಫಲವಾದ ಈ ತಳಿಯನ್ನು ಯಶಸ್ವಿ ತಳಿ ಎಂದು ವಿವರಿಸಿದ ಅಧಿಕಾರಿಯನ್ನು ತರಾಟೆಗೆ ತೆಗೆದುಕೊಂಡೆ. ಹಿನ್ನೆಲೆಯನ್ನು ವಿವರಿಸಿದೆ. ತಳಿಯ ಸೋಲನ್ನು ಕಣ್ಣಾರೆ ಕಂಡ ಅನೇಕರು ಅಲ್ಲಿ ಉಪಸ್ಥಿತರಿದ್ದರು. ಯಾರೂ ತುಟಿಪಿಟಿಕ್ ಅನ್ನಲಿಲ್ಲ. "ಇದಕ್ಕೆ ಏನು ಹೇಳಬೇಕು? ಸುಳ್ಳೆ? ಮೋಸವೆ? ವಂಚನೆಯೇ? ಇದಕ್ಕೆ ಯಾವ ಕಾನೂನಿನಲ್ಲಿಯೂ ಶಿಕ್ಷೆ ಇಲ್ಲವೆ " ಎಂದು ಪ್ರಶ್ನಿಸಿ "ವಿಜ್ಞಾನಿಗಳಲ್ಲಿ ವಾಸ್ತವ ಸ್ಥಿತಿಯನ್ನರಿತುಕೊಳ್ಳುವ ವಿಶಾಲ ಮನೋಭಾವ ಮತ್ತು ಪ್ರಾಮಾಣಿಕತೆ ಇರಬೇಕು"ಎಂದು ಇಂಗ್ಲೀಷ್‌ನಲ್ಲಿ ಹೇಳಿ ನನ್ನ ಮಾತು ಮುಗಿಸಿ ಕುಳಿತಾಗ ಜುಬ್ಬ ಧರಿಸಿ, ಅಡ್ಡ ಪಂಚೆಯ ಅವತಾರದಲ್ಲಿದ್ದ ನನ್ನನ್ನು ಮಿಕಿ ಮಿಕಿ ನೋಡುತ್ತಿದ್ದರು ಶ್ರೀ ಎಸ್. ಬಿ. ಚೌವ್ಹಾಣರು.

ನಾನು ಪ್ರವಾಸ ಮಾಡುವ ಕಾಲದಲ್ಲಿ ಸಂಘ-ಸಂಸ್ಥೆಗಳಿಗೆ ಭೇಟಿ ಮಾಡಿದಾಗ ಸಮಾರಂಭಗಳಲ್ಲಿ ಭಾಗವಹಿಸುವಂತಹ ಸಂದರ್ಭದಲ್ಲಿ ಮೂಡಿಬಂದ ಸಮಸ್ಯೆಗಳು ಹಲವಾರು. ಈ ವಿಷಯದಲ್ಲಿ ಪರಿಣಿತನೆಂದೇ ತಿಳಿದು ಹೆಮ್ಮೆ ಪಡುತ್ತಿದ್ದ ನನಗೂ ಈ

ಸಮಸ್ಯೆಗಳ ಜಟಿಲತೆ ಬಿಡಿಸಲಾಗದಷ್ಟು ಕಷ್ಟವಾಗಿ ಕಾಣುತ್ತಿದ್ದುವು. ಈಗಾಗಲೇ ನಾನು ತಿಳಿಸಿರುವಂತೆ ಅತಿ ಮುಖ್ಯವಾಗಿ ಬರುತ್ತಿದ್ದ ಪ್ರಶ್ನೆ ಎಂದರೆ ರೇಷ್ಮೆ ಹುಳುಗಳು ಇನ್ನೇನು ಗೂಡು ಕಟ್ಟುವ ಹಂತದಲ್ಲಿ ಹಾಳಾಗುವುದೇಕೆ? ಬೆಳೆಗಳ ಇಳುವರಿಯಲ್ಲಿ ಬಹಳಷ್ಟು ಅಂತರವೇಕೆ? ಕೆಲವು ಪ್ರಗತಿಶಾಲಿ ರೇಷ್ಮೆ ವ್ಯವಸಾಯಗಾರರು ಮತ್ತು ಹೊಸ ಪ್ರದೇಶಗಳಲ್ಲಿನ ರೈತರ ಇಳುವರಿ ಸರಾಸರಿ ೧೦೦ ಮೊಟ್ಟೆಗೆ ೫೦ ಕೆ. ಜಿ. ಗೂಡುಗಳಾಗಿ ಮತ್ತು ಗರಿಷ್ಠ ಇಳುವರಿ ೭೦ ಕೆ.ಜಿ. ವರೆಗೂ ತಲುಪುತ್ತಿತ್ತು. ಆದರೆ ಬಹುತೇಕ ರೇಷ್ಮೆ ಗೂಡಿನ ಇಳುವರಿ ೨೫ ರಿಂದ ೩೦ ಕೆ.ಜಿ. ಗಳವರೆಗೆ ಇರುತ್ತಿತ್ತು. ಈ ವಿಭಿನ್ನತೆಗೆ ಸಂಶೋಧನಾಲಯದವರು ಮತ್ತು ಇಲಾಖೆಯವರು  ಕೊಡುತ್ತಿದ್ದ ಕಾರಣಗಳು ಬಹುಶಃ ಸರಿಯಿದ್ದರೂ ನನಗೆ ಸಮರ್ಪಕವಾಗಿ ಕಾಣುತ್ತಿರಲಿಲ್ಲ. ಕೆಲವು ಋತುಗಳಲ್ಲಿ ಮತ್ತು ಸಂದರ್ಭಗಳಲ್ಲಿ ಬೆಳೆಗಳು ಸಂಪೂರ್ಣವಾಗಿ ಹಾಳಾಗಿ ಉತ್ಪಾದನೆ ಕುಸಿದು ರೇಷ್ಮೆಯ ಬೆಲೆ ಗಗನಕ್ಕೆ ಏರಿದ ಸಂದರ್ಭಗಳೂ ಉಂಟು. ವಿಶ್ವಬ್ಯಾಂಕ್ ನೆರವಿನ ಯೋಜನೆಯ ಪ್ರಕಾರ ಜಪಾನಿಗೆ ತರಬೇತಿಗೆಂದು ಅನೇಕ ಜನ ಇಲಾಖೆ ಅಧಿಕಾರಿಗಳು ಹೋಗಿ ಬಂದಿದ್ದರು. ಅಲ್ಲಿನ ರೇಷ್ಮೆ ವ್ಯವಸಾಯದ ಬಗ್ಗೆ ಅವರ ಅನಿಸಿಕೆಗಳು ನನ್ನಲ್ಲಿ ಆಸಕ್ತಿ ಹುಟ್ಟಿಸಿದುವು. ಅಲ್ಲಿನ ಸರಾಸರಿ ಇಳುವರಿ ೧೦೦ ಮೊಟ್ಟೆಗೆ ೬೦ ಕೆ.ಜಿ.ಗಳು ಬೆಳೆಗಳು. ಕೆಡುವುದೂ ಕಡಿಮೆ ಮತ್ತು ಗೂಡಿನ ಉತ್ಪತ್ತಿಯ ಅಂದಾಜನ್ನು ಕರಾರುವಕ್ಕಾಗಿ ಮಾಡಲು ಸಾಧ್ಯತೆ ಇತ್ತು. ಇವೆಲ್ಲಕ್ಕಿಂತ ಹೆಚ್ಚಾಗಿ ಇಳುವರಿಯ ಮಟ್ಟ ಒಬ್ಬರಿಂದ ಇನ್ನೊಬ್ಬರಿಗೆ ಹೆಚ್ಚಿನ ವ್ಯತ್ಯಾಸವಿರಲಿಲ್ಲ. ಅಲ್ಲಿನ ವೈಜ್ಞಾನಿಕ ಮತ್ತು ತಾಂತ್ರಿಕ ಕೇಂದ್ರಗಳು ಬಲಿಷ್ಟವಾಗಿದ್ದು ಫಲಕಾರಿಯಾಗಿ ಕೆಲಸ ಮಾಡುತ್ತಿವೆ. ರೋಗರಹಿತ ಮೊಟ್ಟೆಗಳ ಮಿಶ್ರತಳಿಗಳು ಹೆಚ್ಚು ಇಳುವರಿ ಕೊಡುವಂತಹುವಾಗಿವೆ. ೪ ತಳಿಗಳ ಸಂಯೋಜನೆಯಿಂದ ಕೂಡಿದಂತಹವುಗಳು ಮೊಟ್ಟೆಗಳ ತಯಾರಿಕೆಯಲ್ಲಿ ಗುಣಮಟ್ಟ ಕಾಪಾಡಿಕೊಳ್ಳುತ್ತವೆ. ಹಿಪ್ಪುನೇರಳೆ ಸೊಪ್ಪು ಬೆಳೆಯುವುದರಲ್ಲಿ ಮತ್ತು ಚಾಕಿ ಹುಳು ಸಾಕುವುದರಲ್ಲಿ ಹಲವು ದಶಕಗಳ ಸಂಶೋಧನೆಯ ಫಲವಾಗಿ ನಿರ್ದಿಷ್ಟ ಹಾಗೂ ಸ್ಪಷ್ಟ ನಿಲುವಿಗೆ ಬಂದು ಉತ್ತಮ ಬೆಳೆ  ತೆಗೆಯುವುದರಲ್ಲಿ ಅವರು ಯಶಸ್ವಿಯಾಗಿದ್ದಾರೆಂದು ನನಗೆ ತಿಳಿಸಿದರು.

ನನಗೆ ತಿಳಿದಿರುವ ಪ್ರಕಾರ ನಮ್ಮ ದೇಶದಲ್ಲಿ ರೇಷ್ಮೆಯ ಬಗ್ಗೆ ಸಂಶೋಧನೆಗಳು ಪ್ರಾರಂಭವಾಗಿ ಸುಮಾರು ೩ ದಶಕಗಳು ಕಳೆದಿರಬಹುದು. ವೈಜ್ಞಾನಿಕವಾಗಿ ಹಿಪ್ಪುನೇರಳೆ ಸೊಪ್ಪಿನ ಇಳುವರಿಯನ್ನು ಅಧಿಕಗೊಳಿಸುವುದು ಮತ್ತು ಚಾಕಿ ಸಾಕಾಣಿಕೆ ಮಾಡುವುದರಲ್ಲಿ ಹೊಸ ವಿಧಾನಗಳನ್ನು ಪ್ರಚುರ ಮಾಡುವುದರಲ್ಲಿ ಸಾಕಷ್ಟು ಯಶಸ್ವಿಯನ್ನು ನಾವು ಗುರುತಿಸಬಹುದು. ಈ ಹೊಸ ವಿಧಾನಗಳು ಮುಖ್ಯವಾಗಿ ನೀರಾವರಿ ಅನುಕೂಲವುಳ್ಳ ಹಿಪ್ಪುನೇರಳೆಗೆ ಸೀಮಿತವಾಗಿರುವುದನ್ನು ಕಾಣಬಹುದು. ಈ ಹೊಸ ವಿಧಾನಗಳನ್ನು ಎಲ್ಲಾ ಪ್ರದೇಶಗಳಿಗೂ, ಎಲ್ಲಾ ರೈತರಿಗೂ ತಲುಪಿಲ್ಲ. ಅದರಲ್ಲೂ ಮಳೆ ಆಧಾರಿತ ಹಿಪ್ಪುನೇರಳೆ ತೋಟಗಳಿಗೆ ಸಲಹೆ ಮಾಡುವ ಹೊಸ ವಿಧಾನಗಳನ್ನು ರೇಷ್ಮೆ ಬೆಳೆಗಾರರು ಒಪ್ಪಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಸೂಕ್ಷ್ಮವಾಗಿ ಹೇಳುವುದಾದರೆ ಬೆಳೆಗಳು ಸಾರ್ವತ್ರಿಕವಾಗಿ ಹಾಳಾದಾಗ

ಅಥವಾ ಇಳುವರಿ ತುಂಬಾ ಕೆಳಮಟ್ಟಕ್ಕೆ ಇಳಿದಾಗ ನಿರ್ದಿಷ್ಟವಾದ ಕಾರಣಗಳನ್ನು ಹುಡುಕುವುದರಲ್ಲಿ ಇಲಾಖೆಯವರಾಗಲಿ, ಸಂಶೋಧನಾಲಯದವರಾಗಲಿ ಸಮರ್ಥರಾಗದಿದ್ದುದ್ದನ್ನು ನಾನು ಗುರುತಿಸಿದೆ. ನಮ್ಮಲ್ಲಿ ಅನೇಕ ವಿಧವಾದ ಹಿಪ್ಪುನೇರಳೆ ಗಿಡದ ತಳಿಗಳನ್ನು ಹೊಂದಿದ್ದರೂ ನಮ್ಮ ಸಂಶೋಧನಾಲಯದವರು ಹಿಪ್ಪುನೇರಳೆ ಬೆಳೆಯುವುದರಲ್ಲಿ ಮತ್ತು ಸೊಪ್ಪಿನ ಗುಣಮಟ್ಟವನ್ನು ಹೆಚ್ಚಿಸುವುದರಲ್ಲಿ ಮೂಲಭೂತ ಸಂಶೋಧನೆಯ ಅಗತ್ಯವನ್ನರಿತು ಇನ್ನೂ ಆಳವಾದ ಸಂಶೋಧನೆಯಲ್ಲಿ ತೊಡಗಬೇಕಾಗಿದೆ ಎನ್ನುವುದು ನನ್ನ ಅನಿಸಿಕೆ. ಈ ನನ್ನ ಅನಿಸಿಕೆಗೆ ಪೂರಕವಾಗಿ ಜಪಾನಿನ ಹಿಪ್ಪುನೇರಳೆಯ ವಿಜ್ಞಾನಿ ಶ್ರೀ ಯೋಶಿ ತುಸುನಾಮಿಯಾಪಿತಾ ಅವರು ೧೯೮೧ ಮತ್ತು ೧೯೮೩ರಲ್ಲಿ ಕರ್ನಾಟಕಕ್ಕೆ ಭೇಟಿ ನೀಡಿ ಕರ್ನಾಟಕದಲ್ಲಿ ಹಿಪ್ಪುನೇರಳೆ ವ್ಯವಸಾಯದ ರೀತಿಯನ್ನು ಪರಿಶೀಲಿಸಿ ಪಟ್ಟಿರುವ ಅಭಿಪ್ರಾಯ ನನ್ನ ಅನಿಸಿಕೆಗೆ ಸರಿ ಎನ್ನಿಸುತ್ತದೆ. "ಕರ್ನಾಟಕದಲ್ಲಿ ಬೈವೊಲ್ಟಿನ್ ತಳಿಯ ಬೆಳೆಯನ್ನು ಸ್ಥಿರಗೊಳಿಸಬೇಕಾದರೆ ಸದ್ಯದಲ್ಲಿರುವ ಹಿಪ್ಪುನೇರಳೆ ವ್ಯವಸಾಯ ಪದ್ಧತಿಯನ್ನು ಉತ್ತಮ ಪದ್ಧತಿಗೆ ಬದಲಾಯಿಸಬೇಕು. ಈ ಬದಲಾವಣೆ ಸೊಪ್ಪಿನ ಗುಣಮಟ್ಟವನ್ನು ಹೆಚ್ಚಿಸುವುದೇ ಪ್ರಧಾನ ಮತ್ತು ಮಹತ್ವಪೂರ್ಣ ಗುರಿಯಾಗಿರಬೇಕು". ಅವರು ತಮ್ಮ ದೀರ್ಘ ವರದಿಯಲ್ಲಿ ಮಾಡಿರುವ ಎಲ್ಲ ಅಂಶಗಳನ್ನು ನಾನು ಇಲ್ಲಿ ಪ್ರಸ್ತಾಪಿಸಲು ಇಷ್ಟಪಡುವುದಿಲ್ಲ.

ಆಸಕ್ತರು ಈ ವರದಿಗಳನ್ನು ಓದಿದರೆ ಕರ್ನಾಟಕದಲ್ಲಿ ಹಿಪ್ಪುನೇರಳೆ ಬೇಸಾಯದ ಸಂಶೋಧನೆ ಎಷ್ಟು ಹಿಂದೆ ಉಳಿದಿದೆ ಎನ್ನುವ ಸತ್ಯ ತಿಳಿಯುತ್ತದೆ. ರೇಷ್ಮೆ ಬೇಸಾಯದ ಪರಿಸ್ಥಿತಿಯನ್ನು ಬರೆಯುತ್ತಾ "ಕರ್ನಾಟಕದ ಹಿಪ್ಪುನೇರಳೆ ಬೇಸಾಯ ಇನ್ನೂ ಪ್ರಾಚೀನ (ಪ್ರಿಮೀಟೀವ್) ಸ್ಥಿತಿಯಲ್ಲಿದೆ" ಎನ್ನುವುದನ್ನು ಗಮನಿಸಿದಾಗ ಉದ್ಯಮದ ಪ್ರಗತಿಯ ಆಸೆ ಹೊತ್ತು ಅದನ್ನು ನೆರವೇರಿಸಿಕೊಳ್ಳುವ ಅಧಿಕಾರದಲ್ಲಿಯೂ ಕುಳಿತಿದ್ದ ನನಗೆ ನಾಚಿಕೆಯ ಜೊತೆಗೆ ನೋವೂ ಆಯಿತು. ಈ ಅಭಿಪ್ರಾಯವನ್ನು ಪಟ್ಟ ಈ ತಜ್ಞರು ಕರ್ನಾಟಕ ರಾಜ್ಯ ರೇಷ್ಮೆ ಅಭಿವೃದ್ಧಿ ಸಂಸ್ಥೆಯಲ್ಲಿ ಕೆಲಕಾಲ ಇದ್ದು, ಕೆಲವು ಪ್ರಯೋಗಗಳನ್ನು ಪ್ರಾರಂಭಿಸಿ, ಮುಂದುವರಿಸಿಕೊಂಡು ಹೋಗುವಂತೆ ತಿಳಿಸಿ, ಕೆಲವು ಸಲಹೆಗಳನ್ನು ಕೂಡ ತಮ್ಮ ವರದಿಯಲ್ಲಿ ಕೊಟ್ಟಿರುವುದನ್ನು ದೀರ್ಘವಾಗಿ ನಾನು ಪರಿಶೀಲಿಸಿದೆ. ಬೆಳೆಗಾರರಿಗೆ, ಸಂಶೋಧಕರಿಗೆ, ಆಡಳಿತಗಾರರಿಗೆ ಯಕ್ಷ ಪ್ರಶ್ನೆಯಾಗಿರುವ ಬೆಳೆಗಳ ಆಗು-ಹೋಗುಗಳಿಗೆ ಹಿಪ್ಪುನೇರಳೆ ಸೊಪ್ಪಿನ ಪ್ರಭಾವ ಎಷ್ಟೆಂದು ಕಂಡುಹಿಡಿಯಲು ಜಪಾನಿನ ತಜ್ಞರು ೨-೩ ದಶಕಗಳ ಪ್ರಯೋಗ ಮತ್ತು ಪರಿಶ್ರಮದ ಒಂದು ನಿರ್ಣಯಕ್ಕೆ ಬಂದಿದ್ದಾರೆ. ಮೈಸೂರಿನ ನಮ್ಮ ಸಂಶೋಧನಾಲಯದಲ್ಲಿ ಈ ದಿಸೆಯಲ್ಲಿ ಯಾವುದೇ ಪ್ರಯತ್ನ ನಡೆದಿಲ್ಲವೆಂದು ನಾನು ಈ ಸಂಶೋಧನಾ ಕೇಂದ್ರಕ್ಕೆ ಭೇಟಿ ಕೊಟ್ಟಾಗ ನಡೆದ ಘಟನೆಯೊಂದನ್ನು ಈ ಹಿಂದೆಯೇ ತಿಳಿಸಿದ್ದೇನೆ.

ಜಪಾನ್ ತಜ್ಞರ ಪ್ರಕಾರ ಬೆಳೆಯ ಆಗು-ಹೋಗುಗಳಿಗೆ ಹಿಪ್ಪುನೇರಳೆ ಸೊಪ್ಪು ಶೇಕಡಾ ೩೮.೨, ವಾತಾವರಣ ಶೇಕಡಾ ೩೭. ಹುಳು ಸಾಕಾಣಿಕೆ ಶೇಕಡಾ ೯.೩. ರೇಷ್ಮೆ ೪.೨ ಮತ್ತು

ರೇಷ್ಮೆ ಮೊಟ್ಟೆ ಸಲಕರಣೆಗಳು ಹಾಗು ಹುಳು ಸಾಕುವ ಮನೆ ಇತ್ಯಾದಿಗಳು ಕಾರಣವೆಂದು ತಿಳಿದುಬರುತ್ತದೆ. ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ಅಂಶ ಹಿಪ್ಪುನೇರಳೆ ಮತ್ತು ವಾತಾವರಣ. ಇವೆರಡರ ಪ್ರಭಾವವೇ ಸುಮಾರು ೭೫ ಭಾಗ ಇದೆ ಎನ್ನುವುದು ಈ ವಿಷಯಗಳಿಗೆ ನಾವು ಎಷ್ಟು ಅಗತ್ಯತೆ ಕೊಡಬೇಕಾಗಿದೆ ಎನ್ನುವುದನ್ನು ತಿಳಿಸುತ್ತದೆ. ಈ ಆದ್ಯತೆಯನ್ನು ಗುರುತಿಸುವುದರಲ್ಲಿ ನಮ್ಮ ವಿಫಲತೆಯೇ ನಮ್ಮ ಬೈವೊಲ್ಟಿನ್ ಬೆಳೆಯ ಸೋಲಿಗೆ ಕಾರಣವಲ್ಲವೆ?

ಜಪಾನಿನ ಆಧುನಿಕ ವ್ಯವಸಾಯದ ಪಿತಾಮಹ ಡಾ. ಓಮುರ್ ಅವರ ರೇಷ್ಮೆ ಉದ್ಯಮದ ಬಗೆಗಿನ ಅನಿಸಿಕೆಗಳನ್ನು ನನ್ನ ಪ್ರವಾಸ ಕಥನದಲ್ಲಿ ದೀರ್ಘವಾಗಿ ಪ್ರಸ್ತಾಪಿಸಿದ್ದೇನೆ. ಆದರೆ ಕರ್ನಾಟಕ ರೇಷ್ಮೆ ಬೆಳೆಯ ಬಗ್ಗೆ ಅವರ ನಿಲುವನ್ನು ಮತ್ತು ಸಲಹೆಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಪ್ರಸ್ತಾಪ ಮಾಡಲು ಬಯಸುತ್ತೇನೆ. ಅವರ ಪ್ರಕಾರ "ಯಾವುದೇ ತಳಿಯ ಬೆಳೆ ಸುಲಭವಾಗಿ ಸಾಕಲು ಅನುಕೂಲವಾಗಿರಬೇಕು, ವಿಶ್ವಾಸನೀಯ ಬೆಳೆ ನೀಡುವ ಮೊಟ್ಟೆಗಳನ್ನು ಬೆಳೆಗಾರರಿಗೆ ಸರಬರಾಜು ಮಾಡಬೇಕು. ಈಗ ಇರುವ ತಳಿಗಳಲ್ಲಿ ಗುಣಗಳುಳ್ಳ ತಳಿಗಳನ್ನು ಗುರುತಿಸಿ ಮುಂದುವರಿಸಬೇಕು. ಇಲ್ಲದಿದ್ದಲ್ಲಿ ಹೊಸ ತಳಿಗಳನ್ನು ಕಂಡುಹಿಡಿಯಬೇಕು. ಹೊಸ ತಳಿಗಳನ್ನು ಸಂಸ್ಕರಿಸುವಾಗ ನಮ್ಮ ಮುಖ್ಯ ಗುರಿ ಈ ತಳಿಗಳು ೧೦೦ಕ್ಕೆ ೮೦ ಭಾಗ ಗೂಡು ಕಟ್ಟುವಂತಹವುಗಳಾಗಿರಬೇಕು. ಈ ಗೂಡಿನಲ್ಲಿ ೯೦ ಭಾಗ ಪ್ಯೂಪಾ ಆಗಬೇಕು, ರೇಷ್ಮೆ ಸ್ವಚ್ಛತೆ ಶೇಕಡಾ ೯೦ ಭಾಗ ಇರಬೇಕು. ಇದಲ್ಲದೆ ಒಂದು ಹೆಣ್ಣು ಚಿಟ್ಟೆ ಸುಮಾರು ೫೦೦ ತತ್ತಿಗಳನ್ನಾದರೂ ಇಡುವ ಸಾಮರ್ಥ್ಯ ಇರಬೇಕು. ಈ ತತ್ತಿಗಳಲ್ಲಿ ೯೫ ಭಾಗ ಚಾಕಿ ಆಗುವಂತಿರಬೇಕು. ಇಲ್ಲಿ ಪ್ರಮುಖವಾಗಿ ನಾವು ಗುರುತಿಸಬೇಕಾದ ಮತ್ತೊಂದು ವಿಷಯ ಗೂಡಿನಲ್ಲಿರುವ ರೇಷ್ಮೆಯ ಇಳುವರಿ ಶೇಕಡಾ ೧೨ ರಿಂದ ೧೪ರವರೆಗೆ ಇದ್ದರೆ ಸಾಕು. ಏಕೆಂದರೆ ಅತಿ ಹೆಚ್ಚು ರೇಷ್ಮೆ ಕೊಡುವ ತಳಿಗಳು ಹೆಚ್ಚು ಹಿಪ್ಪುನೇರಳೆ ಸೊಪ್ಪನ್ನು ತಿನ್ನುತ್ತವೆ ಮತ್ತು ಈ ತಳಿಗಳಲ್ಲಿ ಹುಳು ಸಾಯುವುದು ಹೆಚ್ಚು " ಎನ್ನುವ ಈ ಅಭಿಪ್ರಾಯವನ್ನು ಇತ್ತೀಚೆಗೆ ಎಲ್ಲರೂ ಒಪ್ಪುತ್ತಿದ್ದಾರೆ.

ಜಪಾನಿನ ಪರಿಣತರು ನೀಡಿದ ವರದಿಗಳನ್ನು, ಕೊಟ್ಟ ಅಭಿಪ್ರಾಯಗಳನ್ನು ನೋಡಿದಾಗ ಅವರು ಹೇಳಿರುವ ಅಥವಾ ಶಿಫಾರಸು ಮಾಡಿರುವ ಎಲ್ಲಾ ಅಂಶಗಳು ನಮ್ಮ ಪರಿಸರಕ್ಕೆ ಮತ್ತು ಸ್ಥಿತಿಗತಿಗಳಿಗೆ ಹೊಂದುವುದಿಲ್ಲ ಎನ್ನುವುದನ್ನು ತಿಳಿದುಕೊಳ್ಳಲು ನನಗೆ ಕಷ್ಟವಾಗಲಿಲ್ಲ. ನಮ್ಮ ಸಂಶೋಧಕರು ಸಾಕಷ್ಟು ವಿಷಯಗಳ ಬಗ್ಗೆ ನಮ್ಮ ಪರಿಸರಕ್ಕನುಗುಣವಾಗಿ ಸಂಶೋಧನೆ ಮಾಡಿದ್ದಾರೆ. ಆದ್ದರಿಂದ ಜಪಾನ್ ವಿಜ್ಞಾನಿಗಳು ಹೇಳುವುದೆಲ್ಲ ಸರಿಯೆಂದು ಹೇಳಲು ನಾನು ಬಯಸುವುದಿಲ್ಲ.

ಈ ರಾಷ್ಟ್ರದ ಕೃಷಿ ಉತ್ಪನ್ನಗಳಲ್ಲಿ ಸ್ವಾಲಂಬನೆ ಸಾಧಿಸಲು ನಮ್ಮ ಕೃಷಿ ವಿಜ್ಞಾನಿಗಳ ಸಂಶೋಧನಾ ಸಾಮರ್ಥ್ಯವೇ ಪ್ರಮುಖ ಕಾರಣವೆಂದು ನಿಚ್ಚಳವಾಗಿ ನಂಬಿರುವವನು ನಾನು. ಆದರೆ ನಮ್ಮ ಕೃಷಿ ತಜ್ಞರು ಮತ್ತು ವಿಜ್ಞಾನಿಗಳಿಗೆ ಮುಂದುವರೆದ ದೇಶಗಳ ವಿಜ್ಞಾನಿಗಳ ಅನುಭವ ಮತ್ತು ತಂತ್ರಜ್ಞಾನದ ವಿಷಯದಲ್ಲಿ ತೆರೆದ ಮನಸ್ಸಿಲ್ಲವೇನೋ ಅನಿಸುತ್ತದೆ.

ಅವರಲ್ಲಿಯೂ ರೇಷ್ಮೆಗೆ ಸಂಬಂಧಿಸಿದ ಸಂಶೋಧನೆಗಳಲ್ಲಿ ಇರುವ ಸದವಕಾಶವನ್ನು ತಮ್ಮ ತಿಳುವಳಿಕೆಯನ್ನು ಹೆಚ್ಚಿಸಿಕೊಳ್ಳಲು ಉಪಯೋಗಿಸಿಕೊಳ್ಳುತ್ತಿಲ್ಲ. ನನ್ನ ಈ ನೋವನ್ನು ತಲಘಟ್ಟಪುರದ ನಮ್ಮ ಕಿರಿಯ ಸಂಶೋಧಕರಲ್ಲಿ ನಾನು ಹಂಚಿಕೊಂಡಿದ್ದೇನೆ. ರೇಷ್ಮೆಯ ಉದ್ಯಮಕ್ಕೆ ವಿಶ್ವಬ್ಯಾಂಕ್ ನೆರವಿನ ಅಡಿಯಲ್ಲಿ ನಿಯೋಜಿಸಿದ ಸಂಶೋಧನಾ ಕಾರ್ಯಕ್ರಮಗಳ ಪೂರ್ಣ ಲಾಭವನ್ನು ನಮ್ಮವರು ಪಡೆಯಲಿಲ್ಲವೇನೋ ಎಂಬ ಅನುಮಾನ ಮತ್ತು ಗೊಂದಲಗಳು ನನ್ನ ಮನಸ್ಸಿನಲ್ಲಿ ಉಳಿದುಕೊಂಡಿವೆ. ನನ್ನ ಈ ಭಾವನೆಗೆ ರೇಷ್ಮೆ ಉದ್ಯಮದಲ್ಲಿ ನನಗಿರುವ ಆಸಕ್ತಿ ಮತ್ತು ಉದ್ವೇಗಗಳೇ ಕಾರಣ ಎನ್ನುವುದನ್ನು ಸ್ಪಷ್ಟಪಡಿಸಲು ಇಚ್ಛಿಸುತ್ತೇನೆ.

ಜಪಾನಿನ ನನ್ನ ಪ್ರವಾಸ ಸಮಯದಲ್ಲಿ ನನ್ನನ್ನು ಒಬ್ಬ ರೇಷ್ಮೆ ಪರಿಣತನೆಂದೇ ಗುರುತಿಸಿದರು. ಇಲಾಖೆಯ ಮತ್ತು ಸರ್ಕಾರಿ ಅಧಿಕಾರಿಗಳು ಯಾವುದೇ ತಾಂತ್ರಿಕ ವಿಷಯದಲ್ಲಿ ವಿಭಿನ್ನವಾಗಿ ನಡೆದುಕೊಳ್ಳುತ್ತಿರಲಿಲ್ಲ. ಕೋಟ್ಯಾಂತರ ರೂಪಾಯಿಗಳ ವೆಚ್ಚದಲ್ಲಿ ವಿಶ್ವಬ್ಯಾಂಕ್ ನೆರವಿನ ಯೋಜನೆಯಿಂದಾಗಿ ಕಟ್ಟಡಗಳು, ಉಪಕರಣಗಳು ಹೀಗೆ ಎಲ್ಲಾ ಸವಲತ್ತುಗಳು ನಮ್ಮವಾಗಿವೆ. ನಮ್ಮ ಅಧಿಕಾರಿಗಳು ಮತ್ತು ಸಂಶೋಧಕರು ಹೊರದೇಶದ ತಂತ್ರಜ್ಞಾನವನ್ನು ತಿಳಿದುಕೊಳ್ಳುವ ಏರ್ಪಾಡಾಗಿದೆ. ರಾಜ್ಯದ ಬೆಳೆಗಾರನಲ್ಲಿ ಆಮೂಲಾಗ್ರ ಬದಲಾವಣೆಯಾಗಿದೆ. ಇಷ್ಟಾದರೂ ಎಲ್ಲೋ, ಏನೋ, ಕೊರತೆ ಇರುವುದು ನನ್ನನ್ನು ಕಾಡುತ್ತಿತ್ತು.

ಉತ್ತಮ ಬೆಳೆ ಮತ್ತು ಉತ್ತಮ ಬೆಲೆ ನನ್ನ ಮುಖ್ಯ ಗುರಿಯಾಗಿತ್ತು. ಉತ್ತಮ ಬೆಲೆಗೆ ಗುಣಮಟ್ಟದ ರೋಗರಹಿತ ಮೊಟ್ಟೆಗಳು ಬಹು ಮುಖ್ಯ ಎನ್ನುವುದನ್ನು ಈಗಾಗಲೇ ಅನೇಕ ಕಡೆ ಪ್ರಸ್ತಾಪಿಸಿದ್ದೇನೆ. ಈ ಮೊಟ್ಟೆಗಳನ್ನು ತಯಾರು ಮಾಡುವ ಬಿತ್ತನೆ ಕೋಠಿಗಳನ್ನು ರೈತರ ಪಾಲಿನ ದೇವಾಲಯಗಳು ಎಂದು ನಂಬಿದವನು ನಾನು. ಈ ಹಿನ್ನೆಲೆಯಲ್ಲಿ ರೇಷ್ಮೆ ಬಿತ್ತನೆ ಕೋಠಿಗಳ ಕಾರ್ಯವಿಧಾನವನ್ನು ಪರಿಶೀಲಿಸಿ ಇವುಗಳನ್ನು ಉತ್ತಮಗೊಳಿಸಲು ನಿರ್ದಿಷ್ಟವಾದ ಕಾರ್ಯಕ್ರಮಗಳನ್ನು ರೂಪಿಸಿದೆ. ಈ ಬಿತ್ತನೆ ಕೋಠಿಗಳಲ್ಲಿ ಯಾವ ಸಮಯದಲ್ಲಿ ಯಾವ ನೌಕರರು ಕೆಲಸದಲ್ಲಿ ನಿರತರಾಗಿರುತ್ತಾರೆ ಎನ್ನುವ ಒಂದು ಪಟ್ಟಿಯನ್ನು ಪ್ರತಿನಿತ್ಯ ಕೋಠಿಯ ಸೂಚನಾ ಫಲಕದಲ್ಲಿ ಪ್ರದರ್ಶಿಸುವಂತೆ ಆಜ್ಞೆ ಹೊರಡಿಸಿದೆವು. ೧೦೦ ಗೂಡುಗಳಿಗೆ ಬರುತ್ತಿದ್ದ ಮೊಟ್ಟೆಗಳನ್ನು ಪರಿಶೀಲಿಸಿದಾಗ ಸುಮಾರು ಶೇಕಡಾ ೧೮ ರಿಂದ ೨೦ ಭಾಗ ಮಾತ್ರ ಫಲಪ್ರದ ಆಗಿತ್ತು.

ಖಾಸಗಿ ಮೊಟ್ಟೆ ತಯಾರು ಮಾಡುವ ಬಿತ್ತನೆ ಕೋಠಿಗಳಲ್ಲಿ ಈ ಪ್ರಮಾಣ ಸುಮಾರು ೩೦ ರಿಂದ ೩೫ರವರೆಗೆ ಇದ್ದುದು ನನಗೆ ತಿಳಿದಿತ್ತು. ಈ ಅಂತರವೇಕೆ? ಉತ್ತಮ ಬಿತ್ತನೆ ಗೂಡುಗಳನ್ನು ಸರ್ಕಾರಿ ಕೋಠಿಗಳಿಗೆ ಕೊಡುತ್ತಾರೆ. ಕಳಪೆ ಗೂಡುಗಳನ್ನು ನಮಗೆ ಕೊಡುತ್ತಾರೆ ಎಂದು ಹೇಳುವ ಎಲ್. ಎಸ್. ಪಿ. ಗಳ ದೂರಿನ ಹಿನ್ನೆಲೆಯಲ್ಲಿ ಈ ಅಂತರಕ್ಕೆ ಸಮರ್ಪಕ ಕಾರಣ ತಿಳಿಯುತ್ತಿರಲಿಲ್ಲ. ಪ್ರತಿ ತಿಂಗಳು ಎಲ್ಲಾ ಬಿತ್ತನೆ ಕೋಠಿಗಳ ಕಾರ್ಯವೈಖರಿ ಹಾಗೂ ಅಭಿವೃದ್ಧಿ ಬಗ್ಗೆ ಹಿರಿಯ ಅಧಿಕಾರಿಗಳ ಸಮ್ಮುಖದಲ್ಲಿ ನಾನೇ ಖುದ್ದು ಪರಿಶೀಲಿಸುವ

ವ್ಯವಸ್ಥೆ ಮಾಡಿದೆ. ಎಷ್ಟೇ ಸಮಯವಾದರೂ ಎಲ್ಲಾ ಬಿತ್ತನೆ ಕೋಠಿಗಳಿಗೆ ಭೇಟಿ ನೀಡಿ ಈ ಕೋಠಿಗಳು ಕೆಲಸ ಮಾಡುವ ವೈಖರಿಯನ್ನು ತಿಳಿಯುವ ಪ್ರಯತ್ನ ಮಾಡಿದೆ. ಇಂತಹ ಒಂದು ಭೇಟಿಯ ಸಮಯದಲ್ಲಿ ಚಿಕ್ಕಬಳ್ಳಾಪುರ ಬಿತ್ತನೆ ಕೋಠಿಯನ್ನು ಪರಿಶೀಲಿಸಿದಾಗ ಬೆಚ್ಚಿ ಬೀಳುವ ಪರಿಸ್ಥಿತಿ ಮನವರಿಕೆಯಾಯಿತು. ಅಲ್ಲಿ ಕೆಲಸ ಮಾಡುತ್ತಿದ್ದ ಅಧಿಕಾರಿಗೆ ಯಾವ ಸರ್ಕಾರಿ ಸುತ್ತೋಲೆಗಳ ಅರಿವೂ ಇರಲಿಲ್ಲ. ಅಲ್ಲಿಯ ಮೊಟ್ಟೆಯ ಇಳುವರಿ ಕನಿಷ್ಠ ಶೇಕಡಾ ೫ ಮತ್ತು ಗರಿಷ್ಠ ೮ ಆಗಿತ್ತು. ಅಲ್ಲಿ ಕುಳಿತು ಅದೇ ಲಾಟಿನ ಗೂಡಿನಿಂದ ಮೂಗೂರು ಬಿತ್ತನೆ ಕೋಠಿಯಲ್ಲಿ ಶೇಕಡಾ ೨೭ ಮೊಟ್ಟೆ ಇಳುವರಿ ಬಂದಿರುವುದನ್ನು ತಿಳಿದುಕೊಂಡೆ. ಒಂದೇ ಗುಣಮಟ್ಟದ ಗೂಡಿನಲ್ಲಿ ಬರುವ ರೇಷ್ಮೆ ಮೊಟ್ಟೆ ಇಳುವರಿಯಲ್ಲಿ ಇಷ್ಟೊಂದು ಅಂತರವೇಕೆ? ಇದನ್ನೆಲ್ಲ ಪರಿಶೀಲಿಸಿ ನಿರ್ದಿಷ್ಟ ಅವಧಿಯೊಳಗಾಗಿ ಮೊಟ್ಟೆಯ ಇಳುವರಿಯನ್ನು ಶೇಕಡಾ ೩೫ಕ್ಕೆ ಏರಿಸುವುದು, ಬಿತ್ತನೆ ಕೋಠಿ ಅಧಿಕಾರಿಗಳ ಜವಾಬ್ದಾರಿಯೆಂದು ಕಟ್ಟುನಿಟ್ಟಾಗಿ ಎಚ್ಚರಿಸಿದೆ. ನಿಮಗೆ ಆಶ್ಚರ್ಯವಾಗಬಹುದು. ಶೇಕಡಾ ೧೮-೨೦ ಮೊಟ್ಟೆಯ ಇಳುವರಿ ಸುಮಾರು ಎಲ್ಲಾ ಬಿತ್ತನೆ ಕೋಠಿಗಳಲ್ಲಿಯೂ ಶೇಕಡಾ ೩೦ ರಿಂದ ೩೫ರವರೆಗೆ ಹೆಚ್ಚಾಯಿತು. ರಾಜ್ಯದ ಎಲ್ಲಾ ಬಿತ್ತನೆ ಕೋಠಿಯ ಅಧಿಕಾರಿಗಳನ್ನು ಕರೆಸಿ ಮೆಚ್ಚುಗೆಯ ಮಾತುಗಳನ್ನಾಡಿ ಬೆಂಗಳೂರಿನ ವುಡ್‌ಲ್ಯಾಂಡ್ ಹೋಟೆಲ್‌ನಲ್ಲಿ ಸರ್ಕಾರಿ ವೆಚ್ಚದಲ್ಲಿ ಎಲ್ಲರಿಗೂ ಊಟ ಹಾಕಿಸಿ ಕಳುಹಿಸಿದೆ.

ಎಷ್ಟೇ ಕಷ್ಟವಾದರೂ, ಒತ್ತಡಗಳು ಬಂದರೂ ಆಡಳಿತದಲ್ಲಿ ನಿಷ್ಠುರತೆ ಮತ್ತು ಬಿಗಿ ತರಲು ನಿರ್ಧರಿಸಿದೆ. ಕೋಲಾರ ಜಿಲ್ಲೆಯ ಬಿತ್ತನೆ ಕೋಠಿಯ ಅಧಿಕಾರಿಯೊಬ್ಬರು ಸುಮಾರು ೬೦,೦೦೦ ರೂಪಾಯಿ ಸರ್ಕಾರಿ ಹಣವನ್ನು ದುರುಪಯೋಗ ಮಾಡಿಕೊಂಡಿರುವ ಕಡತ ನನ್ನ ಮುಂದೆ ಬಂದಾಗ ವಿಚಾರಣೆಯ ಕಾಲದಲ್ಲಿ ಈತನನ್ನು ಜಿಲ್ಲೆಯಿಂದ ಹೊರಗೆ ವರ್ಗಾವಣೆ ಮಾಡುವ ಆಜ್ಞೆ ಮಾಡಿದೆ. ಇದನ್ನು ರದ್ದುಗೊಳಿಸಲು ಬಂದ ನನ್ನ ಹುಟ್ಟೂರಿನ ಪಕ್ಕದವನೇ ಆದ ಈ ನೌಕರನಿಗೆ ಮತ್ತು ಇವನ ಸಂಬಂಧಿಕನಿಗೆ ಛೀಮಾರಿ ಮಾಡಿ ಕಳುಹಿಸಿದೆ. ನನಗೆ ದೂರದ ಸಂಬಂಧಿಯೂ ಆಗಬೇಕಾದ ಈತ ಈ ಘಟನೆಯ ನಂತರ ನನ್ನ ೧೯೮೫ರ ಚುನಾವಣೆಯಲ್ಲಿ ಸುಮಾರು ೩೦ ಸಾವಿರ ರೂಪಾಯಿ ಹಣ ಖರ್ಚು ಮಾಡಿ ನನ್ನನ್ನು ಚುನಾವಣೆಯಲ್ಲಿ ಸೋಲಿಸುವ ಪ್ರಯತ್ನದಲ್ಲಿ ನೆರವಾದನೆಂದು ನನಗೆ ಆಮೇಲೆ ತಿಳಿದುಬಂದಿತು.

ಯಾರೇ ಒಬ್ಬ ಸಚಿವನಿಗೆ ಅತ್ಯಂತ ಕಷ್ಟದ ಕೆಲಸವೆಂದರೆ ವರ್ಗಾವರ್ಗೀ ಕೆಲಸ. ಮುಖ್ಯಮಂತ್ರಿಗಳು ಸೂಚಿಸಿದ ಮಾರ್ಗಸೂಚಿಯನ್ನು ಅನುಸರಿಸಿ ನಿರ್ದಿಷ್ಟ ದಿನಾಂಕದೊಳಗಾಗಿ ಸಾರ್ವಜನಿಕ ವರ್ಗಾವರ್ಗಿಗಳನ್ನು ಮಾಡಿ ಮುಗಿಸಿದೆ. ಮುಖ್ಯಮಂತ್ರಿಗಳಿಂದ, ಸಚಿವರುಗಳಿಂದ, ಶಾಸಕರುಗಳಿಂದ ಬಂದ ಯಾವುದೇ ಒತ್ತಡಕ್ಕೆ ಮಣಿಯದೆ ಒಂದೇ ಒಂದು ವರ್ಗಾವಣೆಯನ್ನು ಬದಲಾವಣೆ ಮಾಡಿರಲಿಲ್ಲ. ಬಹುಶಃ ಕರ್ನಾಟಕ ರಾಜ್ಯದ ಆಡಳಿತ ಚರಿತ್ರೆಯಲ್ಲಿ ಸಾರ್ವಜನಿಕ ವರ್ಗಾವರ್ಗಿಯಲ್ಲಿ ಬದಲಾವಣೆ (Modification) ಆಗದೆ ಇರುವ ಮತ್ತೊಂದು ಉದಾಹರಣೆ ಇರಲಾರದೆಂದು ನನ್ನ ಭಾವನೆ.

ಇದನ್ನು ನೀವು ಹೇಗೆ ನಿಭಾಯಿಸುತ್ತೀರಿ ಎಂದು ಮುಖ್ಯಮಂತ್ರಿಗಳು ಆಶ್ಚರ್ಯಪಟ್ಟರು. ಯಾವ ಶಾಸಕರು ಇದಕ್ಕಾಗಿ ನನ್ನನ್ನು ಆಪಾದಿಸಲಿಲ್ಲ.

ಇದೇ ರೀತಿ ಬೆಂಗಳೂರು ಜಿಲ್ಲೆ, ನೆಲಮಂಗಲ ರೇಷ್ಮೆ ಬಿತ್ತನೆ ಕೋಠಿಗೆ ನಾನು ಭೇಟಿ ಕೊಟ್ಟಾಗ ಬೇಸಿಗೆಯ ಕಾಲ ಬೈವೊಲ್ಟಿನ್ ಬಿತ್ತನೆ ಗೂಡುಗಳು ದೊರೆಯದಿರುವ ಸಮಯ. ಮೊಟ್ಟೆ ತಯಾರಿಕೆಗೆ ಪೇರು (ಹೆಣ್ಣು ಮತ್ತು ಗಂಡು ಚಿಟ್ಟೆಗಳ ಸಂಯೋಗಕ್ಕೆ ) ಮಾಡಲು ಸಿದ್ಧವಾಗಿರುವ ಸುಮಾರು ೧೫-೨೦ ಸಾವಿರ ಹೆಣ್ಣು ಚಿಟ್ಟೆಗಳು ಗೂಡಿನಿಂದ ಹೊರಬಂದು ಸಿದ್ಧವಾಗಿವೆ. ಆದರೆ ಇದೇ ಕೋಠಿಯಲ್ಲಿ ಒಂದು ಗಂಡು ಚಿಟ್ಟೆಗಳೂ ಕಾಣಲಿಲ್ಲ. ಕಡತಗಳನ್ನು ಪರಿಶೀಲಿಸಿದಾಗ ಅದರ ಹಿಂದಿನ ದಿನ ಸುಮಾರು ೫,೦೦೦ ಬೈವೊಲ್ಟಿನ್ ಗಂಡು ಚಿಟ್ಟೆಗಳನ್ನು ಬೆಂಗಳೂರಿನ ವಿಶ್ವೇಶ್ವರಯ್ಯ ಮ್ಯೂಸಿಯಂ ಎದುರುಗಡೆ ಇರುವ ಬಿತ್ತನೆ ಕೋಠಿಯಿಂದ ತಂದಿರುವ ದಾಖಲೆಯನ್ನು ಗಮನಿಸಿದೆ. ಅಲ್ಲಿಂದ ನೇರವಾಗಿ ಬೆಂಗಳೂರಿಗೆ ಬಂದು ಪರಿಶೀಲಿಸಿದಾಗ ಈ ಕೋಠಿಯಿಂದ ೫,೦೦೦ ಚಿಟ್ಟೆಗಳನ್ನು ನೆನ್ನೆ ಸಂಜೆ ಆ ಬಿತ್ತನೆ ಕೋಠಿ ಅಧಿಕಾರಿ ತೆಗೆದುಕೊಂಡು ಹೋದರೆಂದು ಇಲ್ಲಿನ ಮಹಿಳಾ ಅಧಿಕಾರಿ ದೃಢೀಕರಿಸಿದರು. ಆದರೆ ಈ ೫೦೦೦ ಚಿಟ್ಟೆಗಳು ಎಲ್ಲಿ ಹೋದವು ಎನ್ನುವುದು ಯಕ್ಷಪ್ರಶ್ನೆಯಾಯಿತು ಎಲ್ಲರಿಗೂ. ೧೬ ವರ್ಷಗಳು ವಕೀಲಿ ವೃತ್ತಿ ಮಾಡಿದ್ದ ನನಗೆ ಈ ಚಿಟ್ಟೆಗಳು ಏನಾದುವು ಎನ್ನುವ ಬಗ್ಗೆ ಊಹಿಸಲು ಕಷ್ಟವಾಗಲಿಲ್ಲ. ಬೈವೊಲ್ಟಿನ್ ಗೂಡುಗಳಿಗೆ ಬೇಡಿಕೆ ಹೆಚ್ಚಾಗಿದ್ದ ಈ ಸಮಯದಲ್ಲಿ ಎಂಜಲು ಕಾಸಿಗಾಗಿ ಗಂಡು ಚಿಟ್ಟೆಗಳನ್ನು ಮಾರಿರುವ ಈ ಅಧಿಕಾರಿಗಳ ಸಣ್ಣತನ ಮತ್ತು ಭ್ರಷ್ಟ ನಡವಳಿಕೆ ಕೋಪ ಉಂಟುಮಾಡುವುದರ ಜೊತೆಗೆ ನೋವನ್ನು ತಂದಿತು. ಹೀಗೂ ಉಂಟೆ ಎಂದು ಆಲೋಚಿಸಿ ವೈಯಕ್ತಿಕವಾಗಿ ಗೊತ್ತಿದ್ದ ಈ ಅಧಿಕಾರಿಯ ಬಗ್ಗೆ ಅಸಹ್ಯಪಟ್ಟು ಕೊಂಡೆ. ಇದಕ್ಕಾಗಿ ನಾನು ವಿಧಿಸಿದ ಶಿಕ್ಷೆ ಕೇವಲ ಚಿತ್ರದುರ್ಗ ಜಿಲ್ಲೆಗೆ ವರ್ಗ. ಮಾರನೆಯ ದಿನವೇ ಇದನ್ನು ರದ್ದುಗೊಳಿಸಲು ಸಮಾಜದ ಪ್ರತಿಷ್ಠಿತ ಧರ್ಮಾಧಿಕಾರಿಯವರಿಂದ ಆದೇಶ. ಹಿನ್ನೆಲೆಯನ್ನು ವಿವರಿಸಿ ನಮ್ಮ ಒಂದು ಭ್ರಷ್ಟ ನಡವಳಿಕೆಯಿಂದ ಎಷ್ಟು ಜನರ ಮನೆಯ ಮಕ್ಕಳಿಗೆ ಅನ್ನವಿಲ್ಲದಂತಾಗುತ್ತದೆ ಎನ್ನುವುದನ್ನು ವಿವರಿಸಿ ಅವರಿಗೆ ಸಮಾಧಾನ ಮಾಡಬೇಕಾಯಿತು. ಮತ್ತೊಂದು ದಿನ ಬೆಳಿಗ್ಗೆ ೫-೦೦ ಗಂಟೆ ಸುಮಾರಿಗೆ ತುಮಕೂರಿನ ಆಗತಾನೆ ಹೊಸದಾಗಿ ಉದ್ಘಾಟನೆಯಾಗಿದ್ದ ಸಕಲ-ಸೌಕರ್ಯಗಳಿಂದ ಸುಸಜ್ಜಿತವಾಗಿದ್ದ ರೇಷ್ಮೆ ಬಿತ್ತನೆ ಕೋಠಿಗೆ ಅನಿರೀಕ್ಷಿತ ಭೇಟಿ ಕೊಟ್ಟಾಗ ನಾನು ಈಗಾಗಲೇ ತಿಳಿಸಿರುವಂತೆ ಸವಲತ್ತು ಸಲಕರಣೆಗಳಿಗಿಂತ ಇವುಗಳನ್ನು ಉಪಯೋಗಿಸುವ ಮನುಷ್ಯ ಎಷ್ಟು ಮುಖ್ಯ ಎನ್ನುವುದು ತಿಳಿಯಿತು. ಚಿಟ್ಟೆಗಳು ಕಡೆದು ನಿಂತಿವೆ. ಅವುಗಳಿಂದ ಮೊಟ್ಟೆ ಪಡೆಯಲು ಮಾಡಬೇಕಾದ ಕನಿಷ್ಠ ವ್ಯವಸ್ಥೆಯನ್ನು ಮಾಡದಿರುವುದು ತಿಳಿದು ಸಿಟ್ಟು ನೆತ್ತಿಗೇರಿತು. ಕೋಪದ ಕೈಯಲ್ಲಿ ಬುದ್ಧಿಯನ್ನು ಕೊಟ್ಟ ನನಗೆ ಆ ಗಳಿಗೆಯಲ್ಲಿ ನಾನು ಏನು ಮಾಡುತ್ತಿದ್ದೇನೆ ಎನ್ನುವ ವಿವೇಚನೆಯಿಲ್ಲದೆ ಅಲ್ಲಿ ಕೆಲಸ ಮಾಡುತ್ತಿದ್ದ ನೌಕರನ ಕಪಾಲಕ್ಕೆ ಬಾರಿಸಿದೆ. ಈ ನನ್ನ ನಡತೆ ಯಾವ ದೃಷ್ಟಿಯಿಂದ ನೋಡಿದರೂ ಸರಿಯಲ್ಲ ಎಂದು ಆಮೇಲೆ ತುಂಬಾ ಪಶ್ಚಾತ್ತಾಪ ಪಟ್ಟೆ. ಆಮೇಲೆ ನನಗೆ

ತಿಳಿಯಿತು, ಅಲ್ಲಿಯ ಎಲ್ಲಾ ನೌಕರರೂ ಆಗತಾನೇ ನನ್ನನ್ನು ಸೋಲಿಸಿ ಲೋಕಸಭೆಯ ಸದಸ್ಯರಾಗಿದ್ದ ಶ್ರೀ ಜಿ. ಎಸ್. ಬಸವರಾಜು ಅವರಲ್ಲಿ ಹೋಗಿ ಈ ಘಟನೆಯನ್ನು ತಿಳಿಸಿ ಮುಷ್ಕರಕ್ಕೆ ಬೆಂಬಲ ಕೊಡಬೇಕೆಂದು ಕೇಳಿದರೆಂದು. ಅವರನ್ನು ಪುರಸ್ಕರಿಸಿದ ಶ್ರೀ ಬಸವರಾಜು ನನಗೆ "ನೌಕರರ ಮೇಲೆ ಕ್ರಮ ತೆಗೆದುಕೊಳ್ಳುವ ಸರ್ವ ಅಧಿಕಾರ ಇರುವಾಗ ಹೀಗೇಕೆ ಮಾಡುತ್ತೀಯ, ಇದು ಸರಿಯಲ್ಲ"ಎಂದು ದೂರವಾಣಿ ಮುಖಾಂತರ ತಿಳಿಸಿದರು. ಈ ಘಟನೆ ಆದ ಮೇಲೆ ಯಾವುದೇ ಸಂದರ್ಭದಲ್ಲೂ ಕೋಪದ ಕೈಗೆ ಬುದ್ಧಿ ಕೊಡುವ ನನ್ನ ಪ್ರವೃತ್ತಿಯನ್ನು ನಿಯಂತ್ರಿಸಿಕೊಳ್ಳುವ ಪ್ರಯತ್ನ ಮಾಡಿದೆ.

ನನ್ನ ನಿಷ್ಠುರ ನಡವಳಿಕೆ, ಕಠಿಣವಾದ ಕಾರ್ಯಕ್ರಮಗಳು ಮತ್ತು ನನ್ನನ್ನು ಅರಿತುಕೊಂಡು ಕೆಲಸ ಮಾಡಿದ ಅಧಿಕಾರಿಗಳು, ನೌಕರರ ಶ್ರಮದಿಂದಾಗಿ ಕೇವಲ ಶೇಕಡಾ ೧೮-೨೦ ಇದ್ದ ಮೊಟ್ಟೆಯ ಇಳುವರಿ ೩೦-೩೫ಕ್ಕೆ ಹೆಚ್ಚಾದುದು ಒಂದು ಸಾಧನೆ ಎಂದು ನಾನು ಇಂದಿಗೂ ಭಾವಿಸುತ್ತೇನೆ. ಇಷ್ಟು ಇಳುವರಿ ಪಡೆಯಲು ಈಗ ಏಕೆ ಸಾಧ್ಯವಾಗುತ್ತಿಲ್ಲ ಎನ್ನುವುದೇ ನನ್ನ ಕೊರಗು.

ಅಧಿಕಾರ ಸ್ಥಾನದಲ್ಲಿ ಕುಳಿತು ಕೆಲಸ ಮಾಡಿದ ಸಂದರ್ಭದಲ್ಲಿ ಕಂಡುಬಂದ ಕಟು ಸತ್ಯವೆಂದರೆ ಕೇವಲ ಕಟ್ಟಡಗಳು, ಯಂತ್ರೋಪಕರಣಗಳು, ಸಲಕರಣೆಗಳು, ಸವಲತ್ತು ಮತ್ತು ಸೌಲಭ್ಯಗಳಿಗಿಂತ ಇವುಗಳನ್ನು ಉಪಯೋಗಿಸುವ, ಇವುಗಳ ಜೊತೆ ಕೆಲಸ ಮಾಡುವ ಮನುಷ್ಯನ ಪಾತ್ರ ಅಪಾರವಾದುದು ಎನ್ನುವುದು ನನಗೆ ಮನದಟ್ಟಾಯಿತು. ಪ್ರಾಮಾಣಿಕತೆ, ಜವಾಬ್ದಾರಿಯ ಅರಿವು, ಅರ್ಪಣಾ ಮನೋಭಾವ ಮತ್ತು ಜನರ ನೋವು-ನಲಿವುಗಳಿಗೆ ಸ್ಪಂದಿಸುವ ಚೈತನ್ಯ ಉದ್ಯಮದಲ್ಲಿ ಕೆಲಸ ಮಾಡುವ ಪ್ರತಿಯೊಬ್ಬ ನೌಕರನಿಗೂ, ಮಂತ್ರಿಗೂ ಇರಬೇಕು. ಇದು ಇಲ್ಲದಿದ್ದರೆ ಯಾವುದೇ ಕ್ಷೇತ್ರದಲ್ಲಿ ಪ್ರಗತಿ ಸಾಧ್ಯವಿಲ್ಲ ಎನ್ನುವ ಸತ್ಯದ ಅರಿವು ಆಯಿತು. ನಮ್ಮ ಅನೇಕ ಯೋಜನೆಗಳ ಕಾರ್ಯಕ್ರಮಗಳ ವಿಫಲತೆಗೆ ಈ ಕೊರತೆಯೇ ಮೂಲ ಕಾರಣ ಎನಿಸಿತು. ಇಲಾಖೆಯ ಆಡಳಿತವನ್ನು ಗಮನಿಸಿದಾಗ ದುರದೃಷ್ಟವಶಾತ್ ನಮ್ಮ ಆಡಳಿತ ಪ್ರಾಮಾಣಿಕರನ್ನು ಗುರುತಿಸಿ ಬೆಂಬಲ ಮತ್ತು ಪ್ರೋತ್ಸಾಹ ಕೊಡುವುದರಲ್ಲಿ ಹಾಗೂ ಅದಕ್ಷರು, ಅಯೋಗ್ಯರು, ಭ್ರಷ್ಟರನ್ನು ಗುರುತಿಸಿ ಕ್ರಮ ತೆಗೆದುಕೊಳ್ಳುವುದರಲ್ಲೇ ವಿಫಲವಾಗಿರುವುದು ಕಾಣುತ್ತಿತ್ತು.

## ೧೪

ಬರಹಗಾರನಲ್ಲದ ನನ್ನನ್ನು ಬರೆಯುವಂತೆ ಪ್ರೇರೇಪಣೆ ಮಾಡಿದ ನನ್ನ ಹಿರಿಯ- ಕಿರಿಯ ಮಿತ್ರರ ಒತ್ತಡ ಎಷ್ಟೇ ಇದ್ದರೂ ಈ ಬರಹವನ್ನು ಸೂಕ್ತ ಸಮಯದಲ್ಲಿ ಪೂರ್ತಿ ಮಾಡಲು ಆಗಲಿಲ್ಲ. ೧೯೯೮ರ ಸಾರ್ವಜನಿಕ ಚುನಾವಣೆಯಲ್ಲಿ ಸೋತು ನನ್ನ ಗಿಡ-ಮರಗಳ ಮಧ್ಯೆ ನಾನು ಬದುಕುವ ಸಮಯದಲ್ಲಿ ಸ್ವಲ್ಪಮಟ್ಟಿಗೆ ಈ ಬರವಣಿಗೆಯ ಕೆಲಸ ಮಾಡಲು ಸಾಧ್ಯವಾಗಿತ್ತು. ಮುದ್ರಣಕ್ಕೆ ಕಳಿಸಬೇಕು ಎನ್ನುವ ಸಮಯದಲ್ಲಿ ಅನಿರೀಕ್ಷಿತವಾಗಿ ಮತ್ತೆ ನನ್ನ ಕ್ಷೇತ್ರದಲ್ಲಿ ಚುನಾವಣೆ ನಡೆಯುವ ಸಂದರ್ಭ ಒದಗಿಬಂತು. ಇದರಿಂದಾಗಿ ನನ್ನ ಈ

ಬರವಣಿಗೆಗೆ ಕೆಲಕಾಲ ವಿರಾಮ ಕೊಡಬೇಕಾಯಿತು. ಚುನಾವಣೆ ಮುಗಿದು ಇನ್ನೂ ನನ್ನ ಆಯಾಸ ಪೂರ್ಣ ನಿವಾರಣೆ ಆಗದೇ ಇದ್ದಾಗ್ಯೂ ಈ ಬರವಣಿಗೆಯನ್ನು ಮುಕ್ತಾಯ ಮಾಡುವ ಸಾಹಸ ಮಾಡುತ್ತಿದ್ದೇನೆ.

ಕಳೆದ ಚುನಾವಣೆಯ ನನ್ನ ಸೋಲಿನಿಂದ ಮತ್ತು ರಾಜಕೀಯದಲ್ಲಿ ಕಾಂಗ್ರೆಸ್ ಪಕ್ಷದ ಆಡಳಿತದ ಪ್ರತಿಷ್ಠಾಪನೆಯಿಂದ ರಾಜ್ಯದಲ್ಲಿ ಮತ್ತು ನನ್ನ ಕ್ಷೇತ್ರದಲ್ಲಿ ಉಂಟಾಗಿದ್ದ ಪರಿಸ್ಥಿತಿ ತುಂಬಾ ಕೆಟ್ಟದಾಗಿತ್ತು. ಆಡಳಿತದಲ್ಲಿ ಭ್ರಷ್ಟತೆ ಆಳುವವರಲ್ಲಿನ ದುಷ್ಟತನ ವ್ಯಾಪಕವಾಗಿ ಆವರಿಸಿತ್ತು.

ನನ್ನ ಕ್ಷೇತ್ರದ ಮಟ್ಟಿಗೆ ಹೇಳಬೇಕೆಂದರೆ ಜನರ ಸಮಸ್ಯೆಗಳನ್ನು ಪರಿಹರಿಸುವುದು ಬೇಡ, ಅದನ್ನು ಗಮನಿಸುವ ಪರಿಸ್ಥಿತಿಯಲ್ಲೂ, ಶಾಸಕರಾಗಲೀ, ಸರ್ಕಾರವಾಗಲೀ ಇರಲಿಲ್ಲ. ಕುಣಿಗಲ್ ಮತ್ತು ಹುಲಿಯೂರುದುರ್ಗ ಕ್ಷೇತ್ರದ ಇಬ್ಬರು ಶಾಸಕರೂ ಇಳಿ ವಯಸ್ಸಿನವರಾಗಿದ್ದು ಜನರ ಸಮಸ್ಯೆಗಳಿಗೆ ಪರಿಹಾರ ಒದಗಿಸುವುದರಲ್ಲಾಗಲೀ, ಅಭಿವೃದ್ಧಿ ಕೆಲಸಗಳನ್ನು ಚುರುಕುಗೊಳಿಸುವುದರಲ್ಲಾಗಲೀ, ಜನರು ನಿರೀಕ್ಷಿಸಿದ ಮಟ್ಟಕ್ಕೆ ಕೆಲಸ ಮಾಡಲು ತೊಡಗಿಸಿಕೊಳ್ಳಲು ಸಾಧ್ಯವಾಗಿರಲಿಲ್ಲ. ನಾನು ಮೊದಲು ಮಾಡಿದ ಅನೇಕ ಅಭಿವೃದ್ಧಿ ಕೆಲಸಗಳು ಕುಂಠಿತಗೊಂಡಿದ್ದುವು. ಸರ್ಕಾರಿ ಕಚೇರಿಗಳಲ್ಲಿ ಹೇಳುವವರು, ಕೇಳುವವರಿಲ್ಲದ ಪರಿಸ್ಥಿತಿ ಉಂಟಾಗಿತ್ತು. ಒಟ್ಟಾರೆ ಹೇಳಬೇಕೆಂದರೆ ರಾಮಯ್ಯನವರನ್ನು ಚುನಾವಣೆಯಲ್ಲಿ ಸೋಲಿಸಿದ ಪಾಪದ ಫಲವಾಗಿ ನಮಗೆ ಇಂಥಾ ದುಃಸ್ಥಿತಿ ಒದಗಿಬಂತು ಎಂದು ಜನರು ಮಾತಾಡಿಕೊಳ್ಳುವಂತಾಗಿತ್ತು.

ಕರ್ನಾಟಕದ ರೇಷ್ಮೆ ಉದ್ಯಮದಲ್ಲಿ ಆಮೂಲಾಗ್ರ ವಿಫಲತೆ ಕಾಣತೊಡಗಿತ್ತು. ಕಾಂಗ್ರೆಸ್ ಸರ್ಕಾರ ಅಧಿಕಾರಕ್ಕೆ ಬಂದ ಮೇಲೆ ಆಡಳಿತದಲ್ಲಿನ ಭ್ರಷ್ಟತನ, ಕೇಳುವವರಿಲ್ಲದ ವ್ಯವಸ್ಥೆಯಲ್ಲಿನ ನೌಕರರ ನಿರ್ಲಕ್ಷ್ಯತೆ, ಈ ಇಲಾಖೆಯಲ್ಲಿ ಎಂದೂ ಕಾಣದ ಕೆಟ್ಟ ಪರಿಣಾಮ ಮೂಡಿತ್ತು.

ರೇಷ್ಮೆ ಹುಳುಗಳಿಗೆ ಬರುವ ರೋಗಗಳ ಪೈಕಿ 'ಗಂಟುರೋಗ' ಅತ್ಯಂತ ಮಾರಕವಾದುದು. ಈ ರೋಗ ಯಾವಾಗಲೂ ರೇಷ್ಮೆ ಹುಳುಗಳ ಮಧ್ಯದಲ್ಲಿ ಇದ್ದೇ ಇರುತ್ತದೆ. ಅದು ಉಲ್ಬಣಗೊಂಡಾಗ ಅತ್ಯಂತ ಜಾಗರೂಕತೆಯಿಂದ ನಿಯಂತ್ರಿಸಿಕೊಂಡು ಬರುವುದು ಇಲಾಖೆಯವರ ಕೆಲಸವಾಗಬೇಕಾಗುತ್ತಿತ್ತು. ೧೯೯೦ರಲ್ಲಿ ಉಲ್ಬಣಗೊಂಡ ಈ ಗಂಟುರೋಗವನ್ನು ನಿಯಂತ್ರಣ ಮಾಡಲು ಸಾಧ್ಯವಾಗಲೇ ಇಲ್ಲ. ಈ ರೋಗದಿಂದ ಆಗುವ ದುಷ್ಪರಿಣಾಮದ ಬಗ್ಗೆ ಇಲಾಖೆ ಮುಖ್ಯಸ್ಥರಿಗೆ ಮತ್ತು ಸಚಿವರಿಗೆ ಪತ್ರ ಬರೆದೆ. ಚುನಾವಣೆಯಲ್ಲಿ ಸೋತ ಮೇಲೆ ವಿಧಾನಸೌಧದ ಮೆಟ್ಟಿಲನ್ನೇ ಹತ್ತದಿದ್ದ ನಾನು ಲಕ್ಷಾಂತರ ಜನರ ಬದುಕಿನ ಮುಂದೆ ನನ್ನ ಪ್ರತಿಷ್ಠೆಯನ್ನು ಬದಿಗೊತ್ತಿ ಈ ಇಲಾಖೆ ಸಚಿವರನ್ನು ಒಂದು ಎರಡು ಸಲ ಭೇಟಿ ಮಾಡಿ ಈ ರೋಗವನ್ನು ನಿಯಂತ್ರಿಸಿ ಉದ್ಯಮವನ್ನು, ರೈತರನ್ನು ಉಳಿಸಬೇಕೆಂದು ಪ್ರಾರ್ಥನೆ ಮಾಡಿಕೊಂಡೆ. ರೇಷ್ಮೆ ಉದ್ಯಮದಲ್ಲಿ ಪ್ರಮುಖ ಪಾತ್ರ ವಹಿಸಿರುವ ವಾರಣಾಸಿಯವರೇ ಆದ ರಾಜ್ಯದ ರಾಜ್ಯಪಾಲರನ್ನು ಭೇಟಿಮಾಡಿ ಈ ಗಂಟುರೋಗವನ್ನು ನಿವಾರಣೆ ಮಾಡಲು ಸರ್ಕಾರಕ್ಕೆ ಬುದ್ಧಿ ಹೇಳುವಂತೆ ಪ್ರಾರ್ಥಿಸಿಕೊಂಡೆ.

ನಾನು ರೇಷ್ಮೆ ಖಾತೆ ಸಚಿವನಾಗಿದ್ದ ಸಂದರ್ಭದಲ್ಲಿ ಇವರು ಕೇಂದ್ರ ಜವಳಿ ಖಾತೆ ಮಂತ್ರಿಯಾಗಿದ್ದರು. ಈ ರೋಗದ ವ್ಯಾಪಕ ಹರಡುವಿಕೆ ಮತ್ತು ಅದರ ದುಷ್ಪರಿಣಾಮ ಕುರಿತು ಉದ್ಯಮದಲ್ಲಿ ಆಸಕ್ತಿ ಉಳ್ಳ ಜನರೆಲ್ಲರೂ ಆತಂಕ ವ್ಯಕ್ತಪಡಿಸಿದರು. ಪತ್ರಿಕೆಗಳಲ್ಲಿ ಅಗ್ರಲೇಖನಗಳು ಪ್ರಕಟವಾದುವು. ಆದರೂ ಈ ರೋಗವನ್ನು ನಿಯಂತ್ರಿಸುವಲ್ಲಿ, ಅದರಲ್ಲಿಯೂ ಮೈಸೂರು ಬಿತ್ತನೆ ವಲಯದಲ್ಲಿ ಪ್ರಾಮಾಣಿಕವಾದಂಥ ಪ್ರಯತ್ನವೇ ನಡೆಯಲಿಲ್ಲ. ಎಲ್ಲವನ್ನೂ ನೋಡುತ್ತಾ ಯಾವುದನ್ನೂ ಸರಿಪಡಿಸಲಾಗದ ವಿಶಿಷ್ಟ ಪರಿಸ್ಥಿತಿಯಲ್ಲಿದ್ದ ನನಗೆ ಏನು ಮಾಡಬೇಕೆನ್ನುವುದೇ ತೋಚದಂತಾಯಿತು. ಉದ್ಯಮದ ಅಭಿವೃದ್ಧಿಗೆ ಅನವರತ ಕೆಲಸ ಮಾಡಿದ ಕರ್ನಾಟಕ ರೇಷ್ಮೆ ಸಂಘದವರೂ ತಮಗೇ ತಿಳಿದ ಕಾರಣಕ್ಕಾಗಿ ಸರ್ಕಾರದ ಈ ವಿಫಲತೆಯನ್ನು ಎತ್ತರದ ಧ್ವನಿಯಲ್ಲಿ ವಿರೋಧಿಸುವುದರ ಬದಲು ಸರ್ಕಾರದ ಜೊತೆ ಹೊಂದಿಕೊಂಡು ನಡೆದುಕೊಂಡರು! ಸರಿಮಾಡಬೇಕೆಂಬ ಕಾಳಜಿ ಇದ್ದ ಆಸಕ್ತಿಯುಳ್ಳ ಅಧಿಕಾರಿಗಳು ನಿಸ್ಸಹಾಯಕರಾದರು! ಇಂಥ ಸಂದರ್ಭದಲ್ಲಿ ಉದ್ಯಮದಿಂದಲೇ ಬದುಕುತ್ತಿರುವ ಚನ್ನಪಟ್ಟಣ, ಶಿಡ್ಲಘಟ್ಟ, ಚಾಮರಾಜನಗರ ಹಾಗೂ ಮೈಸೂರು ಬಿತ್ತನೆ ವಲಯದ ಕೆಲವು ಸ್ನೇಹಿತರು ನನ್ನಲ್ಲಿ ಬಂದು 'ಏನಾದರೂ ಮಾಡ' ಬೇಕೆಂದು ಒತ್ತಾಯ ತಂದರು. ಈ ಗಂಟುರೋಗದ ನಿಯಂತ್ರಣ ಮಾಡಲು ಬಿತ್ತನೆ ವಲಯದಲ್ಲಿ ಕಟ್ಟುನಿಟ್ಟಾದ ಕ್ರಮಗಳನ್ನು ತೆಗೆದುಕೊಳ್ಳದೇ ಇದ್ದಲ್ಲಿ ಇದರ ನಿಯಂತ್ರಣ ಸಾಧ್ಯವಿಲ್ಲ ಎನ್ನುವ ಅರಿವಿದ್ದ ನಾನು ಮೈಸೂರು ಬಿತ್ತನೆ ವಲಯದ ಎಲ್ಲಾ ಮಾರುಕಟ್ಟೆಗಳಿಗೆ ಭೇಟಿ ಇತ್ತು ರೈತರನ್ನು ಸಂಪರ್ಕಿಸಿದ ಸಮಯದಲ್ಲಿ ಈ ಬಿತ್ತನೆ ವಲಯದ ರೈತರು ಒಂದು ವಿಧವಾಗಿ ತಬ್ಬಲಿಗಳಾಗಿದ್ದಾರೆ ಎನಿಸಿತು.

ಈ ವಿಷಯದಲ್ಲಿ ಚರ್ಚಿಸಿ ಸಮಸ್ಯೆಗೆ ಪರಿಹಾರ ಹುಡುಕಲು ಕುಣಿಗಲ್ ತಾಲ್ಲೂಕು ಕೆಂಪನಹಳ್ಳಿಯಲ್ಲಿ ರೇಷ್ಮೆ ಬೆಳೆಗಾರರ ಸಭೆ ಕರೆಯಲಾಯಿತು. ಈ ಬೆಳೆಗಾರರ ಸಭೆಯನ್ನು ನಡೆಸುವುದರ ಮೂಲಕ ರಾಮಯ್ಯ ಮತ್ತೆ ರಾಜಕೀಯವಾಗಿ ಪ್ರಬಲವಾಗುವನೆಂದು ಯೋಚಿಸಿದ ರಾಜಕಾರಣಿಗಳು ಈ ಸಭೆ ಆಗದಂತೆ ಎಲ್ಲಾ ಪ್ರಯತ್ನ ನಡೆಸಿದರು. ಸಭೆಗೆ ಬರಲು ಒಪ್ಪಿಕೊಂಡಿದ್ದ ಸಚಿವರು ಬರದಂತೆ ಅವರ ಮೇಲೆ ಒತ್ತಾಯ ತಂದರು. ಆದರೆ ಯಾರು ಬರದಿದ್ದರೂ ಈ ಸಭೆ ನಡೆಯುತ್ತದೆ ಎಂದು ಅರಿವಾದಾಗ ಎಲ್ಲರೂ ಬಂದರು! ಮಂತ್ರಿ ಶ್ರೀ ಮುನಿಯಪ್ಪ, ಶಾಸಕರಾದ ಶ್ರೀ ಹುಚ್ಚಮಾಸ್ತಿಗೌಡ ಹಾಗೂ ಶ್ರೀ ಕೆ. ಲಕ್ಕಪ್ಪ ವೇದಿಕೆಯಲ್ಲಿ ಆಸೀನರಾದರೂ ನಾನು ಸಭೆಗೆ ಹೋಗುವವರೆಗೆ ನೆರೆದಿದ್ದ ಸುಮಾರು ೬-೭ ಸಾವಿರ ಬೆಳೆಗಾರರು ಹೊರಗೇ ಕಾದಿದ್ದು ನಾನು ವೇದಿಕೆಗೆ ಹೋದ ಮೇಲೆ ಒಳಬಂದರು. ಅಲ್ಲಿ ನೆರೆದಿದ್ದ ಬೆಳೆಗಾರರಲ್ಲಿ ಸರ್ಕಾರ ಮತ್ತು ಇಲಾಖೆಯ ಬಗ್ಗೆ ಆಕ್ರೋಶ ತುಂಬಿ ತುಳುಕುತ್ತಿತ್ತು. ಯಾವ ಅಧಿಕಾರಿಯನ್ನೂ ಮಾತಾಡಲು ಬಿಡಲಿಲ್ಲ. ಶಾಸಕರು ಮತ್ತು ಸಚಿವರುಗಳು ಅತ್ಯಂತ ಪ್ರಯಾಸದಿಂದ ಮಾತನಾಡಬೇಕಾಯಿತು.

"ನೀವು ಈ ಸಭೆಗೆ ಸಹಕರಿಸದೇ ಹೋದಲ್ಲಿ ವೇದಿಕೆಯಿಂದ ಇಳಿದು ಹೊರಟುಹೋಗುತ್ತೇನೆ ಎಂದು ನಾನು ಬೆದರಿಸಿದಾಗ ಸಭೆ ನಿಯಂತ್ರಣಕ್ಕೆ ಬಂದಿತು. ಈ

ಸಭೆಯಲ್ಲಿ ನಾನು ಮಾತನಾಡುವಾಗ ನನ್ನೆಲ್ಲ ಅನುಭವ, ಆಸಕ್ತಿಯನ್ನು ಬಳಸಿಕೊಂಡು ಈ ರೋಗವನ್ನು ನಿಯಂತ್ರಣ ಮಾಡಿಕೊಳ್ಳಲು ಹಾಜರಿದ್ದ ಮಂತ್ರಿಗಳಿಗೆ ಮತ್ತು ಇಲಾಖೆಯ ಮುಖ್ಯಸ್ಥರಿಗೆ ವಿನಂತಿ, ಮಾಡಿಕೊಂಡೆ. ಹಾಕಿಕೊಳ್ಳಬೇಕಾದ ಕಾರ್ಯಕ್ರಮಗಳ ಬಗ್ಗೆ ವಿವರಿಸಿ ಮಾಡದೇ ಇದ್ದಲ್ಲಿ ಆಗುವ ದುಷ್ಪರಿಣಾಮಕ್ಕೆ ನೀವೇ ಕಾರಣಕರ್ತರಾಗುತ್ತೀರಿ ಎಂದು ಎಚ್ಚರಿಕೆಯನ್ನು ಕೊಟ್ಟೆ. ಈ ಸಭೆಯಲ್ಲಿ ಮಾತನಾಡುವಾಗ ಶಾಸಕ ಶ್ರೀ ಲಕ್ಕಪ್ಪನವರು 'ಕೇಂದ್ರ ರೇಷ್ಮೆ ಮಂಡಳಿ ಬೊಂಬಾಯಿಯಲ್ಲಿ ಏಕೆ ಇರಬೇಕು ?' ಎಂದು ಹೇಳಿದಾಗ 'ಅಯ್ಯೋ' ಎನಿಸಿತು. ರೇಷ್ಮೆ ಬಿತ್ತನೆ ವಲಯದ ಶಾಸಕರಿಗೆ ಈ ಉದ್ಯಮ ಕುರಿತು ಇರುವ ಅರಿವನ್ನು ನೋಡಿ! ಏಕೆಂದರೆ ಕೇಂದ್ರ ರೇಷ್ಮೆ ಮಂಡಳಿ ಹಾಗೂ ಕಚೇರಿ ಮುಂಬೈಯಿಂದ ಬೆಂಗಳೂರಿಗೆ ಸುಮಾರು ದಶಕದ ಹಿಂದೆಯೇ ವರ್ಗಾಯಿಸಲ್ಪಟ್ಟಿದ್ದುವು! ಹಾಜರಿದ್ದ ಸಚಿವರು ಗಂಟುರೋಗದ ಉಲ್ಬಣಾವಸ್ಥೆಗೆ ಬೆಳೆಗಾರರ ಬೇಜವಾಬ್ದಾರಿತನವೇ ಕಾರಣ ಎಂದು ಹೇಳಿದಾಗ “ಮಂತ್ರಿಗಳೇ,ಅಧಿಕಾರಿಗಳ ಮಾತು ಕೇಳಿಕೊಂಡು ಇರುವ ಸಾವಿರಾರು ಜನರ ಎದುರಿಗೆ ನಿಮ್ಮ ದಡ್ಡತನವನ್ನು ಪ್ರದರ್ಶನ ಮಾಡಬೇಡಿ” ಎಂದು ವಿಧಿ ಇಲ್ಲದೆ ನಾನು ಹೇಳಬೇಕಾಯಿತು. ಮಾಮೂಲಿನಂತೆ ಎಲ್ಲವನ್ನೂ ಸರಿಮಾಡುವ ಉದಾತ್ತ ಆಶ್ವಾಸನೆಯನ್ನು ಮಂತ್ರಿಗಳು ಇತ್ತ ಮೇಲೆ ಸಭೆ ಮುಗಿಯಿತು.

ಈ ಸಭೆಯಿಂದ ಏನೂ ಪ್ರಯೋಜನವಾಗಲಿಲ್ಲ. ಅಲ್ಲದೆ ಸಭೆಗೆ ಬಂದಿದ್ದ ಮಂತ್ರಿಗಳು ಈ ರೋಗದ ನಿಯಂತ್ರಣಕ್ಕೆ ಅವಶ್ಯಕವಾಗಿ ಮಾಡಬೇಕಾದ ಕಾರ್ಯಕ್ರಮಗಳನ್ನು ರೂಪಿಸುವ ಬದಲು ವೈ.ಕೆ. ರಾಮಯ್ಯನವರು ಮಂತ್ರಿಯಾಗಿದ್ದಾಗ ರೇಷ್ಮೆ ಬಿತ್ತನೆ ವಲಯದ ರೈತರಿಗೆ [illegible] ರೂಪಾಯಿ ಬೋನಸ್ ಹಣ ಕೊಟ್ಟಿದ್ದರಿಂದ ರೈತರುಗಳು ಸೋಮಾರಿಯಾಗಿ ಗಂಟುರೋಗ ಬಂದಿತು ಎಂದು ಪತ್ರಿಕೆಗಳಿಗೆ ಹೇಳಿಕೆಯನ್ನೂ ಕೊಟ್ಟು ಜನರ ಆಕ್ರೋಶಕ್ಕೆ ಗುರಿಯಾದರು. ಗಂಟುರೋಗ ದಿನದಿಂದ ದಿನಕ್ಕೆ ವ್ಯಾಪಕವಾಗತೊಡಗಿತ್ತು. ಇಷ್ಟೇ ವ್ಯಾಪಕವಾಗಿ ಇಲಾಖೆಯಲ್ಲಿ ಭ್ರಷ್ಟತನ ಆವರಿಸಿಕೊಂಡಿತ್ತು. ಮಾರುಕಟ್ಟೆಗಳಿಗೆ ಅಧಿಕಾರಿಗಳನ್ನು ನೇಮಿಸುವಾಗ ಸಾವಿರಾರು ರೂಪಾಯಿಗಳ ಲಂಚ ತೆರಬೇಕಾದ ಪರಿಸ್ಥಿತಿ ಉಂಟಾಯಿತು. ಒಂದು ಕಾಲದಲ್ಲಿ ಪುಕ್ಕಟೆಯಾಗಿ ಬಿತ್ತನೆ ವಲಯದಲ್ಲಿ ಮೊಟ್ಟೆ ಒದಗಿಸುತ್ತಿದ್ದರು. ಆದರೆ ನೂರು ಮೊಟ್ಟೆಗಳಿಗೆ ಬೆಳೆಗಾರ ನೂರು ರೂಪಾಯಿ ಲಂಚ ಕೊಡುವ ಪರಿಸ್ಥಿತಿ ಒದಗಿತು. ಇಷ್ಟೇ ಅಲ್ಲ, ಲಂಚ ಕೊಟ್ಟರೂ ಮೊಟ್ಟೆ ಸಿಗದಂತಾಯಿತು. ನಿಸ್ಸಹಾಯಕರಾದ ಸ್ಥಳೀಯ ಅಧಿಕಾರಿಗಳು “ಕಡ್ಡಿಯನ್ನು ಕಿತ್ತುಹಾಕಿ, ನಮ್ಮಿಂದ ಮೊಟ್ಟೆ ಕೊಡಲಿಕ್ಕೆ ಸಾಧ್ಯವಿಲ್ಲ” ಎಂದು ಹೇಳಲು ಮೊದಲು ಮಾಡಿದರು. ಅಖಂಡ ಭಾರತದಲ್ಲಿ, ರೇಷ್ಮೆ ಉದ್ಯಮದಲ್ಲಿ ಕರ್ನಾಟಕಕ್ಕೆ ಇದ್ದಂಥ ಕೀರ್ತಿಗೆ ಕಳಂಕ ತಂದ ಈ ಪರಿಸ್ಥಿತಿಗೆ ನಾನು ಜೀವನದಲ್ಲಿಯೇ ಕಾಣದಂಥ ಮಂತ್ರಿ ಹಾಗೂ ಒಳ್ಳೆಯವನಾದರೂ ಪ್ರಯೋಜನವಿಲ್ಲದ ಇಲಾಖೆ ನಿರ್ದೇಶಕರು ಕಾರಣಕರ್ತರಾದರು ಎಂದು ಹೇಳದೆ ವಿಧಿಯಿಲ್ಲ.

೧೫

ಇಂಥ ಪರಿಸ್ಥಿತಿಯಲ್ಲಿ ಶ್ರೀ ಲಕ್ಕಪ್ಪನವರ ನಿಧನದಿಂದ ಕುಣಿಗಲ್‌ನಲ್ಲಿ ಉಪ ಚುನಾವಣೆ ಒದಗಿಬಂತು. ಚುನಾವಣೆಯ ಪ್ರಚಾರಕ್ಕಾಗಿ ಯಾವ ಹಳ್ಳಿಗೆ ಹೋದರೂ ಮೊಟ್ಟೆ ಸಿಕ್ಕುವುದಿಲ್ಲ, ಲಂಚ ಕೊಟ್ಟು ತಂದರೂ ಬೆಳೆ ಆಗುವುದಿಲ್ಲ. ಬೆಳೆ ಆದರೂ ಗಂಟುರೋಗದಿಂದ ಮಾರುಕಟ್ಟೆಯಲ್ಲಿ ತಿರಸ್ಕರಿಸುತ್ತಾರೆ. ಮೊಟ್ಟೆ ತರುವುದರಿಂದ ಹಿಡಿದು ಗೂಡು ಮಾರುವವರೆಗೆ ಲಂಚ ಕೊಡಬೇಕು ಎನ್ನುವುದು ರೈತರ ಕೂಗಾಗಿತ್ತು. ಇವೆಲ್ಲ ಕಷ್ಟಗಳಿಗೆ ನಾನು ನಿಮ್ಮನ್ನು ಸೋಲಿಸದ್ದೇ ಕಾರಣ ಎನ್ನುವ ಪಶ್ಚಾತ್ತಾಪದ ಮಾತುಗಳೂ ಕೇಳಿಬರುತ್ತಿದ್ದುವು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಆಡಳಿತದಲ್ಲಿನ ಭ್ರಷ್ಟತನ ಈ ಉದ್ಯಮವನ್ನೇ ನಾಶದ ಅಂಚಿಗೆ ತಂದಿತ್ತು. ಈ ಚುನಾವಣೆಯ ಬಗ್ಗೆ ಇಲ್ಲಿ ನಾನು ಪ್ರಸ್ತಾಪ ಮಾಡುವ ಪ್ರಯತ್ನ ಮಾಡುತ್ತಿಲ್ಲ. ಏಕೆಂದರೆ ಅದೇ ಒಂದು ದೊಡ್ಡ ಪುಸ್ತಕವಾಗುತ್ತದೆ. ಒಂದು ಕಡೆ ಇಡೀ ಸರ್ಕಾರ, ಆಡಳಿತ ಯಂತ್ರ, ಅಧಿಕಾರಿಗಳ ದಂಡು, ಶಾಸಕರ ಪಡೆ, ಮಂತ್ರಿ -ಮಹೋದಯರ ಮೊಕ್ಕಾಂ, ಕೋಟ್ಯಂತರ ರೂಪಾಯಿಗಳ ಹಣದ ಹೊಳೆ ಲಕ್ಷಾಂತರ ರೂಪಾಯಿಗಳ ಹೆಂಡದ ವಿತರಣೆ ಇಷ್ಟು ಸಾಲದೆಂದು ಆಡಳಿತ ಪಕ್ಷದವರ ಗೂಂಡಾ ನಡೆವಳಿಕೆ ಈ ಎಲ್ಲಾ ಶಕ್ತಿಯ ಎದುರುಗಡೆ ಹೋರಾಡಬೇಕಾಗಿದ್ದ ನನಗೆ ಶ್ರೀಯುತ ದೇವೇಗೌಡರನ್ನು ಹೊರತುಪಡಿಸಿ ವಿರೋಧ ಪಕ್ಷಗಳೇ ವಿರೋಧ ಮಾಡುವ, ಅಪಪ್ರಚಾರ ಮಾಡುವ ಪರಿಸ್ಥಿತಿ ಇತ್ತು. ಇಂಥ ಸಂದರ್ಭದಲ್ಲಿ ಏಕಾಂಗಿಯಾಗಿ ಹೋರಾಡಬೇಕಾಯಿತು. ಆಳುವ ಪಕ್ಷದವರ ಅಬ್ಬರದ ವಿರೋಧ ಹಾಗೂ ವಿರೋಧ ಪಕ್ಷದವರ ಅಪಪ್ರಚಾರವಿದ್ದಾಗ್ಯೂ ಈ ಚುನಾವಣೆಯಲ್ಲಿ ನಾನು ಆರಿಸಿಬಂದೆ. ಈ ವಿಜಯಕ್ಕೆ ನನ್ನ ಸ್ನೇಹಿತರ ಮತ್ತು ಅಭಿಮಾನಿಗಳ ಪ್ರತ್ಯಕ್ಷ ಮತ್ತು ಪರೋಕ್ಷವಾದ ಸಹಾಯ, ಸಹಕಾರ ಮತ್ತು ನನ್ನ ಕ್ಷೇತ್ರದ ಜನ ನನ್ನಲ್ಲಿ ತೋರಿದ ಅಪ್ರತಿಮ ನಂಬಿಕೆ ಮತ್ತುವಿಶ್ವಾಸ ಕಾರಣವೆಂದು ನಾನು ಭಾವಿಸಿದ್ದೇನೆ. ಅದಕ್ಕಾಗಿಯೇ ಇದು "ನನ್ನ ಜನಗಳ ವಿಜಯ" ಎಂದು ಹೇಳಿದ್ದು.

ಕರ್ನಾಟಕ ರಾಜ್ಯದ ರಾಜಕೀಯ ಇತಿಹಾಸದಲ್ಲಿ ಇದೊಂದು ಮಹತ್ವದ ಚುನಾವಣೆ. ಈ ಕ್ಷೇತ್ರದ ಜನರು ತೆಗೆದುಕೊಂಡ ಈ ಪ್ರಬುದ್ಧ ತೀರ್ಮಾನದಿಂದ ರಾಜ್ಯದ ರಾಜಕೀಯಕ್ಕೆ ಒಂದು ತಿರುವು ಸಿಕ್ಕಿದೆ ಎಂದು ವಿಶ್ಲೇಷಣೆಗಳು ನಡೆಯುತ್ತಿವೆ. ಅದೇನೇ ಆಗಲಿ ನನ್ನ ಜೀವಿತದಲ್ಲಿ ಇದೊಂದು ಚಿರಸ್ಮರಣೀಯ ಹೋರಾಟ. ಯಾರು ಏನೇ ಹೇಳಲಿ, ನಾನು ಮಾಡಿದ ಕೆಲಸ ಮತ್ತು ಬಾಳಿದ ಬಗೆಯನ್ನು ನನ್ನ ಜನ ಅರಿತು ಆಶೀರ್ವದಿಸಿದ್ದಾರೆ. ಅದರಲ್ಲಿಯೂ ರೇಷ್ಮೆ ಬೆಳೆಯುವ ಪ್ರತಿಯೊಂದು ಕುಟುಂಬ ಪಕ್ಷ ಭೇದ ಮರೆತು ನನ್ನನ್ನು ಬೆಂಬಲಿಸಿದ್ದಾರೆ.

ಈಗಲಾದರೂ ಈ ಉದ್ಯಮಕ್ಕೆ ರಾಚಿರುವ ಗ್ರಹ ಬಿಟ್ಟು ಬೆಳೆಗಾರನಿಗೆ ನೆಮ್ಮದಿ ಉಂಟಾದೀತಾ ಎಂದು ಜನ ಹಂಬಲಿಸುತ್ತಿದ್ದಾರೆ. ನಾನು ಶಾಸಕನಾದೆ. ಆದರೂ ಅದೇ ಮಂತ್ರಿ, ಅದೇ ಇಲಾಖಾ ನಿರ್ದೇಶಕರು ಇರುವುದರಿಂದ ಸಾಮಾನ್ಯ ಕಾರ್ಯಕ್ರಮಗಳಿಂದ

ಈ ಇಲಾಖೆಯಲ್ಲಿ ಅಮೂಲಾಗ್ರ ಬದಲಾವಣೆ ತರುವುದು ಸಾಧ್ಯವಿಲ್ಲ. ಕಾರಣ ಇವರು ಸೃಷ್ಟಿಸಿರುವ ಕೆಟ್ಟ ವ್ಯವಸ್ಥೆ, ಎಲ್ಲರ ಲೆಕ್ಕಾಚಾರಗಳನ್ನು ತಿರುವು ಮುರುವು ಮಾಡಿ ನನ್ನನ್ನು ಆರಿಸಿರುವ ಈ ಜನರಿಗೆ ನನ್ನಿಂದೇನಾದರೂ ಆಗಬಹುದೆನ್ನುವ ನಿರೀಕ್ಷೆ ಇದ್ದರೆ ಅದು ಸಹಜವಾದದ್ದು. ರೇಷ್ಮೆ ಬೆಳೆಗಾರರ ಸಾಮಾನ್ಯ ಸಮಸ್ಯೆಗಳಾದರೂ ಬಗೆಹರಿಯಬೇಕು. ಜಿಲ್ಲೆಗೆ ಬರಬೇಕಾಗಿರುವ ಹೇಮಾವತಿ ನೀರಿನ ಕಾಮಗಾರಿಗಳು ತ್ವರಿತಗೊಳ್ಳಬೇಕು. ಸಂಪೂರ್ಣವಾಗಿ ಸತ್ತೇಹೋಗಿರುವ ಆಡಳಿತವನ್ನು ಸ್ವಲ್ಪವಾದರೂ ಚುರುಕುಗೊಳಿಸಬೇಕು ಎನ್ನುವುದು ನನ್ನ ಮುದೆ ಇರುವ ತತ್‌ಕ್ಷಣದ ಆಲೋಚನೆಗಳು.

ಯಾವುದು ಏನೇ ಆಗಲಿ ನಾನು ಜನಪ್ರತಿನಿಧಿಯಾಗಿರುವಾಗಲಾದರೂ ರೇಷ್ಮೆ ಬೆಳೆಗಾರನ ಮೂಲಭೂತ ಸಮಸ್ಯೆಗಳಾದರೂ ಪರಿಹಾರ ಆಗದೇ ಇದ್ದಲ್ಲಿ ನಾನು ಅವರ ಪ್ರತಿನಿಧಿಯಾಗಿ ಇರುವ ಅವಶ್ಯಕತೆ ಇಲ್ಲ. ಅದಕ್ಕಾಗಿ ಜೂನ್ ೨೨ನೇ ತಾರೀಖು ಕುಣಿಗಲ್‌ನಲ್ಲಿ ರೇಷ್ಮೆ ಬಿತ್ತನೆ ವಲಯದ ಬೆಳೆಗಾರರು ಸಭೆ ಸೇರಿ ಅಮೂಲಾಗ್ರವಾಗಿ ಚರ್ಚಿಸಿ ಇಲಾಖೆಗೆ ಎಚ್ಚರಿಕೆಯ ಕಹಳೆಯನ್ನು ಊದಿದ್ದಾರೆ.

ಆಗಸ್ಟ್ ೧೫ ನೇ ತಾರೀಖಿನ ಒಳಗಾಗಿ ಬೆಳೆಗಾರನಿಗೆ ಅವಶ್ಯಕವಾದಷ್ಟು ರೇಷ್ಮೆ ಮೊಟ್ಟೆಗಳನ್ನು ಒದಗಿಸಿಕೊಡಬೇಕು. ಮಾರಕವಾಗಿರುವ ಗಂಟುರೋಗದ ನಿಯಂತ್ರಣ ಮಾಡಲು ಬೆಳೆಗಾರನಿಗೆ ನಂಬಿಕೆ ಬರುವಂಥ ಪ್ರಾಮಾಣಿಕ ಕಾರ್ಯಕ್ರಮಗಳನ್ನು ರೂಪಿಸಬೇಕು, ಎಲ್ಲಾ ಹಂತದಲ್ಲಿ ಬೆಳೆಗಾರನನ್ನು ಕಿತ್ತು ತಿನ್ನುತ್ತಿರುವ ಭ್ರಷ್ಟತನ ತೊಲಗಬೇಕು. ಇದಾಗದೇ ಇದ್ದಲ್ಲಿ ಬೆಳೆಗಾರ ತನಗೆ ನ್ಯಾಯವಾಗಿ ದೊರಕಬೇಕಾದ ಸವಲತ್ತು ಪಡೆದುಕೊಳ್ಳಲು, ಯಾವ ಕಾನೂನಿನಿಂದ ಅವನನ್ನು ಬಂಧಿಸಲಾಗಿದೆಯೋ ಅಂತಹ ಕಾನೂನನ್ನು ಮುರಿಯಬೇಕಾಗುತ್ತದೆ. ಅವನಿಗೆ ಬೇಕಾದ ಮೊಟ್ಟೆಯನ್ನು ಅವನೇ ತಯಾರು ಮಾಡಿಕೊಳ್ಳಲು ಬೆಳೆದ ಗೂಡನ್ನು ಅವನಿಗೆ ಬೇಕಾದಲ್ಲಿ ಮಾರಿಕೊಳ್ಳಲು ಸ್ವತಂತ್ರನಾಗಿರುತ್ತಾನೆ. ತನಗೆ ಬೇಕಾದ ರೇಷ್ಮೆ ಮೊಟ್ಟೆಯನ್ನು ಒದಗಿಸಲು ಶಕ್ತರಲ್ಲದ, ಬೆಳೆದ ಗೂಡನ್ನು ಮಾರಾಟ ಮಾಡಲು ಉತ್ತಮ ಮಾರುಕಟ್ಟೆ ವ್ಯವಸ್ಥೆ ನೀಡಲು ಯೋಗ್ಯತೆ ಇಲ್ಲದೆ ರೇಷ್ಮೆ ಇಲಾಖೆಯ ಸರ್ಕಾರಿ ಅಧಿಕಾರಿಗಳಾಗಲಿ, ಕಚೇರಿಗಳಾಗಲಿ, ವಾಹನಗಳಾಗಲಿ ಅವಶ್ಯಕ ಇಲ್ಲವೆಂದು ಭಾವಿಸಿಕೊಂಡು ಜನರಿಗೆ ಬೇಡವಾದ ಇವೆಲ್ಲವನ್ನೂ ಸ್ತಬ್ಧಗೊಳಿಸಲು ರೈತರು ಸನ್ನದ್ಧರಾಗಬೇಕು ಎಂದು ಈ ಸಭೆಯಲ್ಲಿ ತೀರ್ಮಾನಿಸಲಾಗಿದೆ. ಸರ್ಕಾರಕ್ಕೆ ಮತ್ತು ಸಂಬಂಧಪಟ್ಟ ಅಧಿಕಾರಿಗಳಿಗೆ ಇದನ್ನು ತಿಳಿಸಲಾಗಿದೆ.

ಅನಿರೀಕ್ಷಿತವಾಗಿ ಒದಗಿಬಂದ ಕುಣಿಗಲ್ ವಿಧಾನಸಭಾ ಕ್ಷೇತ್ರದ ಉಪಚುನಾವಣೆಯಲ್ಲಿ ನಾನು ಮಾಡಿದ ಅಲ್ಪ ಕಾರ್ಯಗಳಿಗಾಗಿ ನನ್ನ ಜನರು ತೋರಿದ ಅಪಾರ ಪ್ರೀತಿ-ವಿಶ್ವಾಸ-ನಂಬಿಕೆಗಳಿಂದ ನನ್ನೆಲ್ಲಾ ಭಾವನೆಗಳು, ಚಿಂತನೆಗಳು, ಅನಿಸಿಕೆ, ಆಲೋಚನೆಗಳು ಹೆಪ್ಪುಗಟ್ಟಿ ಮೂಕನಾಗಿ ಕುಳಿತಿರುವಾಗ ಈ ಬರವಣಿಗೆಯನ್ನು ಮುಗಿಸುತ್ತಿದ್ದೇನೆ. ಸಾಹಿತ್ಯದ ಆಳವಾದ ಅಭ್ಯಾಸವಿಲ್ಲದ, ಭಾಷೆಯ ಪಾಂಡಿತ್ಯವಿಲ್ಲದ, ಯಾವುದೇ ವಿಷಯದ ಆಳ ಅಧ್ಯಯನವಿಲ್ಲದ ನನ್ನ ಈ ಬರವಣಿಗೆ, ಇದರಲ್ಲಿನ ನನ್ನ ಅನಿಸಿಕೆಗಳು, ಅಭಿಪ್ರಾಯಗಳು ಸಂಪೂರ್ಣ ನನ್ನವು.

ಇಲ್ಲಿನ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ವಿಚಾರಗಳೆಲ್ಲವೂ ಸರಿ ಎನ್ನುವ ಭ್ರಮೆ ನನಗಿಲ್ಲ.

೧೬

ನಾನು ಮತ್ತು ರೇಷ್ಮೆ ಎಂಬ ನನ್ನ ಪುಸ್ತಕವನ್ನು ಎರಡನೆ ಮುದ್ರಣ ಮಾಡಿಸುವ ಸಮಯದಲ್ಲಿ ಇತ್ತೀಚೆಗಿನ ದಿನಗಳಲ್ಲಿ ರೇಷ್ಮೆ ಉದ್ಯಮದಲ್ಲಿ ಆಗಿರುವ ಬೆಳವಣಿಗೆಗಳನ್ನು ಸೂಕ್ಷ್ಮವಾಗಿ ನೋಂದಾಯಿಸಬೇಕು ಎನ್ನುವುದು ನನ್ನ ಅಭಿಲಾಷೆಯಾಗಿತ್ತು. ಆ ಸಂದರ್ಭದಲ್ಲಿ ಬರೆದ ಟಿಪ್ಪಣಿ ಹೀಗಿದೆ :

ಮೈಸೂರು ಬಿತ್ತನೆ ವಲಯದಲ್ಲಿ ಅಂದು ಉಲ್ಬಣವಾಗಿದ್ದ ಗಂಟುರೋಗವನ್ನು ಆಗ ಬಿತ್ತನೆ ವಲಯಕ್ಕೆ ವರ್ಗವಾಗಿ ಬಂದ ಶ್ರೀ ಚಿಕ್ಕ ವೆಂಕಟಪ್ಪ ಮತ್ತು ಇತರ ಅಧಿಕಾರಿಗಳ ಶ್ರಮದಿಂದ ನಿಯಂತ್ರಿಸಲ್ಪಟ್ಟಿತು. ನಾನು ಕುಣಿಗಲ್ ಉಪಚುನಾವಣೆಯಲ್ಲಿ ಗೆದ್ದು ಬಂದ ಮೇಲೆ ವ್ಯಾಪಕವಾಗಿದ್ದ ಗಂಟುರೋಗವನ್ನು ನಿಯಂತ್ರಿಸಲು ಮೈಸೂರು ಬಿತ್ತನೆ ವಲಯದಲ್ಲಿ ಅಧಿಕಾರಿಗಳ ಜೊತೆ ಸೇರಿ ರೋಗರಹಿತ ಬಿತ್ತನೆ ಮೊಟ್ಟೆಗಳ ಉತ್ಪಾದನೆ ಕಡೆಗೆ ಹೆಚ್ಚು ಗಮನಹರಿಸಬೇಕಾಯಿತು. ಒಟ್ಟಿನಲ್ಲಿ ನಾನೇ ಇಲಾಖೆ ಅಧಿಕಾರಿಯಂತೆ ಕಾರ್ಯನಿರ್ವಹಿಸಿದೆ. ಅಧಿಕಾರ ಮಟ್ಟದಲ್ಲಿ ಆದ ಬದಲಾವಣೆಯಿಂದಾಗಿ, ಆಡಳಿತದಲ್ಲಿ ಸ್ವಲ್ಪ ಬಿಗಿ, ಭ್ರಷ್ಟತೆಯಲ್ಲಿ ಸ್ವಲ್ಪ ಸ್ಥಗಿತ ಹಾಗೂ ಇಲಾಖಾ ಅಧಿಕಾರಿಗಳ ಮೇಲೆ ನನ್ನ ಅನವರತ ಒತ್ತಡದಿಂದಾಗಿ ಅತ್ಯಂತ ಕೆಟ್ಟ ಪರಿಸ್ಥಿತಿಯಲ್ಲಿ ಸ್ವಲ್ಪ ಸುಧಾರಣೆ ಕಂಡಿತು.

ಇಲ್ಲಿ ಅನವಶ್ಯಕವಾದರೂ ಅನಿವಾರ್ಯವಾಗಿ ಕೆಲವು ವಿಷಯಗಳನ್ನು ನಾನು ಹೇಳಲೇಬೇಕಾಗುತ್ತದೆ.'ಒಬ್ಬ ಜನಪ್ರತಿನಿಧಿ ಸರ್ವಗುಣ ಸಂಪನ್ನನಲ್ಲ. ಸರ್ವ ಸಮಸ್ಯೆಗಳ ಸಂಜೀವಿನಿಯೂ ಅಲ್ಲ' ಎಂಬ ಅರಿವು ಉಳ್ಳವನು ನಾನು. ನಮ್ಮ ಎಲ್ಲಾ ಪ್ರಯತ್ನ ಹಾಗೂ ಶ್ರಮದಿಂದ ಹಸಿದ ಎಲ್ಲಾ ಹೊಟ್ಟೆಗಳಿಗೂ ಅನ್ನ ಕೊಡುವುದಾಗಲಿ, ನೊಂದ ಎಲ್ಲಾ ಜೀವಿಗಳನ್ನು ಸಂತೈಸುವುದಾಗಲಿ ನಮ್ಮಿಂದ ಸಾಧ್ಯವಿಲ್ಲ ಎಂಬ ನಗ್ನ ಸತ್ಯ ನನಗೆ ತಿಳಿಯದ ವಿಷಯವಲ್ಲ. ಆದರೂ ಜನರಿಂದ ಸರ್ವಸ್ವವನ್ನು ಪಡೆದ ವು ಆ ಜನರಿಗೆ ಏನಾದರೂ ಕಿಂಚಿತ್ ಕೆಲಸ ಮಾಡಿ ಋಣ ತೀರಿಸಿಕೊಳ್ಳಬೇಕೆನ್ನುವುದು ನನ್ನ ಅಭಿಲಾಷೆ, "ಕರ್ತೃ ನಿರ್ಣಯ ಬಾಹ್ಯ ಲಾಭ-ನಷ್ಟಗಳಿಗಲ್ಲ, ಲೋಕಕ್ಕೆ ಆತ್ಮ ಋಣವದೋ ಮಂಕುತಿಮ್ಮ" ಎಂದಿರುವ ಡಿ. ವಿ. ಜಿ. ಯವರ ವಾಣಿಯನ್ನು ಪರಿಪೂರ್ಣವಾಗಿ ಅಳವಡಿಸಿಕೊಂಡು ಬದುಕಲು ಪ್ರಯತ್ನಪಟ್ಟವನು ನಾನು.

ಕೃಷಿಗೆ ನೀರೆ ಆಧಾರ, ಉತ್ತಮ ಬೀಜ, ಉತ್ಕೃಷ್ಟ ಭೂಮಿ, ಆಧುನಿಕ ತಂತ್ರಜ್ಞಾನ, ವೈಜ್ಞಾನಿಕ ನೆರವು ಹಾಗೂ ರೈತನ ಕಟಿಬದ್ಧಶ್ರಮ, ಪರಿಣಿತಿಗಳಿದ್ದಾಗ್ಯೂ, ನಮ್ಮ ರೈತರು, ಅದರಲ್ಲಿಯೂ ಮಳೆಯ ನೀರನ್ನು ಅವಲಂಬಿಸಿರುವ ರೈತರು ಸಕಾಲದಲ್ಲಿ ಮಳೆಬಾರದೆ ಬೆಳೆ ಕಳೆದುಕೊಳ್ಳುವ ಪರಿಸ್ಥಿತಿ ಸಾರ್ವಜನಿಕ ಜೀವನದ ನನ್ನ ಕಾರ್ಯ ಶೈಲಿಯ ಮೇಲೆ ಪ್ರಭಾವಬೀರಿ, ನನ್ನ ಸಾಮಾಜಿಕ ಪ್ರಜ್ಞೆ ಎಚ್ಚರಗೊಳ್ಳಲು ಪ್ರಮುಖ ಕಾರಣಗಳಲ್ಲಿ ಒಂದು.

ಈ ಒಸ್ನೆಲೆಯಲ್ಲಿ ನಾನು ಸಾರ್ವಜನಿಕ ಜೀವನದಲ್ಲಿ ಸಕ್ರೀಯವಾಗಿ ಕೆಲಸ ಮಾಡುವ ಕಾಲಕ್ಕೆ ತುಮಕೂರು ಜಿಲ್ಲೆಯ ಸುಮಾರು ಆರು ಲಕ್ಷ ಎಕರೆ ಬರ ಪೀಡಿತ ಪ್ರದೇಶದ ಒಣಭೂಮಿಗೆ ನೀರು ಒದಗಿಸಲು ಕಾರ್ಯಗತವಾಗಬೇಕಾಗಿದ್ದ ಹೇಮಾವತಿ ನೀರಾವರಿ ಯೋಜನೆಯ ಅನುಷ್ಠಾನ, ಒಂದು ವಿಧದಲ್ಲಿ ಹೇಳುವವರು ಮತ್ತು ಕೇಳುವವರಿಲ್ಲದೆ ಅನಾಥ ಶಿಶುವಾಗಿತ್ತು. ಕರ್ನಾಟಕದ ನೀರಾವರಿ ಕ್ಷೇತ್ರದಲ್ಲಿ ಅನ್ಯಾಯದ ಪರಂಪರೆ ನಡೆದು ಬಂದಿದೆ ಎಂದು ಅಂಕಿ ಅಂಶಗಳ ಸಹಿತ, ಆಧಾರದ ಮೇಲೆ ನನಗೆ ಸಿಕ್ಕಿದ ಎಲ್ಲಾ ಸಂದರ್ಭದಲ್ಲೂ ಅತ್ಯಂತ ಎತ್ತರದ ಧ್ವನಿಯಲ್ಲಿ ಗಟ್ಟಿ ಮಾತಿನಿಂದ ಸ್ಪಷ್ಟಪಡಿಸಿದ್ದೇನೆ. ಈ ಎಲ್ಲಾ ನನ್ನ ಮನಸ್ಥಿತಿಯಿಂದಾಗಿ ನನ್ನ ಜೀವಿತ ಕಾಲದಲ್ಲಿ ಹೇಮಾವತಿ ನದಿ ಪಾತ್ರದ ಗೊರೂರು ಅಣೆಕಟ್ಟೆಯಿಂದ ಶಿಂಶಾನದಿ ಪಾತ್ರಕ್ಕೆ ನೀರು ಬರುವ ಯೋಜನೆಯ ಅನುಷ್ಠಾನದ ಪ್ರಕ್ರಿಯೆಯಲ್ಲಿ ಸುಮಾರು ಎರಡು ದಶಕಗಳಿಗೂ ಹೆಚ್ಚು ಕಾಲ ಪೂರ್ಣವಾಗಿ ತೊಡಗಿಸಿಕೊಂಡವನು ನಾನು. ೧೯೭೨ರ ಉಪ ಚುನಾವಣೆಯ ನಂತರ ನಾನು ವಿರೋಧ ಪಕ್ಷದ ಶಾಸಕನಾದರೂ ಅಂದಿನ ಆಡಳಿತ ಪಕ್ಷದ ಸರ್ಕಾರ ನನಗೆ ನೀಡಿದ ಒತ್ತಾಸೆ ಹಾಗೂ ಅಂದು ಕೆಲಸ ಮಾಡುತ್ತಿದ್ದ ಅಧಿಕಾರಿಗಳ ಉತ್ಸಾಹದಿಂದ ಪೂರ್ಣವಾಗಿ ನಾನು ಆ ಯೋಜನೆಯ ಅನುಷ್ಠಾನದ ಪ್ರಗತಿಯಲ್ಲಿ ತೊಡಗಿಸಿಕೊಂಡ ಕಾರಣದಿಂದ ರೇಷ್ಮೆ ಉದ್ಯಮದ ಬಗ್ಗೆ ನಿಗಾ ಮಾಡಲು ನಾನು ಪ್ರಯತ್ನ ಮಾಡಲಿಲ್ಲ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಈ ನನ್ನ ನಿರ್ಲಕ್ಷ್ಯ ನಡವಳಿಕೆಯಿಂದ ಉದ್ಯಮಕ್ಕೆ ಒಳಿತಾಯಿತೊ ಕೆಡುಕಾಯಿತೊ ಗೊತ್ತಿಲ್ಲ. ಆದರೆ ಅನೇಕ ಜನರ ದುಡಿಮೆ, ಶ್ರಮ, ಆಸಕ್ತಿ, ಅಭಿಲಾಷೆಗಳ ಫಲವಾಗಿ ಎರಡು ದಶಕಗಳಿಗೂ ಹೆಚ್ಚು ಕಾಲದ ನನ್ನ ಬದುಕಿನ ಆಸೆ ನೆರವೇರಿತು. ೧೯೭೪ರಲ್ಲಿ ಹೇಮಾವತಿ ನೀರು ಜಿಲ್ಲೆಗೆ ಹರಿದು ಬರುವಂತಾಯಿತು. ಗೊರೂರಿನಿಂದ ಹೇಮಾವತಿ ನೀರು ತುಮಕೂರು ಜಿಲ್ಲೆಗೆ ಹರಿದು ಬರುವಂತಾಗಲು ನಡೆದ ಘಟನೆಗಳು, ಬಂದ ಸಮಸ್ಯೆಗಳು ಅಷ್ಟೇ ಏಕೆ ಈ ಯೋಜನೆಯು ಕಾರ್ಯರೂಪಕ್ಕೆ ತರುವ ಸಂದರ್ಭದಲ್ಲಿ ಆದಂತಹ ಅಡ್ಡಿ ಆತಂಕಗಳು, ಪಟ್ಟಶ್ರಮ, ಕುಟಿಲತೆ, ಕಾರಸ್ಥಾನಗಳನ್ನು ಕುರಿತು ಬರೆಯುವ ಹಂಬಲವನ್ನು ಹೊತ್ತು ಬದುಕುತ್ತಿದ್ದೇನೆ. ಎಲ್ಲಾ ಸರಿಹೋದರೆ ಮುಂದಿನ ಮುಂಗಾರಿಗೆ ಹೇಮಾವತಿ ನೀರು ಯೋಜನೆಯ ಕೊನೆ ಹಂತವಾದ ಕುಣಿಗಲ್ ಕೆರೆಗೆ ತಲುಪುವ ಪೂರ್ಣ ನಂಬಿಕೆ ನನಗಿದೆ. ಅದಾದ ಮೇಲೆ ಈ ಯೋಜನೆಯ ಬಗ್ಗೆ ಸಮಗ್ರ ಬರವಣಿಗೆಯನ್ನು ನಾಡಿನ ಜನತೆಯ ಮುಂದೆ ತರಲು ಪ್ರಯತ್ನಿಸುತ್ತೇನೆ.

## ೧೨

ಇತ್ತೀಚಿನ ದಿನಗಳಲ್ಲಿ ರೇಷ್ಮೆ ಉದ್ಯಮ ಮತ್ತು ಅದರ ಸಮಸ್ಯೆಗಳ ಬಗ್ಗೆ ಉದ್ದೇಶಪೂರ್ವಕವಾಗಿ ಮೈ ಮರೆತು ನಾನು ನಿರ್ಲಕ್ಷ್ಯ ಮಾಡಲಿಲ್ಲ. ನಮಗೆ ಎಲ್ಲವನ್ನು ಕೊಟ್ಟ ಜನರ ಬದುಕಿನ ಆಸರೆಗೆ ಅತಿ ಮುಖ್ಯವಾದ ಸೌಲಭ್ಯವೊಂದನ್ನು ಪಡೆದುಕೊಳ್ಳುವ ಹೋರಾಟದಲ್ಲಿ ತೊಡಗಿಸಿಕೊಂಡಿದ್ದೆ. ಇದಕ್ಕೆ ಕಾರಣ ಏನು ಎಂದು ಓದುಗರ ಗಮನಕ್ಕೆ ತರುವುದು ನನ್ನ ಉದ್ದೇಶ. ಯಾವುದೇ ಒಬ್ಬ ರಾಜಕಾರಣಿಯ, ಚುನಾವಣೆಯ ಸೋಲು

ಅಥವಾ ಗೆಲುವು, ಅವನು ಮಾಡಿದ ಕೆಲಸ ಅಥವಾ ಬದುಕಿನ ಕಾರ್ಯಶೈಲಿ, ಒಂದು ಅಳತೆಗೋಲು ಆಗುವುದಿಲ್ಲ. ಅದಕ್ಕೆ ಬದಲಾಗಿ ಚುನಾವಣೆಯ ಸಂದರ್ಭದಲ್ಲಿ ಉದ್ಭವಿಸುವ ಭಾವನಾತ್ಮಕ ವಿಷಯಗಳು ಸೇರಿದಂತೆ ಅನೇಕ ಕ್ಷುಲ್ಲಕ ವಿಷಯಗಳು ಚುನಾವಣೆಯ ಫಲಿತಾಂಶದ ಮೇಲೆ ಪ್ರಭಾವ ಬೀರುತ್ತವೆ ಎನ್ನುವುದು ನನ್ನ ನಂಬಿಕೆ. ಈ ಒಂದು ಹಿನ್ನೆಲೆಯಲ್ಲಿ ಒಬ್ಬ ಪ್ರಜಾ ಪ್ರತಿನಿಧಿಯಾಗಿ ನಾನು ಎಲ್ಲವನ್ನು ಮಾಡಲಾಗದಿದ್ದರೂ ಮನಸ್ಸಿಗೆ ನೆಮ್ಮದಿ ತರುವಷ್ಟು ದುಡಿಮೆ. ಯಾರು ಬೆರಳು ತೋರದಂಥ ಬದುಕು, ಶತ್ರುಗಳು ಸೃಷ್ಟಿಯಾಗುವುದನ್ನು ಲೆಕ್ಕಿಸದೆ ಅಳವಡಿಸಿಕೊಂಡ ನಿಷ್ಠುರದ ಬಾಳವೆ ಬದುಕಿದಾಗ್ಯೂ ೧೯೯೪ರ ವಿಧಾನಸಭೆ ಚುನಾವಣೆಯಲ್ಲಿ ನಾನು ಸೋಲಬೇಕಾಯಿತು.

ಕರ್ತವ್ಯ ನಿರ್ವಹಣೆಯ ನಿರ್ಲಕ್ಷ್ಯದಿಂದ ಆಗುವ ಸೋಲಿಗಾಗಿ ನಾನು ಚಿಂತಿಸುವೆನೆ ಹೊರತು, ಚುನಾವಣೆ ಸೋಲಿನಿಂದ ನಾನು ಎಂದೂ ಧೃತಿ ಕೆಟ್ಟವನಲ್ಲ. ಇಂತಹ ಸಾವಿರ ಸೋಲುಗಳಿಗೆ ಸಿದ್ಧನೆ ಹೊರತು ಒಂದೇ ಒಂದು ಶರಣಾಗತಿಗೆ ಸಿದ್ಧನಿಲ್ಲ. ಇದು ನನ್ನ ನಿಲುವು. ಇದನ್ನು ಯಾರಾದರೂ ಹಟಮಾರಿತನವೆಂದೂ, ದುರಹಂಕಾರವೆಂದೂ ವ್ಯಾಖ್ಯಾನ ಮಾಡಿದರೆ, ನನ್ನ ಅಭ್ಯಂತರವಿಲ್ಲ. ಯಾರನ್ನೊ ಖುಷಿ ಪಡಿಸಿ ಅಥವಾ ಯಾರನ್ನೊ ಮೆಚ್ಚಿಸಿ ಬದುಕಲು ನಾನು ಸಿದ್ಧನಿಲ್ಲ. ಈ ನನ್ನ ದೃಢ ನಿಲುವಿನಿಂದಾಗಿ, ಸಾರ್ವಜನಿಕ ಜೀವನದಲ್ಲಿ ಅನೇಕ ಸಂದರ್ಭಗಳಲ್ಲಿ ಬೆಲೆ ತೆರಬೇಕಾಯಿತು. ಅದರ ಬಗ್ಗೆಯೂ ನನಗೆ ಚಿಂತೆಯಿಲ್ಲ, ಕಾರಣ ಇದು ಇಂದಿನ ಪರಿಸ್ಥಿತಿಯಲ್ಲಿ ಅನಿವಾರ್ಯ.

ಪರಿಸ್ಥಿತಿ ಹೀಗಿರುವಾಗ ೧೯೯೪ರಲ್ಲಿ ಆಡಳಿತಕ್ಕೆ ಬಂದ ರಾಜ್ಯ ಸರ್ಕಾರ, ರೇಷ್ಮೆ ಉದ್ಯಮದ ಪ್ರವರ್ಧಮಾನಕ್ಕೆ ಪ್ರಯತ್ನಿಸುವುದಿರಲಿ, ಆ ಉದ್ಯಮದ ಸಾಮಾನ್ಯ ಚಟುವಟಿಕೆಗಳನ್ನು ವ್ಯವಸ್ಥಿತವಾಗಿ ನಡೆಸುವ ಕಾರ್ಯ ಕೈಗೊಳ್ಳಲಿಲ್ಲ. ಅನೇಕ ವರ್ಷಗಳು ಸಾರ್ವಜನಿಕ ಜೀವನದಲ್ಲಿ ನನ್ನೊಡನೆ ಕೆಲಸ ಮಾಡಿದ ನಮ್ಮವರೇ ರೇಷ್ಮೆ ಖಾತೆ ರಾಜ್ಯಸಚಿವರಾಗಿದಾಗ್ಯೂ ಇಡೀ ರಾಜ್ಯದ ರೇಷ್ಮೆ ಪ್ರಗತಿ ಹೋಗಲಿ, ತಮ್ಮದೇ ಕ್ಷೇತ್ರವನ್ನು ಒಳಗೊಂಡಿರುವ ಮೈಸೂರು ಬಿತ್ತನೆ ವಲಯದಲ್ಲಾದರೂ ಯಾವುದೇ ಪ್ರಮುಖ ಸಾಧನೆ ಮಾಡಲು ವಿಫಲರಾದರು ಅನ್ನುವ ನನ್ನ ಅಭಿಪ್ರಾಯ ರಾಜಕೀಯ ಪ್ರೇರಿತವಾದುದಲ್ಲ ಎಂದು ಸ್ಪಷ್ಟಪಡಿಸಲು ಇಚ್ಛೆಪಡುತ್ತೇನೆ. ಅನೇಕ ವರ್ಷಗಳಿಂದ ಆಗಾಗ್ಗೆ ಪರಿಷ್ಕರಿಸಿಕೊಂಡು ಬಂದಿರುವ ಬಹುಸಂತತಿ ಬಿತ್ತನೆ ಗೂಡಿನ ಬೋನಸ್ ಹಣವನ್ನು ಇಪ್ಪತ್ತೈದು ರೂ. ಗಳಿಂದ ಹೆಚ್ಚಿಸುವಲ್ಲಿನ ವಿಫಲತೆ, ಬಿತ್ತನೆ ಗೂಡಿನ ಕನಿಷ್ಟ ಬೆಲೆಯಲ್ಲಿ ಸ್ವಲ್ಪವೂ ಹೆಚ್ಚಳ ಮಾಡಲಾಗದ ಅಸಹಾಯಕತೆ ಬೆಳೆಗಾರನು ಉತ್ತಮ ಬೆಳೆ ಪಡೆಯಲು ಅವಶ್ಯಕವಾದ ರೋಗರಹಿತ ಮೊಟ್ಟೆಗಳನ್ನು ಒದಗಿಸುವುದರಲ್ಲಿ ಇಲಾಖೆಯ ಅಸಮರ್ಥ್ಯ, ರಾಜ್ಯದಲ್ಲಿ ಒಂದು ಕಾಲಕ್ಕೆ ಶೇ. ೬೫ ಇದ್ದ ಮೊಟ್ಟೆ ಇಳುವರಿ ಕೇವಲ ಶೇ. ೧೮ಕ್ಕೆ ತಲುಪಿದ ದುಃಸ್ಥಿತಿ, ಅದೇ ರೀತಿ ರೇಷ್ಮೆಗೂಡಿನ ಶೇಕಡವಾರು ಇಳುವರಿಯಲ್ಲಿ ಆದ ಅಧಃಪತನ. ಈಗ ಇರುವ ತಳಿಗಳ ಜೊತೆಗೆ ಹೊಸ ತಳಿಯನ್ನು ಪರಿಷ್ಕರಿಸಲು ಪ್ರಯತ್ನಪಟ್ಟಾಗ್ಯೂ ಯಶಸ್ವಿಯಾಗದ ಸ್ಥಿತಿ, ಇವೆಲ್ಲಕ್ಕೂ ಮೇಲಾಗಿ ಬಿಗಿತಪ್ಪಿದ ಆಡಳಿತದಲ್ಲಿ ವಿಸ್ತಾರಗೊಂಡ ಭ್ರಷ್ಟತೆ, ಅಧಿಕಾರಿಗಳ

ನಿಸ್ಸೀಮ ನಿರ್ಲಕ್ಷ್ಯ, ಇವೆಲ್ಲಕ್ಕೂ ಕಳಶಪ್ರಾಯವಾದ ಅಧ್ಯಕ್ಷತೆ ಇಲಾಖೆಯ ಅಧಃಪತನಕ್ಕೆ ನಾಂದಿಯಾಯಿತು. ಅನೇಕ ವರ್ಷಗಳು ಒಂದಾಗಿ ಬೆಳೆದ, ಬದುಕಿದ, ನನ್ನೊಡನೆ ಹೋರಾಡಿದ ಹಿರಿಯರೊಬ್ಬರು ಈ ರಾಜ್ಯದ ಮುಖ್ಯಮಂತ್ರಿ, ಕಿರಿಯರೊಬ್ಬರು ರೇಷ್ಮೆ ಇಲಾಖೆ ಸಚಿವರು. ಆದ ರಾಜಕೀಯ ವ್ಯತ್ಯಾಸದಿಂದಾಗಿ ಇದೆಲ್ಲವನ್ನು ಕಂಡರೂ ಕಾಣದಂತೆ, ತಿಳಿದರೂ ತಿಳಿಯದಂತೆ ಈ ವಿಷಯದಲ್ಲಿ ನನ್ನೆದೆಯ ಧ್ವನಿಯನ್ನು ಕಳೆದುಕೊಂಡು ಮೂಕಪ್ರೇಕ್ಷಕನಾದೆ. ಕಾರಣ ನಾನೀಗಾಗಲೆ ಹೇಳಿರುವಂತೆ ನನ್ನ ಯಾವುದೆ ಮಾತಿಗೆ ಅಥವಾ ನಡವಳಿಕೆಗಳಿಗೆ ರಾಜಕೀಯ ಪ್ರೇರಣೆ ಕಾರಣವೆನ್ನುವ ಅಪವಾದನೆಯ ಚಿಂತೆಯಿಂದ. ಯಾವುದನ್ನು ಸರಿಮಾಡಲಾಗದ, ಎಲ್ಲವನ್ನು ನೋಡಿಕೊಂಡು ಸುಮ್ಮನಿರಲಾಗದ ವಿಚಿತ್ರ ಪರಿಸ್ಥಿತಿ ನನ್ನದಾಯಿತು.

ಇದಾದ ಮೇಲೆ ರಾಜ್ಯಮಟ್ಟದಲ್ಲಿ ಆದ ಅಧಿಕಾರ ಹಸ್ತಾಂತರದಿಂದಲೂ ರೇಷ್ಮೆ ಇಲಾಖೆಯಲ್ಲಿ ಇದ್ದಂತಹ ಪರಿಸ್ಥಿತಿ ಬದಲಾವಣೆಯಾಗುವ ಬದಲು ಇನ್ನು ಕೆಟ್ಟ ಪರಿಸ್ಥಿತಿ ಸೃಷ್ಟಿಯಾಯಿತು. ಹಿಂದಿದ್ದ ಸಚಿವರ ವಿಷಯದಲ್ಲಿ ರಾಜಕೀಯ ಪ್ರೇರಣೆಯಿಂದ ಮಾತನಾಡುತ್ತಿದ್ದಾನೆ ಎನ್ನುವ ಅಪವಾದನೆಯ ಭಯ ಅಡ್ಡಿಯಾದರೆ, ಇಲ್ಲಿ ರೇಷ್ಮೆ ಖಾತೆ ಹೊಸ ಸಚಿವರ ಮತ್ತು ನನ್ನ ವೈಯಕ್ತಿಕ ಬಂಧುತ್ವದ ಮುಜುಗರ ಸ್ವಲ್ಪ ಕಾಲ ನನ್ನನ್ನು ಸುಮ್ಮನಿರಿಸುತ್ತೇನೋ ಎನಿಸುತ್ತದೆ. ಅಬ್ಬಾ! ಒಬ್ಬ ವ್ಯಕ್ತಿ ಎಷ್ಟೆ ನಿಷ್ಠುರನಾದರು, ನಿರ್ವಿಕಲ್ಪನಾದರು ಭಯ ಮತ್ತು ಬಾಂಧವ್ಯ ಆತನ ನಡವಳಿಕೆಯನ್ನು ನಿಯಂತ್ರಿಸಬಲ್ಲವು ಎಂಬುದನ್ನು ಜ್ಞಾಪಿಸಿಕೊಂಡಾಗ, ನನ್ನ ಪಾಪ ಪ್ರಜ್ಞೆಗಾಗಿ ನಾನೇ ನಾಚಿಕೆ ಪಡಬೇಕಾಗುತ್ತದೆ ಎಂದರೆ ಅತಿಶಯೋಕ್ತಿಯಾಗಲಾರದು.

೧೮

ಇಲಾಖೆಯ ಪರಿಸ್ಥಿತಿ ಇದಾದರೆ, ಇಲಾಖೆಯು ಮತ್ತು ಸರ್ಕಾರದ ಒಪ್ಪುತಪ್ಪುಗಳನ್ನು ಪರಿಶೀಲಿಸಿ ಸಂದರ್ಭ ಬಂದರೆ ಹೆಚ್ಚರಿಸಿ, ಅನಿವಾರ್ಯವಾದರೆ ಪ್ರತಿಭಟಿಸಿ ಕೆಲಸ ಮಾಡುವ ಉದ್ದೇಶಕ್ಕಾಗಿ ಇಲಾಖೆಗಿಂತಲೂ ಮೊದಲೆ ಸ್ಥಾಪನೆಯಾಗಿದ್ದ 'ಕರ್ನಾಟಕ ರೇಷ್ಮೆ ಸಂಘ' ನಾನು ಅಧ್ಯಕ್ಷಗಿರಿಗೆ ರಾಜೀನಾಮೆ ಕೊಟ್ಟ ಮೇಲೆ ಸಂಪೂರ್ಣವಾಗಿ ನಿಷ್ಕ್ರಿಯವಾದುದು ಮತ್ತೊಂದು ದುರಂತ. ಇಲಾಖೆಯ ಮತ್ತು ಸರ್ಕಾರದ ನ್ಯೂನತೆ ಬಗ್ಗೆ ವಿಚಾರಿಸಿ ಪ್ರತಿಭಟಿಸಬೇಕಾದ ಈ ಸಂಸ್ಥೆಯ ಕೆಲವರು ಅಧಿಕಾರಸ್ಥರ ಜೊತೆ ಹೊಂದಿಕೊಂಡು ಸ್ವಾರ್ಥ ಸಾಧನೆಗಾಗಿ ಅವರನ್ನು ಓಲೈಸುವ ಪ್ರವೃತ್ತಿಯಿಂದಾಗಿ, ಇಲಾಖೆಯ ಉದ್ಯಮದ ಸರ್ವತೋಮುಖ ವ್ಯವಸ್ಥಿತ ಬೆಳವಣಿಗೆಗೆ ಶ್ರಮಿಸಿದ ಈ ಸಂಸ್ಥೆಯಿಂದಲೂ ನಮಗೆ ಯಾವ ಪ್ರಯೋಜನವಾಗಲಿಲ್ಲ.

ಜನ ಪ್ರತಿನಿಧಿಗಳು ಅಧಿಕಾರ ಸ್ಥಾನದಿಂದ ಹದಗೆಟ್ಟ ಪರಿಸ್ಥಿತಿಯನ್ನು ಸರಿಮಾಡಲಾಗದಂತಹ ಸಂದರ್ಭದಲ್ಲಿ ಇಲಾಖಾ ಮುಖ್ಯಸ್ಥರು ಮತ್ತು ಅವರ ಕೈಕೆಳಗಿನ ಅಧಿಕಾರಿಗಳು ಮತ್ತು ನೌಕರರು ಪರಿಸ್ಥಿತಿಯನ್ನು ಸುಧಾರಿಸುವಲ್ಲಿ ಸಫಲರಾಗಲಿಲ್ಲ. ಅನೇಕ

ವರ್ಷಗಳು ಅತ್ಯಂತ ಶ್ರದ್ಧೆಯಿಂದ ಅರ್ಪಣ ಮನೋಭಾವದಿಂದ ದುಡಿದ ಇಲಾಖೆಯ ಅನೇಕ ಹಿರಿಯ ಅಧಿಕಾರಿಗಳು ಈ ಅವಧಿಯಲ್ಲಿ ನಿವೃತ್ತರಾದದ್ದು, ಎಲ್ಲಾ ಕ್ಷೇತ್ರದಲ್ಲೂ ಆದ ಹಾಗೆ ಈ ಕ್ಷೇತ್ರದಲ್ಲಿಯೂ ವ್ಯಾಪಕವಾಗಿ ಹರಡಿದ್ದ ಭ್ರಷ್ಟತೆ ಮತ್ತು ಬೇಜವಾಬ್ದಾರಿ ನಡವಳಿಕೆಯಿಂದ ಪ್ರಭಾವಿತರಾದ ಹೊಸ ಪೀಳಿಗೆಯ ಅಧಿಕಾರಿಗಳು, ಇಲಾಖೆಯ ಅಸಮರ್ಥ ನಿರ್ವಹಣೆಗೆ ನಾಂದಿ ಹಾಡಿದರು. ಈ ಮೇಲಿನ ಕಾರಣಗಳು ಸೇರಿದಂತೆ ಇನ್ನು ಅನೇಕ ಕಾರಣಗಳಿಂದಾಗಿ ಹದಗೆಡುತ್ತಿರುವ ಪರಿಸ್ಥಿತಿಯನ್ನು ನೋಡಿಕೊಂಡು ತೊಳಲಾಡುತ್ತಿರುವ ನನಗೆ, ಇಂದು ನಾನಿರುವ ಸ್ಥಿತಿಗೆ ತಲುಪಲು ಕಾರಣರಾದ ನನ್ನ ಜನರ ಮಧ್ಯದಲ್ಲಿಯೇ ಬದುಕಬೇಕೆಂಬ ತೀರ್ಮಾನದಿಂದಾಗಿ, ಬೆಂಗಳೂರಿನ ಕೆಲವು ವರ್ಷಗಳ ನನ್ನ ವಾಸವನ್ನು ಕೊನೆಗೊಳಿಸಿ, ನಾನು ಕುಣಿಗಲ್‌ನಲ್ಲಿಯೇ ವಾಸಮಾಡುತ್ತಿರುವುದರಿಂದ ಪ್ರತಿನಿತ್ಯ ಸ್ಥಳೀಯವಾಗಿ ಅಂದರೆ ಮೈಸೂರು ಬಿತ್ತನೆ ವಲಯದ ಬೆಳೆಗಾರರ ಬವಣೆಗಳನ್ನು, ಬೇಡವೆಂದರೂ ಗಮನಿಸಬೇಕಾದ ಅನಿವಾರ್ಯತೆ ನನ್ನದಾಯಿತು.

೧೯

ಈಗಿನ ಸರ್ಕಾರ ಅಧಿಕಾರಕ್ಕೆ ಬಂದ ದಿನದಿಂಲೂ ಬೋನಸ್ ದರವನ್ನು ಗೂಡಿನ ಕನಿಷ್ಟ ಬೆಲೆಯನ್ನು ಪರಿಷ್ಕರಿಸದೆ ಇರುವುದು, ರೋಗರಹಿತ ಮೊಟ್ಟೆಗಳನ್ನು ಒದಗಿಸುವಲ್ಲಿ ವಿಫಲತೆ. ಈ ಮೂಲ ಸಮಸ್ಯೆಗಳ ಜೊತೆಗೆ ಹೊಸದಾಗಿ ನಮ್ಮನ್ನು ಕಾಡಲು ಪ್ರಾರಂಭಿಸಿರುವ ಹಿಪ್ಪುನೇರಳೆ ಎಲೆಗಳಿಗೆ ತಗಲುವ ರೋಗದ ಹಾವಳಿ, ಅದರ ನಿಯಂತ್ರಣದಲ್ಲಿ ವಿಫಲತೆ, ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಗಳಲ್ಲಿ ಹಿಂದೆ ಇದ್ದಂತಹ ನೇಮ ಮಾಯವಾಗಿ ಬೆಳೆಗಾರನಿಗೆ ವರಕೊಡುವ ದೇವಾಲಯಗಳಾಗಬೇಕಾಗಿದ್ದ ಈ ಬಿತ್ತನೆ ಕೋಠಿಗಳು, ಶಾಪಕೊಡುವ ದೇವಾಲಯಗಳಾದ್ದು ವರ್ಣಿಸಲು ಅಸಾಧ್ಯ. ಅವ್ಯವಹಾರಗಳ ಭ್ರಷ್ಟತೆಯ ಕೇಂದ್ರವಾಗಿ ಗೂಡಿನ ಮಾರುಕಟ್ಟೆಗಳು ಮಾರ್ಪಾಡಾದದ್ದು ಇಡೀ ಕುಟುಂಬದ ಶ್ರಮದಿಂದ ಬೆಳೆದ ಗೂಡನ್ನು ಕೆ. ಜಿ. ಯೊಂದಕ್ಕೆ ೧೫ ರಿಂದ ೨೦ ರೂ. ಗಳಲ್ಲಿ ಮಾರಬೇಕಾದ ಪರಿಸ್ಥಿತಿ ಒದಗಿಬಂದದ್ದು, ಈ ವಿಷಯದಲ್ಲಿ ನನ್ನ ಸುಪ್ತ ಚೇತನವನ್ನು ಎಚ್ಚರಿಸಿ ಮತ್ತೊಮ್ಮೆ ಈ ಸಮಸ್ಯೆಗಳ ಕಡೆಗೆ ಗಮನಹರಿಸುವಂತೆ ಮಾಡಿತು. ಈ ಸಮಯಕ್ಕೆ ರಾಜ್ಯ ರಾಜಕಾರಣದ ಆಡಳಿತ ಪಕ್ಷದಲ್ಲಿ ಆದ ಆಂತರೀಕ ಕಲಹದಿಂದಾಗಿ ಇಲಾಖೆಯ ನಿರ್ಲಕ್ಷ್ಯಕ್ಕೊಳಪಟ್ಟ ಮಂತ್ರಿ ಸಂಪೂರ್ಣ ಅಸಹಾಯಕರಾಗಿರುವಾಗ, ಕೇವಲ ಮಾತನಾಡುವ ಯಂತ್ರದಂತೆ ವರ್ತಿಸುವ ಇಲಾಖಾ ಮುಖ್ಯಸ್ಥರಿರುವಾಗ ಈ ಸಮಸ್ಯೆಗಳನ್ನು ಬಗೆಹರಿಸಲು ಮತ್ತು ಸಲ್ಲಬೇಕಾದ ಸವಲತ್ತುಗಳನ್ನು ಪಡೆದುಕೊಳ್ಳಲು ಸಂಘರ್ಷ ಅನಿವಾರ್ಯ ಎನ್ನುವುದು ಇತ್ತೀಚಿನ ದಿನಗಳ ಅನುಭವವಾದ್ದರಿಂದ ಪ್ರಥಮ ಹಂತವಾಗಿ ಮೈಸೂರು ಬಿತ್ತನೆ ವಲಯದ ಬೆಳೆಗಾರರ ಸಮಸ್ಯೆಯನ್ನು ಚರ್ಚಿಸಿ ಕ್ರಮ ಕೈಗೊಳ್ಳಲು ಕುಣಿಗಲ್‌ನಲ್ಲಿ ತಾ. ೧೮-೧೧-೯೮ ರಂದು ಮೈಸೂರು ಬಿತ್ತನೆ ವಲಯದ ರೈತರ ಸಭೆ ನಡೆಸಲು ನಿರ್ಧರಿಸಿ ಕರಪತ್ರಗಳನ್ನು ಮುದ್ರಿಸಿ ಹಂಚಿದೆವು.

## ೨೦

ಇದೇ ಸಮಯದಲ್ಲಿ ಅನೇಕ ವರ್ಷಗಳಿಂದ ಕೇಂದ್ರ ಸರ್ಕಾರದ ನಿರ್ಬಂಧಿತ ರೇಷ್ಮೆ ಆಮದು ನೀತಿಯನ್ನು ಪ್ರಬಲವಾಗಿ ವಿರೋಧಿಸುತ್ತಿದ್ದ ನನಗೆ ದೆಹಲಿಯ ಹೊಸ ಕರ್ನಾಟಕ ಭವನದಲ್ಲಿ ಕುಳಿತು ವೃತ್ತಪತ್ರಿಕೆಯನ್ನು ಓದುವಾಗ, ಆಂಗ್ಲ ದಿನಪತ್ರಿಕೆಯಲ್ಲಿ ತಲೆಬರಹವಾಗಿ ಮುದ್ರಿತವಾಗಿದ್ದ ಸುದ್ದಿಯೊಂದು ಬೆಚ್ಚಿ ಬೀಳಿಸಿತು. ಮುದ್ರಿತವಾಗಿದ್ದ ಸುದ್ದಿಯ ಪ್ರಕಾರ ಭಾರತೀಯ ಜನತಾ ಪಕ್ಷದ ಕೇಂದ್ರ ಸರ್ಕಾರದ ವಾಣಿಜ್ಯ ಸಚಿವಾಲಯವು ೮-೧೦-೯೮ ರಂದು ಒಂದು ಆಜ್ಞೆಯನ್ನು ಹೊರಡಿಸಿ, ಈ ದೇಶಕ್ಕೆ ಯಾರು ಬೇಕಾದರು, ಎಷ್ಟು ಬೇಕಾದರೂ ಯಾವುದೇ ದೇಶದಿಂದ ಎಷ್ಟು ಬೆಲೆಗಾದರೂ ಕಚ್ಚಾ ರೇಷ್ಮೆಯನ್ನು ಪರವಾನಿಗೆ ಇಲ್ಲದೆ ಆಮದು ಮಾಡಿಕೊಳ್ಳಬಹುದು ಎಂಬುವ ಆಜ್ಞೆಯನ್ನು ಹೊರಡಿಸಲಾಗಿದೆ ಎಂಬುದಾಗಿತ್ತು.

ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷನಾಗಿ, ಕರ್ನಾಟಕ ರಾಜ್ಯ ರೇಷ್ಮೆ ಖಾತೆ ಸಚಿವನಾಗಿ ಮತ್ತು ಈ ಉದ್ಯಮದ ಸರ್ವತೋಮುಖ ಅಭಿವೃದ್ಧಿಯ ಹಂಬಲ ಹೊತ್ತವನಾದ ನಾನು ಕೇಂದ್ರ ಸರ್ಕಾರ ಕಚ್ಚಾ ರೇಷ್ಮೆಯ ನಿರ್ಬಂಧಿತ ಆಮದು ನೀತಿಯನ್ನು ಎಷ್ಟು ಕಠಿಣವಾಗಿ ವಿರೋಧಿಸಿದ್ದೇನೆ ಎನ್ನುವುದು ಈ ನಾಡಿನ ಜನತೆಗೆ ನಿಚ್ಚಳವಾಗಿ ಗೊತ್ತಿರುವ ವಿಷಯ. ನಿರ್ಬಂಧಿತ ಆಮದಿನಿಂದಲೆ ರಾಷ್ಟ್ರದ ರೇಷ್ಮೆ ಉದ್ಯಮದ ಪ್ರಗತಿ ಕುಂಠಿತವಾಗಿದೆ ಎಂದು ನಂಬಿದ್ದ, ಪ್ರತಿಪಾದಿಸಿದ ನನಗೆ, ಸ್ವದೇಶಿ ಮಾತನಾಡುವ ಭಾರತೀಯ ಜನತಾ ಪಕ್ಷ ಸರ್ಕಾರದ ಮುಕ್ತ ರೇಷ್ಮೆ ಆಮದು ನೀತಿಯ ವಿದೇಶಿ ವ್ಯಾಮೋಹದ ಇಬ್ಬಂದಿತನ ನನ್ನನ್ನು ಬೆಚ್ಚಿ ಬೀಳುವಂತೆ ಮಾಡಿತು. ಅಲ್ಲದೆ ರಾಷ್ಟ್ರದ ಈ ಉದ್ಯಮದ ಸರ್ವನಾಶಕ್ಕೆ ನಾಂದಿಯಾಗಲಿರುವ ಈ ತೀರ್ಮಾನವನ್ನು ತೆಗೆದುಕೊಂಡ ಕೇಂದ್ರ ವಾಣಿಜ್ಯ ಸಚಿವರು ಹಾಗು ಕಾರ್ಯದರ್ಶಿಗಳು ಕನ್ನಡ ನಾಡಿನ ಹೆಮ್ಮೆಯ ಪುತ್ರರು ಎಂದು ಜ್ಞಾಪಿಸಿಕೊಂಡು 'ಹರಕೊಲ್ಲಲ್ ಪರಕಾಯ್ವನೆ' ಎಂದು ನಮಗೆ ತಿಳಿಸಿದ ದಾರ್ಶನಿಕ ಮಾತನ್ನು ಮೆಲುಕು ಹಾಕುತ್ತ ಮಲಗಿದೆ. ಇನ್ನು ಮೂರು ದಿನಗಳು ಮುಂದುವರಿಸಬೇಕಾಗಿದ್ದ ನನ್ನ ಕಾರ್ಯಕ್ರಮಗಳನ್ನು ಮೊಟಕುಗೊಳಿಸಿ, ಕೇಂದ್ರ ವಾಣಿಜ್ಯ ಸಚಿವಾಲಯದಿಂದ, ಕರ್ನಾಟಕ ರಾಜ್ಯದ ಸುಮಾರು ೬೦-೭೦ ಲಕ್ಷ ಜನರ ಬದುಕಿಗೆ ಆಧಾರವಾಗಿರುವ ಈ ಉದ್ಯಮವನ್ನು ನಾಶಮಾಡಿ ದೆಹಲಿಯ ದೊರೆಗಳ ಸುತ್ತ ಇರುವ ಕೇವಲ ಬೆರಳೆಣಿಕೆಯಷ್ಟು ಜನ ವರ್ತಕರ ಹಿತ ಕಾಪಾಡುವ ದೃಷ್ಟಿಯಿಂದ ಹೊರಡಿಸಿರುವ ಈ ಅನಿಷ್ಟ ಆಜ್ಞೆಯ ನಕಲನ್ನು ಪಡೆದುಕೊಂಡು ಬೆಂಗಳೂರಿಗೆ ಹಿಂದಿರುಗಿದೆ. ಬೇರೆ ದೇಶದಿಂದ ರೇಷ್ಮೆ ಆಮದು ಮಾಡಿಕೊಳ್ಳುವ ದುಷ್ಪರಿಣಾಮದ ಬಗ್ಗೆ ಈ ಪುಸ್ತಕದಲ್ಲಿ ಈಗಾಗಲೇ ಸವಿಸ್ತಾರವಾಗಿ ತಿಳಿಸಿದ್ದೇನೆ. ಆದ್ದರಿಂದ ಪುನಃ ರೇಷ್ಮೆ ಆಮದಿನಿಂದ ಉದ್ಯಮದ ಮೇಲೆ ಆಗುವ ದುಷ್ಪರಿಣಾಮದ ಬಗ್ಗೆ ಪುನಃರುಚ್ಚಿಸುವುದಿಲ್ಲ.

ಕೇಂದ್ರ ಸರ್ಕಾರ ಈ ನೀತಿಯನ್ನು ಹಿಂದೆ ಕರ್ನಾಟಕ ರಾಜ್ಯದ ಎಲ್ಲಾ ಸರ್ಕಾರದ ಎಲ್ಲಾ ಪಕ್ಷದ ಎಲ್ಲಾ ಮುಖ್ಯ ಮಂತ್ರಿಗಳು, ಈಗ ಮುಕ್ತ ಆಮದು ನೀತಿಗೆ ಮುಕ್ತವಾಗಿ ಒಪ್ಪಿಗೆ ಕೊಟ್ಟಿರುವ ಮಾನ್ಯ ಶ್ರೀ ರಾಮಕೃಷ್ಣ ಹೆಗಡೆಯವರು ಸೇರಿದಂತೆ ಎಲ್ಲರೂ ವಿರೋಧಿಸಿದ್ದಾರೆ.

ಅದೇ ಮಾನ್ಯ ಹೆಗೆಡೆಯವರು ಈಗ ಕೇಂದ್ರ ವಾಣಿಜ್ಯ ಸಚಿವರಾಗಿ ಈ ನಿರ್ಧಾರ ತೆಗೆದುಕೊಂಡಿರುವುದನ್ನು ನೋಡಿದರೆ, ತಾವು ಪ್ರತಿಪಾದಿಸಿದ ನೀತಿಗಳನ್ನು ನಂಬಿದ ಸಿದ್ಧಾಂತಗಳನ್ನು ಅಪಾರವಾಗಿ ಪ್ರಚಾರಗೊಳಿಸಿದ ಮೌಲ್ಯಗಳನ್ನು ಸ್ವಾರ್ಥಕ್ಕಾಗಿಯೋ, ಸ್ವಜನ ಪಕ್ಷಪಾತದಿಂದಲೋ ಅಥವಾ ರಾಜಕೀಯ ಒತ್ತಡಗಳ ಕಾರಣಕ್ಕಾಗಿಯೋ ಒಬ್ಬ ವ್ಯಕ್ತಿ ಹೇಗೆ ತಿಲಾಂಜಲಿ ಇಡಬಲ್ಲ ಎನ್ನುವುದಕ್ಕೆ ಇದು ನಿದರ್ಶನವಾಗಿದೆ.

ರಾಜ್ಯದ ರೇಷ್ಮೆ ಉದ್ಯಮದ ಬೆಳವಣಿಗೆಯಲ್ಲಿ ಆದ ಅಧಃಪತನ, ಕರ್ನಾಟಕ ರೇಷ್ಮೆ ಸಂಘದ ನಿಷ್ಕ್ರಿಯತೆ ಮತ್ತು ಕೇಂದ್ರ ಸರ್ಕಾರದ ಮುಕ್ತ ರೇಷ್ಮೆ ಆಮದು ನೀತಿ, 'ರೇಷ್ಮೆ ರಾಜ' ನೆಂದು ನನ್ನ ಜನರು ನನಗೆ ಕೊಟ್ಟಿರುವ ಬಿರುದಾಂಕಿತನಾಗಿಯೂ ರೇಷ್ಮೆ ಉದ್ಯಮದ ಬಗ್ಗೆ ಸ್ವಲ್ಪ ಕಾಲ ದೂರವಿದ್ದ ನಾನು ಮತ್ತೊಮ್ಮೆ ಪೂರ್ಣ ಪ್ರಮಾಣದಲ್ಲಿ ಈ ಉದ್ಯಮದ ಸಮಸ್ಯೆಗಳಿಗೆ ತೊಡಗಿಸಿಕೊಳ್ಳಲೇಬೇಕಾಯಿತು.

ಇದರ ಪರಿಣಾಮವಾಗಿ ಕರ್ನಾಟಕ ರೇಷ್ಮೆ ಸಂಘದ ಎಲ್ಲಾ ಸದಸ್ಯರನ್ನು ನನ್ನ ಬೆಂಗಳೂರಿನ ಖಾಸಗಿ ಕಚೇರಿಯಲ್ಲಿ ಸಭೆ ಕರೆದು ಸಂಘವನ್ನು ಸಕ್ರಿಯಗೊಳಿಸುವ ಬಗ್ಗೆ ಇರುವ ಅನಿವಾರ್ಯತೆಯನ್ನು ಪ್ರಸ್ತಾಪಿಸಿದೆ. ಇದಕ್ಕಾಗಿ ನಾನು ಮತ್ತೆ ಈ ಸಂಘದ ಅಧ್ಯಕ್ಷನಾಗಿ ಮುಂದುವರಿಯಲು ಒಪ್ಪಿಗೆ ಕೊಡುವ ಬೆಲೆ ತೆರಬೇಕಾಯಿತು. ನಮ್ಮ ಒಣಪ್ರತಿಷ್ಠೆ ಮತ್ತು ಜನರ ಕೆಲಸಗಳಲ್ಲಿ, ಆಯ್ಕೆ ಮಾಡಬೇಕಾದಾಗ, ಒಣ ಪ್ರತಿಷ್ಠೆಯನ್ನು ಒತ್ತಟ್ಟಿಗಿಟ್ಟು ಜನರ ಕೆಲಸವನ್ನೆ ಆರಿಸಿಕೊಳ್ಳಬೇಕಾಯಿತು. ಹಾಲಿ ಸಚಿವ ಸಂಪುಟದಲ್ಲಿ ಬಹುತೇಕ ಆತ್ಮೀಯ ಸ್ನೇಹಿತರಿದ್ದಾಗ್ಯೂ, ವಿಧಾನಸೌಧದ ಮೆಟ್ಟಿಲು ತುಳಿಯದಿದ್ದ ನಾನು ಕರ್ನಾಟಕ ರೇಷ್ಮೆ ಸಂಘದ ಅಧ್ಯಕ್ಷನಾಗಿ ಮಂದುವರೆಯಲು ಒಪ್ಪಿಕೊಂಡ ಪರಿಣಾಮವಾಗಿ ದಿನಾಂಕ ೨೫.೧೧.೯೮ರಂದು ಹದಿನೈದು ವರ್ಷಗಳು ಆದ ಮೇಲೆ ಬಹು ಅಂತಸ್ತುಗಳ ಕಟ್ಟಡದಲ್ಲಿರುವ ರೇಷ್ಮೆ ನಿರ್ದೇಶನಾಲಯದಲ್ಲಿ ನಡೆದ ರೇಷ್ಮೆ ಸಂಘದ ಸಭೆಯಲ್ಲಿ ಭಾಗವಹಿಸಲು ಹೋಗಬೇಕಾಯಿತು. ದೀರ್ಘ ಚರ್ಚೆಯ ನಂತರ ನಿದ್ರಾವಸ್ಥೆಯಲ್ಲಿರುವ ಸಂಘವನ್ನು ಎಚ್ಚರಗೊಳಿಸಲು ಎಲ್ಲಾ ಕ್ರಮ ತೆಗೆದುಕೊಳ್ಳಬೇಕೆಂದು, ರಾಷ್ಟ್ರದ ಉದ್ಯಮಕ್ಕೆ ಕಂಟಕವಾಗಲಿರುವ ಮುಕ್ತ ಆಮದು ನೀತಿಯನ್ನು ವಿರೋಧಿಸಲು ಸಂಘ ಕಾರ್ಯಪ್ರವೃತ್ತವಾಗಬೇಕೆಂದು ತೀರ್ಮಾನಿಸಿದೆವು. ರಾಷ್ಟ್ರೀಯ ರಾಜಕೀಯ ಪಕ್ಷದ ಸದಸ್ಯನಾಗಿರುವ ನನಗೆ ನನ್ನ ಪಕ್ಷ ಈ ವಿಷಯದಲ್ಲಿ ತನ್ನ ನಿಲುವನ್ನು ಸಾರ್ವಜನಿಕವಾಗಿ ಪ್ರಕಟಣೆ ಮಾಡಿಸುವ ಅವಶ್ಯಕತೆಯಿಂದಾಗಿ, ಕರ್ನಾಟಕ ಪ್ರದೇಶ ಕಾಂಗ್ರೆಸ್ ಪಕ್ಷದ ಅಧ್ಯಕ್ಷರನ್ನು ಒಪ್ಪಿಸಿ, ನಾನು ಹಾಗೂ ಮಾಜಿ ರೇಷ್ಮೆ ಖಾತೆ ಸಚಿವರಾದ ಡಾ. ಜಿ. ಪರಮೇಶ್ ಮತ್ತು ವಿ. ಮುನಿಯಪ್ಪ, ಕರ್ನಾಟಕ ಕಾಂಗ್ರೆಸ್ ಕಚೇರಿಯಲ್ಲಿ ಜಂಟಿ ಪತ್ರಿಕಾ ಹೇಳಿಕೆಯನ್ನು ನೀಡುವ ಮೂಲಕ ಕರ್ನಾಟಕ ಪ್ರದೇಶ ಕಾಂಗ್ರೆಸ್ ಪಕ್ಷವು, ಕೇಂದ್ರ ಸರ್ಕಾರದ ರೇಷ್ಮೆ ಆಮದು ನೀತಿಯನ್ನು ವಿರೋಧಿಸುತ್ತದೆ ಎನ್ನುವುದನ್ನು ಸ್ಪಷ್ಟಪಡಿಸಿದೆವು. ಇದರಿಂದ ಈ ವಿಷಯವನ್ನು ವಿರೋಧಿಸಲು ನನ್ನ ಪಕ್ಷದ ಸಂಕೋಲೆ ಇಲ್ಲದಂತಾದುದು, ನನಗೆ ಒದಗಿಬಂದ ವರವಾದಂತಾಯಿತು. ಈ ವೇಳೆಗಾಗಲೇ ರಾಜ್ಯದ ಮುಖ್ಯಮಂತ್ರಿಗಳು ಕೇಂದ್ರದ ಈ ಆಮದು

ನೀತಿಯನ್ನು ವಿರೋಧಿಸಿ ಕೇಂದ್ರಕ್ಕೆ ಪತ್ರ ಬರೆದಿದ್ದರು. ರಾಜ್ಯ ರೇಷ್ಮೆ ಖಾತೆ ಸಚಿವರು, ಈ ಪತ್ರವನ್ನು ಪತ್ರಿಕೆಗಳಿಗೆ ಬಿಡುಗಡೆ ಮಾಡಿ ರಾಜ್ಯ ಸರ್ಕಾರದ ನಿಲುವನ್ನು ಸ್ಪಷ್ಟಪಡಿಸಿದ್ದರು. ಇದರಲ್ಲಿ ಹೊಸದೇನೂ ಇಲ್ಲ. ಆದರೆ ಕೇಂದ್ರ ಸರ್ಕಾರದ ಅನುದಾನದಿಂದ ಆ ಸರ್ಕಾರದ ಅಂಗ ಸಂಸ್ಥೆಯಾಗಿ ಕೆಲಸ ಮಾಡುವ ಕೇಂದ್ರ ರೇಷ್ಮೆ ಮಂಡಳಿಯ ಅಧ್ಯಕ್ಷರು ಈ ನೀತಿಯನ್ನು ವಿರೋಧಿಸಿ ಪತ್ರಿಕಾ ಹೇಳಿಕೆ ನೀಡಿದ್ದುದು ಒಂದು ವಿಶೇಷ ಸಂಗತಿಯಾಗಿತ್ತು.

ತದನಂತರ ಕರ್ನಾಟಕ ರಾಜ್ಯ ರೇಷ್ಮೆ ನೂಲು ಬಿಚ್ಚುವವರ ಸಂಘದ ಅಧ್ಯಕ್ಷರಾದ ಶಿಡ್ಲಘಟ್ಟದ ಶ್ರೀ ಎಸ್. ಎ. ಬಾಸೀತ್, ಕರ್ನಾಟಕ ರಾಜ್ಯ ಖಾಸಗಿ ಮೊಟ್ಟೆ ತಯಾರಕರ ಸಂಘದ ಅಧ್ಯಕ್ಷರಾದ ಶ್ರೀ ಎಂ. ರಾಮಚಂದ್ರೇಗೌಡ ಹಾಗೂ ಬೆಳೆಗಾರರ ಸಂಘದ ಅಧ್ಯಕ್ಷನಾದ ನಾನು ಜಂಟಿ ಪತ್ರಿಕಾ ಹೇಳಿಕೆಯನ್ನು ನೀಡಿ ಸರ್ಕಾರ ಕೂಡಲೆ ಈ ಆಜ್ಞೆಯನ್ನು ವಾಪಸು ತೆಗೆದುಕೊಳ್ಳಬೇಕೆಂದು, ಒಂದು ವೇಳೆ ಸರ್ಕಾರ ನಮ್ಮ ಒತ್ತಾಯಕ್ಕೆ ಮಣಿಯದೆ ತನ್ನ ಅವಿವೇಕದ ತೀರ್ಮಾನವನ್ನು ಜಾರಿಗೊಳಿಸಲು ಪ್ರಯತ್ನಪಟ್ಟರೆ, ಈ ಉದ್ಯಮವನ್ನು ಉಳಿಸಿಕೊಳ್ಳಬೇಕೆಂಬ ಹಂಬಲವುಳ್ಳ ನಾವೆಲ್ಲರೂ ಬೀದಿಗೆ ಇಳಿದು ಪ್ರತಿಭಟಿಸಬೇಕೆಂದು, ಎಷ್ಟೇ ಬೆಲೆ ತರಬೇಕಾದ ಸಂದರ್ಭ ಬಂದಾಗ್ಯೂ ಕೇಂದ್ರ ಸರ್ಕಾರದ ಮತ್ತು ರೇಷ್ಮೆ ನೂಲು ಆಮದು ನೀತಿಯನ್ನು ಜಾರಿಗೊಳಿಸಲು ಅವಕಾಶ ಕೊಡುವುದಿಲ್ಲವೆಂದು ಕೇಂದ್ರ ಸರ್ಕಾರವನ್ನು ಎಚ್ಚರಗೊಳಿಸಿದೆವು. ನನ್ನ ಮತ್ತು ಮಾನ್ಯ ಶ್ರೀ ರಾಮಕೃಷ್ಣ ಹೆಗಡೆಯವರ ನಿಕಟ ಬಾಂಧವ್ಯ ಸರಸ, ವಿರಸ, ಒಟ್ಟಾಗಿ ಹೋರಾಟ, ವಿರುದ್ಧವಾಗಿ ಹೋರಾಟ ಮೂರು ದಶಕಗಳಿಗೂ ಮೀರಿದ್ದು. ಇಷ್ಟಾದರೂ ನಮ್ಮಿಬ್ಬರ ಮಧ್ಯದ ವೈಯಕ್ತಿಕ ಬಾಂಧವ್ಯಕ್ಕೆ ಚ್ಯುತಿ ಬಂದಿಲ್ಲವಾದ್ದರಿಂದ ನಾನು ಅವರನ್ನು ಸಂಪರ್ಕಿಸಿ, ಚರ್ಚಿಸಿ ಆಜ್ಞೆಯನ್ನು ವಾಪಸ್ಸು ಪಡೆಯುವಂತೆ ಕೋರಿದೆ, ಹಾಗೂ ವೈಯಕ್ತಿಕವಾಗಿ ಪತ್ರವನ್ನು ಬರೆದೆ.

ಈ ವಿಷಯದಲ್ಲಿ ವಿಚಿತ್ರವಲ್ಲದಿದ್ದರೂ ವಿಸ್ಮಯಕಾರಿಯಾದ ಮತ್ತೊಂದು ವಿಷಯವನ್ನು ನಾನು ದಾಖಲಿಸಲೇಬೇಕಾಗಿದೆ. ನನ್ನ ಮತ್ತು ಈ ರಾಷ್ಟ್ರದ ಪ್ರಧಾನಿಯಾಗಿದ್ದ ಶ್ರೀ ಹೆಚ್. ಡಿ. ದೇವೇಗೌಡರ ಎರಡು ದಶಕಗಳಿಗೂ ಮೀರಿದ ಮಧುರ ಬಾಂಧವ್ಯ ಮತ್ತು ಇತ್ತೀಚಿನ ದಿನಗಳಲ್ಲಿ ನಮ್ಮಿಬ್ಬರ ರಾಜಕೀಯ ವಿರಸ, ಈ ನಾಡಿನ ಜನರಿಗೆ ಗೊತ್ತಿರುವ ವಿಷಯ. ನನಗೆ ತಿಳಿದಿರುವಂತೆ ರೇಷ್ಮೆ ಉದ್ಯಮದ ಬಗ್ಗೆ ದೇವೆಗೌಡರಿಗೆ ಯಾವಾಗಲೂ ಆಳವಾದ ಅರಿವಾಗಲಿ, ಅದಮ್ಯ ಆಸಕ್ತಿಯಾಗಲಿ ಇರಲಿಲ್ಲ ಎನ್ನುವುದು ನನ್ನ ಭಾವನೆ. ಅವರ ಚುನಾವಣ ಕ್ಷೇತ್ರದಲ್ಲಿ ಈ ಬೆಳೆ ಇಲ್ಲದೆ ಇರುವುದು ಇದಕ್ಕೆ ಕಾರಣ ಇರಬಹುದು. ಆದರೂ ಎಲ್ಲರ ಜೊತೆಗೆ ದೇವೆಗೌಡರು ಕೇಂದ್ರ ಸರ್ಕಾರದ ವಾಣಿಜ್ಯ ಸಚಿವರ ರೇಷ್ಮೆ ಆಮದು ನೀತಿಯನ್ನು ವಿರೋಧಿಸಿ ಪ್ರಧಾನ ಮಂತ್ರಿಗಳಿಗೆ ಪತ್ರ ಬರೆಯುವ ಮೂಲಕ ವಿರೋಧವನ್ನು ವ್ಯಕ್ತಪಡಿಸಿದರು! ದೇವೆಗೌಡರು ಈ ನೀತಿಯನ್ನು ವಿರೋಧ ಮಾಡಿದ್ದು ಕೇಂದ್ರದಲ್ಲಿ ರಾಮಕೃಷ್ಣ ಹೆಗಡೆಯವರು ವಾಣಿಜ್ಯ ಸಚಿವರಾಗಿರುವ ಕಾರಣದಿಂದಲೇ ಹೊರತು ಉದ್ಯಮದ ಒಳಿತಿನ ಕಾರಣದಿಂದಲ್ಲ ಎಂದು ಅಭಿಪ್ರಾಯಪಟ್ಟವರೂ ಉಂಟು. ಅದೇನೆ ಇರಲಿ ಕೊನೆ ಪಕ್ಷ ಈ ವಿಷಯದಲ್ಲಾದರೂ ಮಾನ್ಯ ದೇವೆಗೌಡರು ನನ್ನ ಅಚಲ ನಿಲುವಿಗೆ ಬೆಂಬಲವಾಗಿ

ನಿಂತರು. ರಾಜ್ಯದ ಉದ್ಯಮ ಆಸಕ್ತರು ಹಾಗೂ ಹೆಗಡೆಯವರ ಹಿತೈಷಿಗಳು ಕರ್ನಾಟಕದಲ್ಲಿ, ಅದರಲ್ಲಿಯೂ ಹಳೆ ಮೈಸೂರು ಪ್ರದೇಶಗಳಲ್ಲಿ, ಈ ಆಜ್ಞೆಯಿಂದ ಅವರ ರಾಜಕೀಯ ಹಿತಕ್ಕೆ ಆಗಬಹುದಾದ ಕೆಟ್ಟ ಪರಿಣಾಮವನ್ನು ಮನವರಿಕೆ ಮಾಡಿಕೊಟ್ಟರು.

ಈ ಎಲ್ಲಾ ಕಾರಣದಿಂದಾಗಿ ಕೇಂದ್ರ ಸರ್ಕಾರ ದಿನಾಂಕ ೮-೧೦-೯೮ರ ತನ್ನ ಆಮದು ಆಜ್ಞೆಯನ್ನು ಪರಿಷ್ಕರಿಸಿ ೨A ಮತ್ತು ಅದಕ್ಕೆ ಮೇಲ್ಪಟ್ಟ ಗುಣಮಟ್ಟದ ರೇಷ್ಮೆದಾರವನ್ನು ಆಮದು ಮಾಡಿಕೊಳ್ಳಲು ಮುಕ್ತ ಆಮದು ನೀತಿಯನ್ನು ಸೀಮಿತಗೊಳಿಸಿ ಆಜ್ಞೆ ಹೊರಡಿಸಿದರು. ಈ ತೀರ್ಮಾನವು ರಾಷ್ಟ್ರ ಮಟ್ಟದ ರೇಷ್ಮೆ ಉದ್ಯಮಕ್ಕೆ ಮೊದಲಿನ ಆಜ್ಞೆಯಷ್ಟೆ ಅಪಾಯಕಾರಿಯಾದದ್ದು ಎಂದು ಆಜ್ಞೆಯನ್ನು ವಿಶ್ಲೇಷಿಸಿದ ಎಲ್ಲರೂ ತೀರ್ಮಾನಕ್ಕೆ ಬಂದೆವು.

ಹೊರದೇಶದಿಂದ ರೇಷ್ಮೆಯನ್ನು ಆಮದು ಮಾಡಿಕೊಳ್ಳಲು ಕೇಂದ್ರ ಸರ್ಕಾರಕ್ಕೆ ಯಾವುದೇ ಸಕಾರಣ ಇಲ್ಲ ಎಂದು ಮೊದಲಿನಿಂದಲೂ ಪ್ರತಿಪಾದಿಸಿದ ನಾವು ಬೆಂಗಳೂರಿನ ಹೋಟೆಲ್ ಸಭಾಂಗಣ ಒಂದರಲ್ಲಿ ಬೆಳೆಗಾರರ ನೂಲು ಬಿಚ್ಚುವವರ ಹಾಗೂ ಮೊಟ್ಟೆ ತಯಾರಕರ ಪ್ರತಿನಿಧಿಗಳ ಸಭೆ ಕರೆದು ಚರ್ಚಿಸಿದ ನಂತರ ಕೇಂದ್ರ ಸರ್ಕಾರದ ಪರಿಷ್ಕೃತ ಆಮದು ನೀತಿಯನ್ನು ತಿರಸ್ಕರಿಸಬೇಕೆಂದು ತೀರ್ಮಾನಿಸುದುದಲ್ಲದೆ, ಹೊರ ದೇಶದಿಂದ ಯಾವುದೇ ರೂಪದಲ್ಲಿ ರೇಷ್ಮೆದಾರ ಭಾರತದ ಗಡಿಯೊಳಗೆ ದಾಟದಂತೆ ನೋಡಿಕೊಳ್ಳಬೇಕೆಂದು, ಈ ಒಂದು ಗುರಿಯನ್ನು ಸಾಧಿಸುವ ಸಲುವಾಗಿ ಬೆಳೆಗಾರರ ಸಂಘದ, ನೂಲು ಬಿಚ್ಚುವವರ ಸಂಘದ ಹಾಗೂ ಖಾಸಗಿ ಮೊಟ್ಟೆ ತಯಾರಕರ ಸಂಘದ ಪದಾಧಿಕಾರಿಗಳು ಸೇರಿದಂತೆ 'ರೇಷ್ಮೆ ಆಮದು ನೀತಿ ವಿರೋಧಿ ಜಂಟಿ ಕ್ರಿಯಾ ಸಮಿತಿ' ಯೊಂದನ್ನು ರಚಿಸಿಕೊಂಡೆವು. ಈ ಸಮಿತಿಯ ಮೂಲಕ ಇಡೀ ರಾಜ್ಯದಲ್ಲಿ ಕಾರ್ಯಕ್ರಮಗಳನ್ನು ರೂಪಿಸಬೇಕೆಂದು ತೀರ್ಮಾನಿಸಲಾಯಿತು. ನಿರೀಕ್ಷೆಯಂತೆ ಸಮಿತಿಯ ಅಧ್ಯಕ್ಷನಾಗಿ ನಾನು, ಕಾರ್ಯದರ್ಶಿಯಾಗಿ ರಾಮಚಂದ್ರೇಗೌಡರು, ಉಪಾಧ್ಯಕ್ಷರಾಗಿ ಬಾಸಿತ್‌ರವರು ಇರಬೇಕೆಂದು ತೀರ್ಮಾನಿಸಲಾಯಿತು.

ಯಾವುದೇ ಆಂದೋಲನ, ಪ್ರತಿಭಟನೆ ಅಥವಾ ಚಳುವಳಿ ಯಶಸ್ವಿಯಾಗಬೇಕಾದರೆ ಈ ವಿಷಯದಲ್ಲಿ ಜನಾಭಿಪ್ರಾಯ ಮೂಡಿಸುವುದು ಅತ್ಯಂತ ಅವಶ್ಯಕ. ಆದ್ದರಿಂದ ಮುಕ್ತ ರೇಷ್ಮೆ ಆಮದು ನೀತಿಯಿಂದ ಉಂಟಾಗಬಹುದಾದ ದುಷ್ಪರಿಣಾಮಗಳ ಬಗ್ಗೆ ಜನಾಭಿಪ್ರಾಯ ಮೂಡಿಸಲು ರಾಜ್ಯದ ಪ್ರಮುಖ ನಗರಗಳಲ್ಲಿ ಸಂಕಿರಣಗಳನ್ನು ಏರ್ಪಡಿಸಲು ತೀರ್ಮಾನಿಸಿ, ಮೊದಲನೆದಾಗಿ ಬೆಂಗಳೂರಿನಲ್ಲಿ ದಿ. ೧-೧೨-೯೮ ರಂದು ಪ್ರಥಮ ವಿಚಾರ ಸಂಕಿರಣವನ್ನು ಏರ್ಪಾಟು ಮಾಡಿದೆವು. ವಿವಿಧ ಕ್ಷೇತ್ರದ ಗಣ್ಯರುಗಳಿಂದ ತುಂಬಿ ನನ್ನ ಅಧ್ಯಕ್ಷತೆಯಲ್ಲಿ ನಡೆದ ಈ ಸಂಕಿರಣದಲ್ಲಿ, ಕರ್ನಾಟಕ ರಾಜ್ಯದ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿ ಶ್ರೀ ಎನ್. ಡಿ. ವೆಂಕಟೇಶ್, ಕರ್ನಾಟಕ ರಾಜ್ಯ ಕಂದಾಯ ಸಚಿವಾಲಯದ ಕಾರ್ಯದರ್ಶಿಗಳಾದ ಶ್ರೀ ಬಾಲಸುಬ್ರಹ್ಮಣ್ಯ, ಕೇಂದ್ರ ರೇಷ್ಮೆ ಮಂಡಳಿ ಅಧ್ಯಕ್ಷರಾದ ಶ್ರೀ ಏಕಾಂತಯ್ಯ, ಕರ್ನಾಟಕ ರಾಜ್ಯ ರೇಷ್ಮೆ ಮಂತ್ರಿ ಶ್ರೀ ವರದೇಗೌಡ, ಮಾಜಿ ಲೋಕಸಭಾ

ಸದಸ್ಯ ಶ್ರೀ ನಾರಾಯಣ ಸ್ವಾಮಿಯವರು ಭಾಗವಹಿಸಿ ಉತ್ತಮ ಸಲಹೆ ಮತ್ತು ಮಾರ್ಗದರ್ಶನ ನೀಡುವ ಮೂಲಕ ಕೇಂದ್ರ ಸರ್ಕಾರದ ಆಮದು ನೀತಿಯನ್ನು ವಿರೋಧಿಸಿ, ನಮ್ಮ ಉದ್ದೇಶ ಸಾಧನೆಗೆ ನೆರವಾದರು. ದಿ. ೨೫-೧೧-೯೮ರಂದು ರಾಮನಗರದಲ್ಲಿ ಸಾವಿರಾರು ಜನ ನೂಲು ಬಿಚ್ಚುವವರ ಬೃಹತ್ ಸಭೆ ನಡೆದು ಆಮದು ನೀತಿಯನ್ನು ಎಲ್ಲಾ ವಿಧದಲ್ಲಿಯೂ ವಿರೋಧಿಸಬೇಕೆಂದು ಒಕ್ಕೊರಲಿನಿಂದ ತೀರ್ಮಾನಿಸಲಾಯಿತು. ರೇಷ್ಮೆ ಬೆಳೆಯುವ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಪ್ರತಿಭಟನಾ ಸಭೆಗಳನ್ನು ನಡೆಸಬೇಕೆಂಬ ಜಂಟಿ ಕ್ರಿಯಾ ಸಮಿತಿಯು ತೀರ್ಮಾನಿಸದಂತೆ ಮೊದಲ ಹಂತವಾಗಿ ದಿ. ೧೦-೧೨-೯೮ ರಂದು ಕೋಲಾರದಲ್ಲಿ ಪ್ರತಿಭಟನಾ ಸಭೆ ನಡೆಸಲು ತೀರ್ಮಾನಿಸಲಾಯಿತು.

ಜನಾಭಿಪ್ರಾಯವನ್ನು ಮೂಡಿಸುವ ಉದ್ದೇಶದಿಂದ ಎಲ್ಲಾ ಜಿಲ್ಲೆಗಳಲ್ಲಿ ಪತ್ರಿಕಾ ಸಂದರ್ಶನಗಳನ್ನು ಏರ್ಪಡಿಸಿ ಜನರನ್ನು ಜಾಗೃತಿಗೊಳಿಸಬೇಕೆಂದು ಕಾರ್ಯಕ್ರಮ ಹಾಕಿಕೊಳ್ಳಲಾಗಿದೆ.

೧೯೯೯ ಜನವರಿ ಮೊದಲ ವಾರದಲ್ಲಿ ಬೆಂಗಳೂರಿನಲ್ಲಿ ರಾಜ್ಯಮಟ್ಟದ ಒಂದು ಬೃಹತ್ ಪ್ರತಿಭಟನಾ ಸಭೆ ನಡೆಸಿ ಸರ್ಕಾರಕ್ಕೆ ಕೊನೆ ಎಚ್ಚರಿಕೆ ಕೊಡಲು ನಿರ್ಧರಿಸಲಾಯಿತು. ಸಮಸ್ಯೆಗಳ ಪರಿಹಾರಕ್ಕೆ ಸಂಘರ್ಷ ಸರಿಯಾದ ಮಾರ್ಗವೆಂದು ನಾವು ಪ್ರತಿಪಾದಿಸುವುದಿಲ್ಲ. ಆದ್ದರಿಂದಲೆ ನಾವು ಪ್ರಾರ್ಥನೆ, ಅದರಿಂದಾಗದಿದ್ದರೆ ಪ್ರತಿಭಟನೆ, ಅದರಲ್ಲಿಯೂ ನಾವು ಸಫಲವಾಗದಿದ್ದರೆ ನಾವು ಅಂತಿಮವಾಗಿ ಕಾನೂನನ್ನು ಕೈಗೈ ಎತ್ತಿಕೊಂಡು ಸಂಘರ್ಷದ ಮಾರ್ಗ ಹಿಡಿಯಬೇಕಾಗುತ್ತದೆ. ನನ್ನ ರಾಮನಗರದ ಬಿಸಿರಕ್ತದ ಕೆಲ ಯುವಕರ ಮಾತಿನಲ್ಲಿ ಹೇಳಬೇಕೆಂದರೆ, ನಮ್ಮ ಪ್ರಾರ್ಥನೆ ಪ್ರತಿಭಟನೆ ಮಾರ್ಗಗಳು ವಿಫಲವಾದಲ್ಲಿ ಬೀದಿಬೀದಿಗಳಲ್ಲು ಹೊರ ದೇಶದ ರೇಷ್ಮೆ ದಾರವನ್ನು ಸುಡಬೇಕಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಆಗಬಹುದಾದ ದುಷ್ಪರಿಣಾಮಗಳಿಗೆ ಸರ್ಕಾರವೇ ಹೊಣೆಯಾಗಬೇಕಾಗುತ್ತದೆ ಎಂದು ನಾವು ಈಗಾಗಲೆ ಎಚ್ಚರಿಸಿದ್ದೇವೆ.

ನಾನು ಈಗಾಗಲೇ ತಿಳಿಸಿರುವಂತೆ ಮೈಸೂರು ಬಿತ್ತನೆ ವಲಯದ ಬೆಳೆಗಾರರ ಸಮಸ್ಯೆ ಚರ್ಚಿಸಲು ತಾ. ೧೮-೧೧-೯೮ರಂದು ನಾನು ಕರೆದಿದ್ದ ಸಭೆಯಲ್ಲಿ ಸಾವಿರಾರು ಬೆಳೆಯಗಾರರು ಭಾಗವಹಿಸಿ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದರು. ಇದಾದ ಮೇಲೆ ಅಂದಿನ ಸಭೆಯಲ್ಲಿ ಉಪಸ್ಥಿತರಿದ್ದ ಮಾಜಿ ಸಚಿವರುಗಳಾದ ಡಾ. ಪರಮೇಶ್. ಶ್ರೀ ಹೆಚ್. ಎಂ. ರೇವಣ್ಣ, ಮಾಜಿ ಸಂಸದರಾದ ಶ್ರೀ ಜಿ. ಎಸ್. ಬಸವರಾಜು ಹಾಗೂ ಕುಣಿಗಲ್ ಕ್ಷೇತ್ರದ ಶಾಸಕರಾದ ಶ್ರೀ ಎಸ್. ಪಿ. ಮುದ್ದಹನುಮೇಗೌಡ ಅವರುಗಳು ಸಭೆಯನ್ನು ಕುರಿತು, ಸಮಸ್ಯೆಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಜನವರಿ ೧೯೯೯ರೊಳಗಾಗಿ ಸರ್ಕಾರವು ರೇಷ್ಮೆ ಬೆಳೆಗಾರರ ಸಮಸ್ಯೆಗಳನ್ನು ಗಂಭೀರವಾಗಿ ಪರಿಗಣಿಸಿ ಸೂಕ್ತ ಪರಿಹಾರ ನೀಡದೆ ಇದ್ದಲ್ಲಿ ಬಿತ್ತನೆ ವಲಯದ ಬೆಳೆಗಾರರನ್ನು ನಿರ್ಬಂಧಿಸಿರುವ ಕಾನೂನನ್ನು ಮುರಿದು ಬೆಳೆಗಾರನು ತನಗೆ ಬೇಕಾದ ತಳಿಯ ಗೂಡನ್ನು ಬೆಳೆಯಲು ತನಗೆ ಬೇಕಾದಲ್ಲಿ ಮಾರಲು ಸನ್ನದ್ಧರಾಗಬೇಕಾಗುತ್ತದೆ. ಇದಕ್ಕೆ ಎಲ್ಲಾ ಬೆಳೆಗಾರರು ಸಹಕರಿಸಬೇಕೆಂಬ ತೀರ್ಮಾನದೊಡನೆ

ಸಭೆ ಮುಕ್ತಾಯವಾಯಿತು. ಇದಾದ ಕೆಲವೇ ದಿನಗಳಲ್ಲಿ ಅನೇಕ ದಿನಗಳಿಂದ ಹಣಕಾಸು ಇಲಾಖೆಯಲ್ಲಿ ಕೊಳೆಯುತ್ತಿದ್ದ ಐದು ರೂಪಾಯಿ ಬೋನಸ್ ಹೆಚ್ಚಿಸಬೇಕೆಂಬ ಪ್ರಸ್ತಾವನೆ ದಿಢೀರನೆ ಮಂಜುರಾತಿ ಪಡೆದು ಮೈಸೂರು ವಲಯದ ಬಿತ್ತನೆ ಬೆಳೆಗಾರನಿಗೆ ೨೫ರೂ. ನಿಂದ ೩೦ ರೂ. ಗೆ ಬೋನಸ್ ಹೆಚ್ಚಿಸಿ ಹೊರಡಿಸಿದ ಅಜ್ಞೆಯ ನಕಲನ್ನು ಇಲಾಖೆಯವರು ನನಗೆ ತಲುಪಿಸಿದರು.

ಈ ಒಂದು ಆಜ್ಞೆಯಿಂದ ಬಿತ್ತನೆ ವಲಯಕ್ಕೆ ಒಂದು ವರ್ಷಕ್ಕೆ ಸುಮಾರು ಅರ್ಧ ಕೋಟಿಯಷ್ಟು ಹಣ ಹರಿದು ಬರುವಂತಾದದ್ದು ಮನಸ್ಸಿಗೆ ಸ್ವಲ್ಪ ನೆಮ್ಮದಿ ತಂದಿದೆ. ಎಲ್ಲವೂ ಆಗದಿದ್ದರೂ ಈ ದಿಸೆಯಲ್ಲಿ ನಡೆದ ಈ ಬೆಳವಣಿಗೆ ಸಮಸ್ಯೆಗಳನ್ನು ಬಗೆಹರಿಸುವಲ್ಲಿನ ಪ್ರಥಮ ಹೆಜ್ಜೆ ಎನ್ನಬಹುದು. ಬೇಡಿಕೆಗಳು ಈಡೇರದಿದ್ದರೆ ಮತ್ತೆ ಫೆಬ್ರವರಿ ೧೯೯೩ಕ್ಕೆ ಬೆಳೆಗಾರರನ್ನು ಸೇರಿಸಿ ಮುಂದಿನ ಕ್ರಮದ ಬಗ್ಗೆ ಚರ್ಚಿಸಲು ಆಲೋಚಿಸಿದ್ದೇನೆ.

ರಾಜ್ಯಮಟ್ಟದಲ್ಲಿ ತೀರ್ಮಾನವನ್ನು ತೆಗೆದುಕೊಳ್ಳುವ ಅಧಿಕಾರ ಸ್ಥಾನದಲ್ಲಿ ಇರುವವರು ದಕ್ಷರು, ಬಲಿಷ್ಠರು, ಉದ್ಯಮದ ಬಗ್ಗೆ ಆಳವಾದ ಅರಿವು ಉಳ್ಳವರು ಬರುವವರೆಗೆ ಈ ಸಮಸ್ಯೆಗಳಿಗೆ ಪರಿಹಾರ ಸಿಗುವುದು ಅಷ್ಟು ಸುಲಭವಲ್ಲ, ಅಂದಿನವರೆಗೂ ನಮ್ಮ ಹೋರಾಟ ಮುಂದುವರಿಸಬೇಕಾಗುತ್ತದೆ.

## ೨೧

ಭಾರತ ದೇಶದಲ್ಲಿ ಗುಣಮಟ್ಟದ ರೇಷ್ಮೆ ಉತ್ಪಾದನೆ ಆಗುತ್ತಿಲ್ಲ ಎಂದು ಕುಂಟು ನೆಪ ಹೊಡ್ಡಿ ಹೊರ ದೇಶದಿಂದ ರೇಷ್ಮೆ ಆಮದು ಮಾಡಿಕೊಳ್ಳುತ್ತಿರುವ ಸರ್ಕಾರಕ್ಕೆ, ಗುಣಮಟ್ಟದ ರೇಷ್ಮೆ ಉತ್ಪಾದನೆಗೆ ಉತ್ತಮ ಗುಣಮಟ್ಟದ ರೇಷ್ಮೆ ತಳಿ ಅವಶ್ಯಕ ಎನ್ನುವ ಕನಿಷ್ಠ ಅರಿವು ಇಲ್ಲದಿರುವುದು ನಮ್ಮ ದುರಾದೃಷ್ಟ. ಈ ಕ್ಷೇತ್ರದಲ್ಲಿ ನಿರತವಾಗಿರುವ ನಮ್ಮ ಸಂಶೋಧಕರ ಸಾಧನೆ ಮೆಚ್ಚುವಂತಹದು. ಆದರೆ ಅಂತರರಾಷ್ಟ್ರೀಯ ಮಟ್ಟದ ಗುಣಮಟ್ಟ ರೇಷ್ಮೆ ಉತ್ಪಾದನೆಗೆ ಅವಶ್ಯಕವಾದ ಹಾಗೂ ನಮ್ಮ ರೈತ ಈಗ ಇರುವ ಪರಿಸ್ಥಿತಿಗೆ ಹೊಂದಿಕೊಳ್ಳುವ ಹೊಸ ತಳಿಯನ್ನು ಪರಿಷ್ಕರಿಸುವುದರಲ್ಲಿ ಹಾಗೂ ಈಗ ಇರುವ ತಳಿಯನ್ನು ಬಲಿಷ್ಠ ತಳಿಯಾಗಿ ಉತ್ತಮಪಡಿಸುವಲ್ಲಿ ಯಶಸ್ವಿ ಆಗದಿರುವುದು ಉದ್ಯಮದಲ್ಲಿ ಆಸಕ್ತರಿರುವ ನಾವೆಲ್ಲರೂ ಗಂಭೀರವಾಗಿ ಪರಿಗಣಿಸಬೇಕಾದಂತಹ ವಿಷಯ. ಇತ್ತೀಚಿನ ವರ್ಷಗಳಲ್ಲಿ ಯಾವುದೇ ಯಶಸ್ವಿಯಾಗುವಂತಹ ಹೊಸತಳಿ ಬಿಡುಗಡೆಯಾಗಿಲ್ಲವೆಂಬುದು ನನ್ನ ನಂಬಿಕೆ. ಮೈಸೂರು ಬಿತ್ತನೆ ತಳಿಗೆ ಪರ್ಯಾಯವಾಗಿ MH1 ಮತ್ತು MH2 ಎನ್ನುವ ಬಹುಸಂತತಿ ತಳಿಯೊಂದನ್ನು ಬಿಡುಗಡೆ ಮಾಡಿ, ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆ, ಹುಣಸೂರು, ಹಾಗೂ ಬೀದರ್ ಜಿಲ್ಲೆಯ ಹುಮನಾಬಾದ್ ತಾಲ್ಲೂಕುಗಳಲ್ಲಿ ಇಲಾಖೆಯವರು ಕದ್ದು ಈ ತಳಿಯ ಗೂಡುಗಳನ್ನು ಬೆಳೆಯುವ ವ್ಯವಸ್ಥೆ ಮಾಡಿದ್ದಾರೆ ಎಂಬುದು ನನಗೆ ತಿಳಿದುಬಂದಿದೆ. ಯಾವುದೇ ಹೊಸ ತಳಿಯ ಪರಿಷ್ಕರಣೆ ಮತ್ತು ಬಿಡುಗಡೆಗೆ ನನ್ನ ವಿರೋಧವಿಲ್ಲ ಎಂಬುದನ್ನು ನಾನು ಈಗಾಗಲೇ ಸ್ಪಷ್ಟಪಡಿಸಿದ್ದೇನೆ. ಈ ರೀತಿ ಪರಿಷ್ಕರಿಸಿ ಬಿಡುಗಡೆಯಾದ ಹೊಸ ತಳಿಗಳು

ಯಶಸ್ವಿಯಾಗುವ ಮೊದಲೆ ಆ ತಳಿಗಳ ಯಶಸ್ಸಿನ ಭ್ರಮೆಯಿಂದ ಹಾಲಿ ಇರುವ ತಳಿಗಳ ಬಗ್ಗೆ ತಾತ್ಸಾರ ಮನೋಭಾವ ತಾಳುವುದು ಅತ್ಯಂತ ಅಪಾಯಕಾರಿಯಾದ ಪ್ರವೃತ್ತಿ.

ಕೆಲವು ವರ್ಷಗಳ ಹಿಂದೆ ದೇಶದಲ್ಲಿ ದ್ವಿಸಂತತಿ (Bivoltine) ತಳಿ ಬೆಳೆದು ಬಿಳಿಕ್ರಾಂತಿ ಮಾಡುತ್ತೇವೆ ಎನ್ನುವ ಭ್ರಮೆಯಲ್ಲಿ ಮೈಸೂರು ಬಿತ್ತನೆ ವಲಯವನ್ನು ನಿರ್ಲಕ್ಷ್ಯ ಮಾಡಿದ ಪರಿಣಾಮವಾಗಿ ಆದ ಅನಾಹುತಗಳ ಅರಿವು, ಈಗ ಹೊಸ ತಳಿಯೊಂದನ್ನು ಪ್ರಚುರ ಮಾಡಲು ಪ್ರಯತ್ನಿಸುತ್ತಿರುವಾಗ, ಇದರಿಂದಾಗಿ ಮತ್ತೆ ಮೈಸೂರು ಬಿತ್ತನೆ ವಲಯವನ್ನು ನಿರ್ಲಕ್ಷ್ಯ ಮಾಡಿದರೆ ಆಗಬಹುದಾದ ಪರಿಣಾಮದ ಅರಿವಿರಲೆಂದು ಭಾವಿಸುತ್ತೇನೆ. ಇಲಾಖೆಯವರು ಬೇರೆ ಕಡೆ ಬಿತ್ತನೆ ಗೂಡುಗಳನ್ನು ಬೆಳೆದು ಖಾಸಗಿ ಮೊಟ್ಟೆ ತಯಾರಿಕರಿಗೆ ಬಲವಂತವಾಗಿ ಕಟ್ಟುತ್ತಿರುವುದು. ಈ ವಲಯದ ಬೆಳೆಗಾರರಿಗೆ ಬಗೆದ ಒಂದು ಮೋಸದ ಕೃತ್ಯವೆಂದರೆ ತಪ್ಪಾಗಲಾರದು, ಇಲಾಖೆಯವರ ಈ ಕೃತ್ಯದಿಂದಾಗಿ ಮೈಸೂರು ಬಿತ್ತನೆ ವಲಯದಲ್ಲಿ ಬೆಳೆದ ಗೂಡಿಗೆ ಬೇಡಿಕೆ ಕಡಿಮೆಯಾಗಿ ಬೆಳೆಗಾರನು ತನ್ನ ಗೂಡನ್ನು ನೂಲು ಬಿಚ್ಚುವವರಿಗೆ ಕೇವಲ ೧೮- ೨೦ ರೂ. ಗಳಿಗೆ ಮಾರುವ ಪರಿಸ್ಥಿತಿ ಒದಗಿಬಂದಿದೆ. ಯಾವುದೆ ಹೊಸ ತಳಿ ಪೂರ್ಣ ಯಶಸ್ಸನ್ನು ಕಾಣುವವರೆಗೆ ಹಾಲಿ ಇರುವ ತಳಿಗಳ ಬಗ್ಗೆ ತಾಳುವ ನಿರ್ಲಕ್ಷ್ಯ ಅಕ್ಷಮ್ಯ ಅಪರಾಧವಾಗುತ್ತದೆ ಎಂಬ ಎಚ್ಚರಿಕೆಯನ್ನು ನಾನು ಈಗಾಗಲೇ ಇಲಾಖೆಗೆ ಬರೆದು ತಿಳಿಸಿದ್ದೇನೆ. ರೇಷ್ಮೆ ಕೃಷಿ ತಾಂತ್ರಿಕ ಜ್ಞಾನವಿಲ್ಲದ ಹಿರಿಯ ಅಧಿಕಾರಿಗಳು ಇಲಾಖೆಯ ಉನ್ನತ ಹುದ್ದೆಗಳಲ್ಲಿ ಇರುವುದರಿಂದ ಇಂತಹ ಪರಿಸ್ಥಿತಿಗಳು ಒದಗಿಬರುತ್ತವೆ.

## ೨೨

ಉತ್ತಮ ಗುಣಮಟ್ಟದ ರೇಷ್ಮೆ ಉತ್ಪಾದನೆಗೆ ಹಾಗೂ ರೇಷ್ಮೆ ಉತ್ಪಾದನೆಯ ಹೆಚ್ಚಳ ಆಗಬೇಕಾದರೆ ಉತ್ಪಾದಕನಿಗೆ ಉತ್ತಮ ಬೆಲೆ ದೊರೆಯಬೇಕಾದದ್ದು ಉತ್ತಮ ತಳಿಯಷ್ಟೆ ಅವಶ್ಯಕ. ಎಲ್ಲಾ ಕ್ಷೇತ್ರಗಳಲ್ಲಿಯೂ ಎಲ್ಲಾ ವಸ್ತುಗಳ ಬೆಲೆ ನಿಯಂತ್ರಣಕ್ಕೆ ಮೀರಿ ಹೆಚ್ಚಳವಾಗಿದ್ದಾಗ್ಯೂ, ರೇಷ್ಮೆ ಗೂಡಿನ ಮತ್ತು ರೇಷ್ಮೆ ನೂಲಿನ ಬೆಲೆ ಹೆಚ್ಚಳ ಕಡಿಮೆಯೆಂದೇ ಹೇಳಬೇಕಾಗುತ್ತದೆ. ಒಂದು ಕೆ. ಜಿ. ಈರುಳ್ಳಿಗೆ ೮೦ ರೂ. ಇರುವಾಗ ಅದೇ ಒಂದು ಕೆ. ಜಿ. ಬಿತ್ತನೆ ಗೂಡನ್ನು ೧೮-೨೦ ರೂ. ಗೆ ಮಾರುವ ಪರಿಸ್ಥಿತಿಯನ್ನು ಗಮನಿಸಿದರೆ ಯಾರಿಗಾದರೂ ಅರ್ಥವಾಗುತ್ತದೆ. ಬೆಳೆಗಾರನಿಗೆ ಉತ್ತಮವಾದಂತಹ ಬೆಲೆ ದೊರೆಯುತ್ತಿಲ್ಲ ಎನ್ನುವುದು.

ಧನಿಕರ ಭೋಗವಸ್ತುವಾದ ರೇಷ್ಮೆ ಬೆಲೆ ಹೆಚ್ಚುವುದರಿಂದ ಯಾವ ಸಾಮಾನ್ಯ ಪ್ರಜೆಗೂ ಕೆಡುಕಾಗಲಾರದು. ಆದ್ದರಿಂದ ಬೆಲೆಯ ಹೆಚ್ಚಳವನ್ನು ನಿಯಂತ್ರಿಸುವ ಸರ್ಕಾರದ ಪ್ರಯತ್ನ ಉದ್ಯಮದ ಮೇಲೆ ಪ್ರತಿಕೂಲ ಪ್ರಭಾವ ಉಂಟು ಮಾಡುತ್ತದೆ ಎಂಬ ಕನಿಷ್ಠ ಅರಿವು ಆಡಳಿತ ಮಾಡುವವರಿಗೆ ಆಗುವವರಿಗೆ ಈ ಸಮಸ್ಯೆಗೆ ಪರಿಹಾರ ದೊರೆಯಲಾರದು ಎಂಬುದು ನನ್ನ ನಂಬಿಕೆ.

ನಾನು ಈ ಪುಸ್ತಕವನ್ನು ಬರೆದು ಮುಗಿಸಿದಾಗ ಇಲ್ಲದಂತಹ ಮತ್ತೊಂದು ಸಮಸ್ಯೆ ಉದ್ಯಮದಲ್ಲಿ ನಮ್ಮೆಲ್ಲರನ್ನು ಕಾಡಿಸುತ್ತಿದೆ. ರೋಗರಹಿತ ಮೊಟ್ಟೆಯ ಕೊರತೆಯಿಂದಾಗಿ

ಬೆಳೆ ಕಳೆದುಕೊಂಡು ಪರಿತಪಿಸುತ್ತಿದ್ದ ನಮ್ಮ ಬೆಳೆಗಾರನು, ಇತ್ತೀಚಿನ ವರ್ಷಗಳಲ್ಲಿ ಹಿಪ್ಪುನೇರಳೆ ಗಿಡಗಳಿಗೆ ಬರುತ್ತಿರುವ ರೋಗದಿಂದಾಗಿ ಇನ್ನೂ ಕಂಗಾಲಾಗಿದ್ದಾನೆ. ವಿಚಿತ್ರವಾದ ಈ ರೋಗಗಳನ್ನು ನಿಯಂತ್ರಿಸುವಲ್ಲಿ ಯಾವುದೇ ಗಂಭೀರವಾದ ಪ್ರಯತ್ನ ನಡೆದಿರುವುದು ನನ್ನ ಗಮನಕ್ಕೆ ಬಂದಿಲ್ಲ. ಅಲ್ಲದೆ ಈಗ ಪ್ರಚಲಿತದಲ್ಲಿರುವ M5 ಅಥವಾ K2 ತಳಿಯ ಹಿಪ್ಪುನೇರಳೆ ಕಡ್ಡಿಗಿಂತ ಉತ್ತಮವಾದ ತಳಿಯನ್ನು ಪರಿಷ್ಕರಿಸುವಲ್ಲಿ ಅನೇಕ ಪ್ರಯತ್ನಗಳು ನಡೆದಾಗ್ಯೂ ಯಶಸ್ಸು ದೊರೆತಿಲ್ಲ ಎನ್ನುವುದರ ಹಿನ್ನೆಲೆಯಲ್ಲಿ ಉತ್ತಮ ಬೆಳೆಗಾಗಿ ಬೇಕಾದ ಸೊಪ್ಪನ್ನು ಒದಗಿಸುವ ಹೊಸ ತಳಿಗಳ ಸಂಸ್ಕರಣೆ ಮತ್ತು ಹಿಪ್ಪುನೇರಳೆ ಸೊಪ್ಪಿಗೆ ಬರುತ್ತಿರುವ ರೋಗಗಳ ನಿಯಂತ್ರಣದ ಕಡೆಗೆ ಗಂಭೀರವಾಗಿ ಗಮನ ಹರಿಸುವುದು ಅವಶ್ಯಕವೆಂದು ನನ್ನ ಭಾವನೆ.

ವಿಶ್ವ ಗುಣಮಟ್ಟದ ರೇಷ್ಮೆ ಉತ್ಪತ್ತಿಯಲ್ಲಿ ಪ್ರಥಮ ಸ್ಥಾನದಲ್ಲಿದ್ದ ಜಪಾನ್ ದೇಶದಲ್ಲಿ ಅನೇಕ ಕಾರಣಗಳಿಂದಾಗಿ ಉತ್ಪತ್ತಿ ಗಣನೀಯವಾಗಿ ಕಡಿಮೆಯಾದ ಕಾರಣ ವಿಶ್ವದ ರೇಷ್ಮೆ ಉತ್ಪತ್ತಿಯಲ್ಲಿ ಈಗ ಮೊದಲನೆಯ ಸ್ಥಾನ ಚೈನಾದ್ದು, ಎರಡನೆಯ ಸ್ಥಾನ ಭಾರತಕ್ಕೆ. ಏಳನೆಯ ಸ್ಥಾನದಲ್ಲಿದ್ದ ಭಾರತ ಎರಡನೇ ಸ್ಥಾನಕ್ಕೆ ಬಂದ ಸಂದರ್ಭದಲ್ಲಿ ನಾನು ಕರ್ನಾಟಕ ರಾಜ್ಯದ ರೇಷ್ಮೆ ಖಾತೆ ಸಚಿವನಾಗಿದ್ದೆ ಎಂದು ಹೇಳಿಕೊಳ್ಳಲು ನನಗೆ ಮುಜುಗರವಿಲ್ಲ. ಬ್ರೆಜಿಲ್‌ನಂತಹ ಕೆಲವು ರಾಷ್ಟ್ರಗಳಲ್ಲಿ ಇತ್ತೀಚಿನ ವರ್ಷಗಳಲ್ಲಿ ರೇಷ್ಮೆ ಉತ್ಪತ್ತಿಯ ಚಟುವಟಿಕೆಗಳು ಕಂಡು ಬಂದಾಗ್ಯೂ, ಜಾಗತೀಕ ರೇಷ್ಮೆ ಮಾರುಕಟ್ಟೆಯಲ್ಲಿ ಚೈನಾಕ್ಕೆ ಭಾರತವೇ ಪ್ರಬಲ ಪ್ರತಿಸ್ಪರ್ಧಿ. ಅದಕ್ಕಾಗಿಯೇ ಚೈನಾ ದೇಶ ತನ್ನ ರೇಷ್ಮೆ ದಾರವನ್ನು ಭಾರತಕ್ಕೆ ಅತಿ ಕಡಿಮೆ ಬೆಲೆಯಲ್ಲಿ ರಫ್ತು ಮಾಡಿ, ರಾಷ್ಟ್ರದ ಉದ್ಯಮದ ಕೊರಳು ಕೊಯ್ಯುವ ಹುನ್ನಾರ ಮಾಡುತ್ತಿರುವುದನ್ನು ನಮ್ಮ ದೇಶದ ಆಡಳಿತಗಾರರು ತಿಳಿದುಕೊಳ್ಳದಿದ್ದರೆ, ಅದರಿಂದಾಗುವ ಅನಾಹುತವನ್ನು ಅನುಭವಿಸಬೇಕಾಗುತ್ತದೆ. ರಾಷ್ಟ್ರದ ರೇಷ್ಮೆ ಉತ್ಪತ್ತಿಯಲ್ಲಿ ಕರ್ನಾಟಕದ್ದು ಸಿಂಹಪಾಲು. ರಾಷ್ಟ್ರದ ರೇಷ್ಮೆ ಉದ್ಯಮವೆಂದರೆ ಅದು ಕರ್ನಾಟಕದ ರೇಷ್ಮೆ ಉದ್ಯಮವೇ ಆಗಿರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರದ ಜವಾಬ್ದಾರಿ ಹೆಚ್ಚಿನದಾಗಿರುತ್ತದೆ.

ನನ್ನ ಈ ಬರವಣಿಗೆಯ ಪ್ರಾರಂಭದಲ್ಲಿ ರೇಷ್ಮೆಯ ಬಗ್ಗೆ ನನ್ನ ಆಸಕ್ತಿ ಹುಟ್ಟಲು ಮತ್ತು ಈ ಬರವಣಿಗೆ ಬರೆಯಲು ನನ್ನ ಜೀವನದ ಇತರೆ ವಿಚಾರಗಳಿಗಿಂತ ನಮ್ಮ ಜನರಿಗೆ ಉಪ್ಪು, ಮೆಣಸು, ಬಟ್ಟೆಬರೆಗಳಿಗಾಗಿ ದಾರಿ ಮಾಡಿಕೊಟ್ಟ ರೇಷ್ಮೆ ಬಗ್ಗೆ ಬರೆಯುವುದು ಒಳ್ಳೆಯದು ಎನಿಸಿತು ಎಂದು ಹೇಳಿದ್ದೇನೆ. ಹುಟ್ಟಿಂದಿನಿಂದಲೂ ಈ ಬೆಳೆಯ ಜೊತೆಯಲ್ಲಿಯೇ ಬೆಳೆದು ಬಂದ, ನನ್ನ ಬದುಕಿಗೆ ಹಾಸುಹೊಕ್ಕಾಗಿ ಉಳಿದ, ಈ ಉದ್ಯಮದ ಬಗ್ಗೆ ನನ್ನ ಆಸಕ್ತಿ ಕೆರಳಿಸಿದ ಇನ್ನು ಕೆಲವು ವಿಷಯಗಳೆಂದರೆ ಈ ಉದ್ಯಮದ ವಿಶಿಷ್ಟತೆಗಳು ಸದ್ದುಗದ್ದಲವಿಲ್ಲದೆ ಈ ಉದ್ಯಮದಲ್ಲಿ ಕಾರ್ಯರೂಪಕ್ಕೆ ಬರುತ್ತಿರುವ ಸಮಾಜೀಕರಣ, ಯಾರ ಪ್ರಯತ್ನವೂ ಇಲ್ಲದೆ ಈ ಉದ್ಯಮದಲ್ಲಿ ಹಾಸುಹೊಕ್ಕಾಗಿ ಬೆಳೆದು ಬಂದಿರುವ ಜಾತ್ಯಾತೀಯ ಉದ್ಯಮದ ಸ್ವರೂಪ, ಇವುಗಳು ಸಹ ಈ ಉದ್ಯಮದ ಬಗ್ಗೆ ನನ್ನ ಅಭಿರುಚಿಯನ್ನು ಹೆಚ್ಚಿಸಲು

ಕಾರಣಗಳು. ಈ ಪುಸ್ತಕವನ್ನು ನಾನು ಬರೆದು ಮುಗಿಸಿದಾಗ, ನನ್ನಲ್ಲಿ ಅಸ್ಪಷ್ಟವಾಗಿದ್ದ ಮತ್ತೊಂದು ಈ ಉದ್ಯಮದ ವೈಶಿಷ್ಟ್ಯತೆ ಹವಮಾನದ ಬದಲಾವಣೆಯಿಂದಾಗಿ, ಮತ್ತಷ್ಟು ಸ್ಪಷ್ಟವಾಗಿ ನನ್ನ ಚಿಂತನೆಯನ್ನು ಈ ವಿಷಯದಲ್ಲಿ ಪಕ್ವಗೊಳಿಸಿದೆ. ಅದೇನೆಂದರೆ ಇತ್ತೀಚಿನ ವರ್ಷಗಳಲ್ಲಿ ನಮ್ಮಲ್ಲಿ ಮಳೆ ಬೀಳುವ ಪ್ರಮಾಣ ಕಡಿಮೆಯಾಗಿದೆ, ಆಗುವ ಮಳೆಯು ಸಕಾಲಕ್ಕೆ ಬಾರದೆ ಯಾವುದೆ ಬೆಳೆಯನ್ನು ಬೆಳೆಯುವುದು ನಮ್ಮ ರೈತರಿಗೆ ದುಸ್ತರವಾಗಿದೆ. ಈ ಮಹತ್ತರ ಬದಲಾವಣೆಯ ಹಿನ್ನೆಲೆಯಲ್ಲಿ ರೇಷ್ಮೆ ಬೆಳೆಗೆ ಮಹತ್ವ ಒದಗಿಬಂದಿದೆ. ಏಕೆಂದರೆ ನನಗೆ ತಿಳಿದ ಮಟ್ಟಿಗೆ ಒಂದೇ ಒಂದು ಹದ ಮಳೆಯಾದರೆ ಒಂದು ಬೆಳೆ ತೆಗೆಯಲು ಸಾಧ್ಯವಿರುವುದು ಈ ಬೆಳೆಯೊಂದೆ. ಅದಕ್ಕಾಗಿಯೇ ಬದಲಾದ ಈ ಪರಿಸ್ಥಿತಿಯಲ್ಲಿ it is a scheme proned against the drought ಎಂದು ನಾನು ಈಗಾಗಲೆ ತಿಳಿಸಿದ್ದೇನೆ.

ಕತೆಯೂ ಅಲ್ಲದ ಸಾಹಿತ್ಯದ ಸೊಗಡೂ ಇಲ್ಲದ, ವೈಜ್ಞಾನಿಕ ವಿಶ್ಲೇಷಣೆಯ ಗುಣವಿಲ್ಲದ, ಈ ನನ್ನ ಬರವಣಿಗೆ ನನ್ನದೆ. ಇಲ್ಲಿ ವ್ಯಕ್ತ ಮಾಡಿರುವ ಅಭಿಪ್ರಾಯಗಳು ನೂರಕ್ಕೆ ನೂರು ನನ್ನವೆ. ನನ್ನ ಅನಿಸಿಕೆಗಳು ಮತ್ತು ಅಭಿಪ್ರಾಯಗಳು ರಾಗದ್ವೇಷ ಹೊರತಾದವು. ಇಲ್ಲಿ ಯಾರನ್ನಾದರೂ, ಯಾವುದನ್ನಾದರೂ ವೈಭವಿಕರಿಸುವ ಅಥವಾ ತೆಗಳುವ ಉದ್ದೇಶ ನನ್ನದಲ್ಲ. ನನಗೆ ತೋಚಿದನ್ನು ಗೀಚಿದ್ದೇನೆ. ತಪ್ಪು ಕಂಡವರು ಬರೆದು ತಿಳಿಸಿದರೆ ಅದು ಸರಿಯಿಲ್ಲವೆಂದು ನನಗನಿಸಿದರೆ ತಿದ್ದುಕೊಳ್ಳಲು ಸಿದ್ಧನಿದ್ದೇನೆ.





# ೨. ವಿದೇಶದಲ್ಲಿ ರೇಷ್ಮೆ ಪ್ರವಾಸ

ನಾನು ಕರ್ನಾಟಕ ಸರ್ಕಾರದ ರೇಷ್ಮೆ ಸಚಿವನಾಗಿದ್ದ ಅವಧಿಯಲ್ಲಿ ಜಪಾನ್ ದೇಶಕ್ಕೆ ಭೇಟಿ ನೀಡುವ ಅವಕಾಶ ಒದಗಿ ಬಂದಿತ್ತು. ನನ್ನ ಬಾಲ್ಯ ಕಾಲದಿಂದಲೂ ರೇಷ್ಮೆ ಬೆಳೆಯ ಬಗ್ಗೆ ಅತ್ಯಂತ ಕುತೂಹಲಿಯಾಗಿದ್ದ ನಾನು ತುಂಬಾ ಸಂತೋಷದಿಂದಲೇ ಈ ಪ್ರವಾಸವನ್ನು ಮುಗಿಸಿಬಂದೆ. ನನ್ನ ಆ ಪ್ರವಾಸ ಕಾಲದಲ್ಲಿ ಜಪಾನ್ ಮತ್ತು ಕೊರಿಯಾದಲ್ಲಿ ರೇಷ್ಮೆಯ ಬಗ್ಗೆ ನಾನು ಕಂಡ, ಭೇಟಿಯಾದ, ಸಂದರ್ಶಿಸಿದ ಆ ನೆನಪುಗಳನ್ನು ಇಲ್ಲಿ ದಾಖಲು ಮಾಡಿದ್ದೇನೆ. ಈ ನನ್ನ ಪ್ರವಾಸ ಜಪಾನ್‌ನಿಂದ ಹಿಡಿದು ಕೊರಿಯಾ, ಹಾಂಕಾಂಗ್‌ವರೆಗೂ ವ್ಯಾಪಿಸಿದೆ.

ನನ್ನ ಪ್ರವಾಸ ಕಾಲದಲ್ಲಿ ತಜ್ಞರೊಡನೆ ಚರ್ಚಿಸುವಾಗ ರೇಷ್ಮೆ ಉದ್ಯಮದ ಮುಖ್ಯ ಸ್ಥಳಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ನಾಡಿನ ಉದ್ಯಮದ ಸಮಸ್ಯೆಯ ಜೊತೆ ಹೋಲಿಸಿ ವಿಶ್ಲೇಷಿಸುವ ಸಂದರ್ಭದಲ್ಲಿ ಆ ದೇಶದ ತಜ್ಞರು ನಾನೊಬ್ಬ ರಾಜಕಾರಣಿ, ಒಂದು ರಾಜ್ಯದ ಮಂತ್ರಿ, ವೃತ್ತಿಯಲ್ಲಿ ನಾನೊಬ್ಬ ವಕೀಲ ಎಂದು ಎಷ್ಟು ಮನವರಿಕೆ ಮಾಡಿದರೂ ನಂಬುತ್ತಿರಲಿಲ್ಲ. ಬದಲಾಗಿ ರೇಷ್ಮೆ ಕಸುಬಿನಲ್ಲಿ ನನ್ನನ್ನು ಒಬ್ಬ ತಜ್ಞ ಎಂದೇ ಗುರುತಿಸಿ ಪೇಚಿಗೆ

ಸಿಕ್ಕಿಸಿದ್ದರು. ಈ ಪ್ರವಾಸ ಕಥನದಲ್ಲಿ ನನ್ನ ಅಭಿಪ್ರಾಯ ವ್ಯಕ್ತಮಾಡುವಾಗ ಯಾರ ಮುಲಾಜಿಗೂ ಒಳಗಾಗಿಲ್ಲ. ರಾಗ- ದ್ವೇಷಗಳಿಗೆ ಬಲಿಯಾಗಿಲ್ಲ. ಕರ್ನಾಟಕದ ರೇಷ್ಮೆ ಉದ್ಯಮ ಮುಂದುವರಿಯಬೇಕೆಂಬ ಕಳಕಳಿ ಮಾತ್ರ ನನ್ನದು.

ಪ್ರವಾಸಕ್ಕೆ ಹೊರಟಾಗ ನಾನು ಕರ್ನಾಟಕ ರಾಜ್ಯದ ರೇಷ್ಮೆ ಖಾತೆಯ ಸಚಿವನಾಗಿದ್ದೆ. ಪ್ರವಾಸದಿಂದ ವಾಪಸ್ಸು ಬರುವಾಗ ಮೊದಲನೆ ಬಾರಿಗೆ ಮಾಜಿ ಮಂತ್ರಿಯಾಗಿದ್ದೆ. ವಿಚಿತ್ರವಲ್ಲವೆ?

ಆದರೆ ರೇಷ್ಮೆ ಉದ್ಯಮದ ಬೆಳವಣಿಗೆಯ ಬಗ್ಗೆ ನನಗಿರುವ ಶ್ರದ್ಧೆ, ಬೆಳೆಗಾರನ ಬದುಕಿನ ಬಗ್ಗೆ ನನಗಿರುವ ಕಳಕಳಿ ಪ್ರಶ್ನಾತೀತವಾದುದು. ಹೀಗಾಗಿ ಈ ಎಲ್ಲಾ ಪರಿಮಿತಗಳಿದ್ದರೂ ಈ ಕಥನವನ್ನು ಬರೆದು ಮುಗಿಸಿದೆ. ಎಂದರೆ ಈ ಕಥನ ಬರೆಯುವಾಗಿನ ನನ್ನ ಮನಸ್ಸಿನ ಸ್ಥಿತಿ ನಿಮಗರಿವಾಗುತ್ತದೆ.

### ಪ್ರವಾಸ ಹೊರಡುವ ಮುನ್ನ

ನಾನು ರೇಷ್ಮೆ ಖಾತೆ ಸಚಿವನಾಗಿ ನೇಮಕಗೊಂಡ ಮೇಲೆ ರಾಜ್ಯದ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ರಾಮಕೃಷ್ಣ ಹೆಗಡೆಯವರು "ಈ ಉದ್ಯಮದ ಬಗ್ಗೆ ಆಳವಾದ ಅನುಭವಕ್ಕಾಗಿ ನೀವು ಜಪಾನ್ ಮತ್ತು ಕೊರಿಯಾ ರಾಷ್ಟ್ರಗಳಿಗೆ ಹೋಗಿ ಬನ್ನಿ" ಎಂದು ಅನೇಕ ಸಾರಿ ನನಗೆ ಹೇಳಿದರು. ಇದಾದ ಕೆಲವು ದಿನಗಳ ಮೇಲೆ ರೇಷ್ಮೆ ಇಲಾಖೆಯ ನಿರ್ದೇಶಕರನ್ನು ಜಪಾನ್‌ಗೆ ಕಳುಹಿಸಿಕೊಡುವ ಪ್ರಸ್ತಾವನೆಗೆ ಸಂಬಂಧಪಟ್ಟ ಕಡತವನ್ನು ನಾನು ಮುಖ್ಯಮಂತ್ರಿಗಳಿಗೆ ಕಳುಹಿಸಿಕೊಟ್ಟಾಗ, ಆ ಕಡತದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳು, "ನಿರ್ದೇಶಕರು ಮತ್ತು ಇಲಾಖೆಯ ಮಂತ್ರಿಗಳು ಶಾಸನಸಭೆಯ ಅಧಿವೇಶನ ಮುಗಿದ ಮೇಲೆ ಜಪಾನ್ ಮತ್ತು ಕೊರಿಯಾ ರಾಷ್ಟ್ರಗಳಿಗೆ ಹೋಗಬಹುದು" ಎಂದು ಕಡತದಲ್ಲಿ ಬರೆದು ಕಳುಹಿಸಿದರು. ಈ ವೇಳೆಗೆ ಜಪಾನ್ ರಾಷ್ಟ್ರದ ರೇಷ್ಮೆ ಉದ್ಯಮದ ಬಗ್ಗೆ ತಿಳಿದುಕೊಳ್ಳಲು ಅನೇಕ ಸ್ಥಳಗಳಿಗೆ ಭೇಟಿ ಕೊಡಲು "ಅಂತರರಾಷ್ಟ್ರೀಯ ಕೃಷಿ ಸಹಕಾರಿ ಪರಿಣತರ ಸಂಘ, ಟೋಕಿಯೋ" (ಇಂಟರ್ ನ್ಯಾಷನಲ್ ಅಗ್ರಿಕಲ್ಚರರ್ ಕೋ ಆಪರೇಷನ್ ಎಕ್ಸ್‌ಪರ್ಟ್ ಅಸೋಸಿಯೇಷನ್, ಟೋಕಿಯೋ)

ಅಧ್ಯಕ್ಷರಾದ ಡಾ. ಓಮುರಾ (Dr. Omura) ಅವರಿಂದ ನನಗೆ ಆಹ್ವಾನ ಬಂದಿತ್ತು. ಈ ಆಹ್ವಾನವನ್ನು ಆಧರಿಸಿ ಜಪಾನ್ ಮತ್ತು ಕೊರಿಯಾ ರಾಷ್ಟ್ರಗಳಿಗೆ ಭೇಟಿ ಕೊಡುವ ನನ್ನ ಕಾರ್ಯಕ್ರಮವನ್ನು ಕರ್ನಾಟಕ ಸರ್ಕಾರ ಒಪ್ಪಿಗೆ ನೀಡಿ ಕೇಂದ್ರ ಸರ್ಕಾರಕ್ಕೆ ಕಳುಹಿಸಿಕೊಟ್ಟಿತ್ತು. ಈ ಪ್ರವಾಸಕ್ಕೆ ರಾಷ್ಟ್ರದ ಪ್ರಧಾನಿಯ ಒಪ್ಪಿಗೆಯ ಅವಶ್ಯಕತೆಯಿದ್ದು, ೨ ಸಾರಿ ರಾಜ್ಯ ಸರ್ಕಾರದಿಂದ ಕಳುಹಿಸಿದ ಪ್ರಸ್ತಾವನೆಯನ್ನು ಯಾವುದೇ ನಿರ್ದಿಷ್ಟ ಕಾರಣವಿಲ್ಲದೇ ಒಪ್ಪಿಗೆ ಕೊಡದೇ ಹಿಂದಿರುಗಿಸಲಾಯಿತು. ಈ ರಾಷ್ಟ್ರಗಳಲ್ಲಿ ರೇಷ್ಮೆ ಉದ್ಯಮದ ಪ್ರಗತಿ ಮತ್ತು ಚಟುವಟಿಕೆಗಳನ್ನು ಕಣ್ಣಾರೆ ನೋಡಿ ಬರಬೇಕೆಂಬ ಕರ್ನಾಟಕ ಸರ್ಕಾರದ ಮತ್ತು ನನ್ನ ಕಾರ್ಯಕ್ರಮಕ್ಕೆ ಕೇಂದ್ರ ಸರ್ಕಾರ ಅಡ್ಡಿ ಬಂದಿದ್ದರಿಂದ ನಾನು ಸುಮ್ಮನಾದೆ. ಆದಾದ ಕೆಲವು ದಿನಗಳ ಮೇಲೆ ಮುಖ್ಯಮಂತ್ರಿಗಳು ಬೆನ್ನು ನೋವಿನಿಂದ

ಮಲಗಿರುವ ಸಂದರ್ಭದಲ್ಲಿ ಅವರನ್ನು ನಾನು ಕಾಣಲು ಹೋದಾಗ "ನೀವು ಜಪಾನ್ ಮತ್ತು ಕೊರಿಯಾ ಪ್ರವಾಸವನ್ನು ಮುಗಿಸಿ ಬಂದಿರಾ" ಎಂದು ಕೇಳಿದರು. "ಅದು ಸಾಧ್ಯವಾಗಲಿಲ್ಲ. ಪ್ರಧಾನ ಮಂತ್ರಿಗಳಿಂದ ನನ್ನ ಪ್ರವಾಸಕ್ಕೆ ಅನುಮತಿ ದೊರೆಯಲಿಲ್ಲ" ಎಂದು ತಿಳಿಸಿದೆ. ಇದನ್ನು ತಿಳಿದ ಮುಖ್ಯಮಂತ್ರಿಗಳು ಸ್ವಲ್ಪ ಬೇಸರಪಟ್ಟುಕೊಂಡು ತಾರೀಖು ೧೫-೫-೧೯೮೬ ರಂದು ಪ್ರಧಾನಿಗಳಿಗೆ ಪತ್ರ ಬರೆದು ಕೊನೆಯ ಪಕ್ಷ ವೈಯಕ್ತಿಕ ಖರ್ಚಿನಿಂದ ಜಪಾನ್ ಮತ್ತು ಕೊರಿಯಾ ರಾಷ್ಟ್ರಗಳಿಗೆ ಭೇಟಿ ಕೊಡಲು ನನಗೆ ಅನುಮತಿ ಕೊಡಬೇಕೆಂದು ಪತ್ರ ಬರೆದರು. ಈ ಪತ್ರಕ್ಕೆ ಉತ್ತರವಾಗಿ ೨೫-೬-೧೯೮೬ ರಂದು ಪ್ರಧಾನ ಮಂತ್ರಿಗಳು ೨೦ ದಿನಗಳ ನನ್ನ ಪ್ರವಾಸಕ್ಕೆ ಒಪ್ಪಿಗೆಯನ್ನು ನೀಡಿ ಮುಖ್ಯಮಂತ್ರಿಗಳಿಗೆ ಪತ್ರ ಬರೆದರು. ಇದಾದ ಮೇಲೆ ತಾ ೨೬-೬-೧೯೮೬ ರಿಂದ ೧೪-೭- ೧೯೮೬ ರವರೆಗೆ ನನ್ನ ಪ್ರವಾಸ ಕಾರ್ಯಕ್ರಮವನ್ನು ನಿರೂಪಿಸಿ ಎಲ್ಲಾ ಸಂಬಂಧಪಟ್ಟವರಿಗೂ ಕಳುಹಿಸಿಕೊಡಲಾಯಿತು.

## ಜಪಾನ್

ಜೂನ್ ೨೫ ರಂದು ಬೆಂಗಳೂರಿನಿಂದ ರಾತ್ರಿ ೯ ಗಂಟೆ ೧೦ ನಿಮಿಷಕ್ಕೆ ವಿಮಾನದಲ್ಲಿ ಹೊರಟು ರಾತ್ರಿ ಬಾಂಬೆ ತಲುಪಿ, ಹೋಟೆಲ್ "ಸೀರಾಕ್" ನಲ್ಲಿ ರೇಷ್ಮೆ ಕೃಷಿ ನಿರ್ದೇಶಕರಾದ ಶ್ರೀ ಬಿ. ಕೆ. ದಾಸ್‌ರವರು ಮತ್ತು ಇಲಾಖೆಯ ಕಾರ್ಯನಿರ್ವಾಹಕ ಎಂಜಿನಿಯರ್ ಶ್ರೀ ರಾಮಸ್ವಾಮಿಗಳವರೊಟ್ಟಿಗೆ ಸ್ವಲ್ಪ ವಿಶ್ರಮಿಸಿಕೊಡು, ಮತ್ತೆ ೨ ಗಂಟೆಗೆ ವಿಮಾನ ನಿಲ್ದಾಣಕ್ಕೆ ನಾವೆಲ್ಲರೂ ಒಟ್ಟಿಗೆ ಹೋದೆವು. ಬಾಂಬೆಯ ವಿಮಾನ ನಿಲ್ದಾಣದಲ್ಲಿ ಎಲ್ಲವೂ ಸುಗಮವಾಗಿ ನಡೆದು ತಾ. ೨೬-೬-೧೯೮೬ರ ಬೆಳಿಗ್ಗೆ ೫ ಗಂಟೆ ೧೫ ನಿಮಿಷಕ್ಕೆ "ಕ್ಯಾಥಾಯ ಫೆಸಿಫಿಕ್ " (Cathay pacific) ವಿಮಾನ ನಮ್ಮನ್ನು ಹೊತ್ತು ಹೊರಟಿತು. ಬಾಂಕಾಕ್‌ನಲ್ಲಿ ಸ್ವಲ್ಪ ಹೊತ್ತು ನಿಂತು ಮುಂದೆ ಹಾಂಕಾಂಗ್ ತಲುಪಿದಾಗ ಅಲ್ಲಿ ದಿನದ ನಿತ್ಯದ ಕೆಲಸಗಳಿಗೆ ಸ್ವಲ್ಪ ಕಾಲಾವಕಾಶ ದೊರೆಯಿತು. ಮೊದಲೇ ನಿಗದಿ ಮಾಡಿದ ಪ್ರಕಾರ ವಿಮಾನ ಸಂಸ್ಥೆಯ ಹೆಣ್ಣು ಮಗಳ ಸಹಾಯದಿಂದ ವಿಮಾನದ ಬದಲಾವಣೆ ಇನ್ನಿತರೇ ಕೆಲಸಗಳು ಸುಗಮವಾಗಿ ನಡೆದು ೨ ಗಂಟೆ ಕಾಲ "ಕ್ಯಾಥಾಯ್ ಫೆಸಿಫಿಕ್ " ನ ಸ್ಪೆಷಲ್ ಲೌಂಜಿನಲ್ಲಿ ವಿಶ್ರಮಿಸಿ , ಬೇರೆ ವಿಮಾನದಲ್ಲಿ ಹೊರಟು ಭಾರತದ ವೇಳೆ ೫-೪೫ಕ್ಕೆ ಜಪಾನ್ ವೇಳೆ ೮ ಗಂಟೆಗೆ ಟೋಕಿಯೋ ನಗರದ "ನಾರಿಟಾ" (NARITA) ವಿಮಾನ ನಿಲ್ದಾಣದಲ್ಲಿ ಇಳಿದೆ. ಇಡೀ ಪ್ರಯಾಣದಲ್ಲಿ ಯಾವುದೇ ತೊಂದರೆಯಿಲ್ಲದೆ ಜಪಾನ್ ರಾಷ್ಟ್ರವನ್ನು ತಲುಪಿದೆ. ನಿಲ್ದಾಣದಲ್ಲಿ ಟೋಕಿಯೊ ಟ್ರೇಡಿಂಗ್ ಕಂಪನಿಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಇಸೋಬೆ (ISOBE), ಇದರ ಅಧ್ಯಕ್ಷರಾದ ಶ್ರೀ ತನಾಕಾ (TANAKA) ಮತ್ತು ಮಾರುಬೆನಿ (MARUBENI) ಹಾಗೂ ಲಕ್ಕು ಗೋಲ್ಡ್ ಸಂಸ್ಥೆಗಳ ಪ್ರತಿನಿಧಿಗಳು ಸ್ವಾಗತಿಸಿ, ಟೋಕಿಯೋ ನಗರದ ಹೋಟೆಲ್ "ಅಕಾಸಾಕ ಪ್ರಿನ್ಸ್" (AKASAKA PRINCE) ಗೆ ಕರೆತಂದರು. ನಾರಿಟಾ ವಿಮಾನ ನಿಲ್ದಾಣದಿಂದ ಟೋಕಿಯೋ ನಗರಕ್ಕೆ ಸುಮಾರು ೭೦ ಕಿಲೋಮೀಟರುಗಳ ದೂರವಿದೆ. ಹಿಂದಿನ ದಿನದ ಪ್ರಯಾಣದ ಆಯಾಸ ನಿವಾರಿಸಿಕೊಳ್ಳಲು ಇಡೀ ದಿನ ವಿಶ್ರಾಂತಿ

ಪಡೆದುಕೊಳ್ಳಬೇಕೆಂಬುದು ಇಲ್ಲಿನ ಸ್ನೇಹಿತರ ಅಭಿಪ್ರಾಯ. ವಿಶ್ರಾಂತಿಯ ನಂತರ ತಾ. ೨೭.೬.೮೬ರಂದು ಡಾ. ಓಮುರಾರವರನ್ನು ಭೇಟಿ ಮಾಡಿ ಕಾರ್ಯಕ್ರಮದ ಬಗ್ಗೆ ಚರ್ಚಿಸಿದೆ. ತಾ.೨೭ ಮತ್ತು ೨೮ರಂದು ಜಪಾನ್ ರೇಷ್ಮೆ ಉದ್ಯಮದ ಪಿತಾಮಹ ಎನ್ನಿಸಿಕೊಂಡಿರುವ ಡಾ. ಓಮುರಾರವರ ಮನೆಯಲ್ಲಿ ರೇಷ್ಮೆ ಉದ್ಯಮದ ಬಗ್ಗೆ ಅತ್ಯಂತ ಉಪಯುಕ್ತವಾದ ಚರ್ಚೆ ನಡೆಸಿದೆ.

**ಡಾ. ಓಮುರಾ ಜೊತೆ**

ಸುಮಾರು ೮೦ ವರ್ಷಗಳಿಗೂ ಮೀರಿದ ಈ ವ್ಯಕ್ತಿ ಹತ್ತಾರು ವರ್ಷಗಳು ಜಪಾನ್‌ನ ರೇಷ್ಮೆ ಸಂಶೋಧನಾ ಕೇಂದ್ರದ ಮುಖ್ಯಸ್ಥರಾಗಿದ್ದವರು ಮತ್ತು ಜಪಾನ್‌ನ ರೇಷ್ಮೆ ಉದ್ಯಮದಲ್ಲಿ ಅತ್ಯಂತ ಗೌರವಾನ್ವಿತ ವ್ಯಕ್ತಿ. ನಾನು ಜಪಾನ್ ತಲುಪಿದ ಕೂಡಲೇ ಕೆಲವು ಸ್ನೇಹಿತರು ನನಗೆ ತಿಳಿಸಿದರು. ಡಾ. ಓಮುರಾ ಅವರು ಸತ್ಯವನ್ನು ಹೇಳುವುದರಲ್ಲಿ ನಿಸ್ಸೀಮರು. ಅವರು ಆಡಿದ ಮಾತುಗಳಿಂದ ಯಾರಿಗೆ ನೋವು ಆಗುತ್ತದೆ, ಯಾರಿಗೆ ಖುಷಿ ಆಗುತ್ತದೆ ಎನ್ನುವುದರ ಬಗೆಗೆ ಅವರ ಚಿಂತೆ ಇಲ್ಲ ಎಂದು ಅವರ ಸ್ವಭಾವದ ಬಗ್ಗೆ ತಿಳಿಸಿದರು. ನನ್ನ ಸ್ವಭಾವದ ಬಗ್ಗೆ ಗೊತ್ತಿಲ್ಲದ ಈ ಮುದುಕ ಮೊದಲನೆಯ ದಿನದ ಚರ್ಚೆಯ ಸಂದರ್ಭದಲ್ಲಿ ಸ್ವಲ್ಪ ಹಿಡಿತವಾಗಿಯೇ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ನಾನು ಅವರಿಗೆ ತಿಳಿಸಿದೆ "ಒಬ್ಬ ಮಂತ್ರಿಯಾಗಿ ನಾನು ನಿಮ್ಮಲ್ಲಿಗೆ ಬಂದಿಲ್ಲ. ರೇಷ್ಮೆ ಉದ್ಯಮದಲ್ಲಿರುವ ಸಮಸ್ಯೆಗಳ ಬಗೆಹರಿಸಲು ಸಾಧ್ಯವಾಗುವಂಥ ಪಾಠವನ್ನು ನಿಮ್ಮಲ್ಲಿ ಕಲಿಯುವ ಒಬ್ಬ ವಿದ್ಯಾರ್ಥಿಯಾಗಿ ನಾನು ಬಂದಿದ್ದೇನೆ. ಆದ್ದರಿಂದ ಚರ್ಚೆ ಮುಕ್ತವಾಗಿ ಸಹಜವಾಗಿ ಇರಬೇಕು" ಎಂದು ಅವರಲ್ಲಿ ನಾನು ಕೇಳಿಕೊಂಡೆ. ಮೊದಲನೆಯ ದಿನದ ನಮ್ಮ ಚರ್ಚೆಯಲ್ಲಿ ನಾನು ಮತ್ತು ಶ್ರೀ ಇಸೋಬೆರವರು ಭಾಗವಹಿಸಿದ್ದೆವು. ಎರಡನೆ ದಿನದ ಚರ್ಚೆಯಲ್ಲಿ ನಾನು ಮತ್ತು ಶ್ರೀ ಇಸೋಬೆರವರು ಭಾಗವಹಿಸಿದ್ದೆವು. ಎರಡನೆ ದಿನದ ಚರ್ಚೆಯಲ್ಲಿ ನಮಗೆ ಸಹಾಯ ಮಾಡಲು I.A.C.E.A. ನ (International Agricultural Co - operation Experts Associations) ಶ್ರೀ ವೇದ ಅವರು ಮತ್ತು ಈ ಸಂಸ್ಥೆಯ ಹೆಣ್ಣು ಮಗಳೊಬ್ಬರು ನಮ್ಮನ್ನು ಕೂಡುಕೊಂಡರು. ತಾ. ೨೭ ರಂದು ನಡೆದ ಚರ್ಚೆಯಲ್ಲಿ ಡಾ. ಓಮುರಾರವರು "The bad philosophy of officials in indian research field is not helpful to the rearers. india is two hundred years behind the japan sericulture. He could not find any farmer in any of the sericultural research institute in india. (Either in Mysore institute or at Thalaghattapura). He says that it was painful. He was also wondered whether there are any one who has done the research in sericulture from the begining to end. " ತಾ. ೨೮ ರಂದು ೯ ಗಂಟೆಗೆ ಸಿದ್ಧವಾಗಲು ಸಾಧ್ಯವಾಗಲಿಲ್ಲ. ಒಂದು ಗಂಟೆ ನಿಧಾನವಾಯಿತು. ಕಾರಣ ಭಾರತದ ಕಾಲಮಾನಕ್ಕೂ, ಜಪಾನಿನ ಕಾಲಮಾನಕ್ಕೂ ಮೂರುವರೆ ಗಂಟೆಗಳ ಕಾಲ

ವ್ಯತ್ಯಾಸವಿರುವುದರಿಂದ ಅದಕ್ಕೆ ಹೊಂದಿಕೊಳ್ಳಲು ಸ್ವಲ್ಪ ನನಗೆ ತೊಂದರೆಯಾಯಿತು. ಸುಮಾರು ೧೧ ಗಂಟೆಗೆ ಚರ್ಚೆ ಮೊದಲಾಯಿತು. ಅವರ ಪತ್ನಿ ಅಲ್ಲಿಯೇ ಊಟಕ್ಕೆ ಏರ್ಪಾಡು ಮಾಡಿದರು. ಭಾರತೀಯನಾದ ನನಗೆ ಹೊಂದಿಕೊಳ್ಳುವಂಥ ಊಟ. ಊಟ ಮಾಡುವಾಗ ವೃದ್ಧ ಓಮುರಾರವರು ನನಗೆ ಹೇಳಿದರು. "My wife has taken courage to prepare the cury for the Indian" ಸಂಜೆ ೫ ಗಂಟೆಯವರೆಗೆ ಸತತವಾಗಿ ಚರ್ಚೆ ನಡೆಯಿತು. ರೇಷ್ಮೆ ಉದ್ಯಮದ ವಿಶ್ವದ ಎಲ್ಲಾ ರಾಷ್ಟ್ರಗಳ ಎಲ್ಲಾ ಸಂಸ್ಥೆಗಳ ಬಗ್ಗೆ ಸಮೀಕ್ಷೆ ನಡೆಸಿದೆವು. ಈ ಚರ್ಚೆ ನಡೆದ ಮೇಲೆ ನನ್ನ ಸ್ನೇಹಿತರು ಹೇಳಿದ ಮಾತು ನಿಜವೆನಿಸಿತು. ವಯಸ್ಸಿನಿಂದ ಹಣ್ಣಾಗಿ ಅನುಭವದಿಂದ ಪಕ್ವವಾಗಿರುವ ಈ ಮುದುಕ ಮನಸ್ಸಿನಲ್ಲಿದ್ದಂತೆ ಹೇಳುವುದರಲ್ಲಿ ಹಿಂಜರಿಯ ಎನ್ನುವುದು ನನ್ನ ಮತ್ತು ಅವರ ನಡುವೆ ನಡೆದ ಚರ್ಚೆಯ ವಿವರ ಹೀಗಿದೆ:

ಭಾರತದಲ್ಲಿರುವ ರೇಷ್ಮೆ ವಿಜ್ಞಾನಿಗಳು ತಳೆದಿರುವ ಮೂಲ ತತ್ವವೇ ಕಸುಬಿನ ಬೆಳವಣಿಗೆಗೆ ಪೋಷಕವಾಗಿಲ್ಲ. ಭಾರತದಲ್ಲಿ ಈಗ ಆಗಿರುವ ಬೆಳವಣಿಗೆ ಜಪಾನಿನಲ್ಲಿ ಶತಮಾನಗಳ ಹಿಂದೆಯೇ ಆಗಿತ್ತು. ಎಲ್ಲಿ ಯಾರನ್ನಾದರೂ ತೋರಿಸಿ ನೋಡೋಣ? ರೇಷ್ಮೆ ಉದ್ಯಮದ ಮೊದಲ ಪಾಠದಿಂದ ಕಡೆಯ ವಿಷಯದವರೆಗೂ ಸಂಶೋಧನೆಯನ್ನು ಕೈಗೊಂಡಿರುವ ಅಥವಾ ವಿಚಾರವನ್ನು ಖಚಿತವಾಗಿ ಹೇಳಬಲ್ಲವರು ಇದ್ದಾರಾ? ಅವರು ಮಾಡುವ ಸಂಶೋಧನೆ ಬೆಳೆಗಾರನಿಗೆ ಅನುಕೂಲವಾಗಿದೆಯೇ ? ಮೈಸೂರಿನಲ್ಲಿರುವ ಸಂಶೋಧನಾ ಸಂಸ್ಥೆಯೇ ಆಗಲೀ, ಬೆಂಗಳೂರಿಗೆ ಸಮೀಪದಲ್ಲಿರುವ ತಲಘಟ್ಟಪುರದ ಸಂಸ್ಥೆಯೇ ಆಗಲೀ ತಮ್ಮ ಸಂಶೋಧನಾ ಚಟುವಟಿಕೆಗಳಲ್ಲಿ ರೈತನನ್ನು ಒಳಪಡಿಸಿಕೊಂಡಿವೆಯೇ? ಇದು ಬಹು ಮುಖ್ಯ ವಿಚಾರವಲ್ಲವೆ? ಎಂದರು. ಇಪ್ಪತ್ತೈದು ವರ್ಷಗಳಷ್ಟು ದೀರ್ಘಕಾಲ ಸಂಶೋಧನೆಯಲ್ಲಿ ಆಸಕ್ತವಾಗಿರುವ ಮೈಸೂರು ಸಂಸ್ಥೆಯ ಕೊಡುಗೆಯ ವಿಚಾರ ಬಂದಾಗ ಅವರಿಗೆ ತುಂಬಾ ಬೇಸರವೇ ಆಗಿತ್ತು.

ನಾನು ಅವರೊಟ್ಟಿಗಿದ್ದಾಗ ಅವರ ಒಂದು ಕಣ್ಣು ಅತೀವ ನೋವಿನಿಂದ ಕೂಡಿತ್ತು. ಔಷಧ ಹಾಕಿಕೊಂಡಿದ್ದರು. ಆಗಾಗ ಅದರಿಂದಾಗುವ ಯಾತನೆಯನ್ನು ಅವರ ಮುಖದಲ್ಲಿಯೇ ಕಾಣುತ್ತಿದ್ದೆ. ಆದರೆ ರೇಷ್ಮೆ ಕೈಗಾರಿಕೆಯ ಮಾತು ಬಂದಾಗ ಅವರ ಉತ್ಸಾಹ ಪುಟಿದೇಳುತ್ತಿತ್ತು. ಭಾವನೆಗಳು ಸ್ಫುಟಗೊಳ್ಳುತ್ತಿದ್ದುವು. ಅವರ ಶ್ರದ್ಧೆ ಮತ್ತು ಆಸಕ್ತಿಯನ್ನು ಕಂಡು ನಾನು ಮೂಕನಾಗಿದ್ದೆ.

ಜಪಾನಿನಲ್ಲಿ ರೇಷ್ಮೆ ಉದ್ಯಮದ ಉಗಮವಾದದ್ದು, ಪ್ರಗತಿಯ ಮೆಟ್ಟಿಲು ಏರುತ್ತಾ ನಡೆದದ್ದು ಎಲ್ಲವನ್ನೂ ವಿವರಿಸಿದರು. ರೇಷ್ಮೆ ಹುಳುವಿಗೆ ಬರುವ ಮಹಾಮಾರಿಯೆನಿಸಿರುವ "ಪೆಬ್ರಿನ್" ರೋಗ ಇಡೀ ಉದ್ಯಮದ ಭವಿಷ್ಯವನ್ನು ನಿರ್ಧರಿಸುತ್ತದೆ. ಇದು ಜಪಾನಿನಲ್ಲಿ ಮಾತ್ರವಲ್ಲ ಈ ಕಸುಬನ್ನು ಕೈಗೊಂಡಿರುವ ಎಲ್ಲಾ ರಾಷ್ಟ್ರಗಳಲ್ಲಿ ಕೂಡ ಇದನ್ನು ಯಾರೂ ಮರೆಯತಕ್ಕದಲ್ಲ ಎಂದರು. ಒಂದು ಕಾಲಕ್ಕೆ ಜಪಾನಿನಲ್ಲಿ ಹತ್ತು ಸಹಸ್ರ ತಾಂತ್ರಿಕ ಅಧಿಕಾರಿಗಳು (ಇನ್‌ಸ್ಪೆಕ್ಟರುಗಳು) ಫೆಬ್ರಿನ್ ರೋಗ ಪತ್ತೆಗಾಗಿ ನಿಯೋಜಿಸಲ್ಪಟ್ಟಿದ್ದರಂತೆ.

ಇಷ್ಟಾದರೂ ಫೆಬ್ರಿನ್ ರೋಗವನ್ನು ಪೂರ್ಣವಾಗಿ ಉಚ್ಚಾಟನೆ ಮಾಡಲಾಗಿಲ್ಲ. ಆದರೆ ನಿಯಂತ್ರದಲ್ಲಿಟ್ಟುಕೊಂಡು ಕೆಲಸ ಮಾಡಲಾಗುತ್ತಿದೆಯೆಂದು ಹೇಳಿದರು.

ಈ ಮಾತು ಪ್ರಸ್ತಾಪಿಸಲ್ಪಡುತ್ತಿದ್ದಾಗ ತಕ್ಷಣವೇ ನನ್ನ ಆಲೋಚನೆ ಕರ್ನಾಟಕ ರಾಜ್ಯದಲ್ಲಿ ಕೆಲವು ಅಧಿಕಾರಿಗಳು ವ್ಯಕ್ತಪಡಿಸಿದ್ದ ಅಭಿಪ್ರಾಯದೆಡೆಗೆ ಹೋಯಿತು. "ಫೆಬ್ರಿನ್ ರೋಗ ಈಗ ಇಲ್ಲವೇ ಇಲ್ಲ" ಎಂದು ನಮ್ಮ ರಾಜ್ಯದಲ್ಲಿ ಹೇಳಿದ್ದರಲ್ಲ ಎಂದು ಓಮುರಾ ಅವರ ಕಡೆ ನೋಡುತ್ತಾ ಹೇಳಿದೆ. ಅದಕ್ಕೆ ಅವರ ಉತ್ತರ "ಫೆಬ್ರಿನ್ ರೋಗವನ್ನು ಉಚ್ಚಾಟಿಸಲಾಗಿದೆಯೆನ್ನುವ ಮಾತು ಪೂರ್ಣ ಅಸಂಬದ್ಧ.... ಈ ರೋಗದ ವಿರುದ್ಧ ಸಮರ ನಿರಂತರ ನಡೆಯುತ್ತಿರಲೇಬೇಕು. ನಿಯಂತ್ರಿಸಬಹುದೇ ಹೊರತು ಪೂರ್ಣ ನಿರ್ಮೂಲನ ಸಾಧ್ಯವಿಲ್ಲ. ಈ ರೋಗವನ್ನು ಪತ್ತೆಮಾಡಲು ಲಭ್ಯವಿರುವ ತಾಂತ್ರಿಕತೆ ಅಥವಾ ತಂತ್ರಜ್ಞಾನವೇ ಸರಿಯಿಲ್ಲದಿರುವಾಗ ಅದನ್ನು ನಿರ್ಮೂಲ ಮಾಡಿಬಿಟ್ಟಿದ್ದೇವೆನ್ನುವುದು ಎಷ್ಟರಮಟ್ಟಿಗೆ ಸರಿ" ಎಂದರು.

ಫೆಬ್ರಿನ್ ರೋಗ ಪತ್ತೆಗಾಗಿ ನಮ್ಮ ದೇಶದಲ್ಲಿ ಈಗ ಮಾಡಿರುವ ವ್ಯವಸ್ಥೆ ಎಷ್ಟರಮಟ್ಟಿಗೆ ಸರಿಯಿದೆ ಎನ್ನುವ ಯೋಚನೆ ನನ್ನನ್ನು ಕಾಡಿತ್ತು. ಮಲ್ಟಿವೋಲ್ಟಿನ್ ತಳಿಯ ಸಾಕಣೆಯನ್ನು ನಮ್ಮ ರಾಜ್ಯದಲ್ಲಿ ನಿಲ್ಲಿಸಲು ಸಾಧ್ಯವೇ ಇಲ್ಲ. ಅಂತಹ ಪರಿಸ್ಥಿತಿಯಿದೆ. ಫೆಬ್ರಿನ್ ರೋಗದ ಭಯ ಸದಾ ಬೆನ್ನ ಹಿಂದೆಯೇ ಕಾಡುತ್ತಿದೆ. ಈ ತಳಿಯೂ ಸಹ ಫೆಬ್ರಿನ್ ರೋಗದಿಂದ ಮುಕ್ತವಾಗಿ ಉಳಿಯುವಂತೆ ಮಾಡಲು ಆಗಿಲ್ಲ. ನನ್ನ ವಿಚಾರ ಧಾರೆಯನ್ನು ಮುಂದಿಟ್ಟೆ. ಈ ತಳಿಯ ಬಿತ್ತನೆ ತಯಾರಿಕೆಗೆ ಪ್ರತ್ಯೇಕ ವಲಯವನ್ನು ಗುರುತಿಸಿದ್ದೇವೆ ಎಂದೂ ಹೇಳಿದೆ. ಇಷ್ಟಾದರೂ ಬೇಸಿಗೆಯ ದಿನಗಳಲ್ಲಿ ಬೆಳೆ ಕೆಡುತ್ತಿವೆ ಎನ್ನುವುದನ್ನು ಪ್ರಸ್ತಾಪ ಮಾಡಿದೆ. ಅದಕ್ಕೆ ಅವರು ಹೇಳಿದರು "ಈ ತಳಿ ಬಹಳ ವರ್ಷಗಳಿಂದಲೂ ಇರುವುದರಿಂದ ಸ್ವಾಭಾವಿಕವಾಗಿಯೇ ದುರ್ಬಲಗೊಳ್ಳುತ್ತಿದೆ. ಗಟ್ಟಿಮುಟ್ಟಾದ ಮತ್ತೊಂದು ತಳಿಯನ್ನು ನಿಮ್ಮ ದೇಶದ ವಿಜ್ಞಾನಿಗಳು ಸಂಶೋಧಿಸಬೇಕು.... ಅವರೇಕೆ ಈ ವಿಷಯದಲ್ಲಿ ನಿರಾಸಕ್ತರಾಗಿದ್ದಾರೆ" ಎಂದು ನನ್ನನ್ನೇ ಪ್ರಶ್ನಿಸಿದರು.



ಬೆಳೆಗಳು ಕೆಡುತ್ತಿರುವ ಕಡೆ (Failure of crops) ಮಾತು ಹೊರಳಿತ್ತು. ಇಷ್ಟೆಲ್ಲ ಬೆಳೆಗಳೂ ರೈತರ ಕೈ ಹತ್ತುತ್ತಿಲ್ಲ. ಕೆಲವು ಅರೆಬರೆಯಾಗಿ, ಕೆಲವು ಸಂಪೂರ್ಣವಾಗಿ ಬೆಳೆಗಳು ಕೆಡುತ್ತಿರುವುದನ್ನು ರೈತರು ಅನುಭವಿಸುತ್ತಿದ್ದಾರೆ. ಅದರಲ್ಲಿಯೂ ಬೈವೋಲ್ಟಿನ್ ತಳಿಯಲ್ಲಿ ಈ'ದೂರು' ವಿಪರೀತ ಎಂದು ಹೇಳಿದೆ.

ರೇಷ್ಮೆ ಇಲಾಖೆಯ ಅಧಿಕಾರಿಗಳು ಹಾಗೂ ಸಂಶೋಧನೆಯಲ್ಲಿರುವ ತಜ್ಞರು ಕೆಲವು ಬೈವೋಲ್ಟಿನ್ ತಳಿಗಳನ್ನು ಪರಿಚಯ ಮಾಡಿ ಇದರಿಂದ "ಬಿಳಿಯ ಕ್ರಾಂತಿ" ಮಾಡುತ್ತೇವೆ ಎನ್ನುತ್ತಿದ್ದಾರೆ. ನಾನು ರೇಷ್ಮೆ ಬೆಳೆಗಾರರ ನಿಕಟ ಸಂಪರ್ಕವಿಟ್ಟುಕೊಂಡಿದ್ದೇನೆ.... ಕಣ್ಣಾರೆ ಕಂಡಿದ್ದೇನೆ. ಕರ್ನಾಟಕ ಸಿಲ್ಕ್ ಅಸೋಸಿಯೇಷನ್‌ನ ಅಧ್ಯಕ್ಷನಾಗಿ, ಶಾಸಕನಾಗಿ, ಮಂತ್ರಿಯಾಗಿ.... ಹೀಗೆ ನಾನಾ ಅಧಿಕಾರಗಳಲ್ಲಿದ್ದುಕೊಂಡು ಎಲ್ಲೆಡೆ ಪ್ರವಾಸ ಮಾಡಿ ಕಂಡುಕೊಂಡಿರುವ ನಿಷ್ಠುರ ಸತ್ಯವೆಂದರೆ- ಬೈವೋಲ್ಟಿನ್ ತಳಿ ಸಾಕಾಣೆ ಮಾಡಿಸುವಲ್ಲಿ

ಇಲಾಖೆಯು ನೂರಕ್ಕೆ ನೂರರಷ್ಟು ಯಶಸ್ಸು ಕಂಡೇಯಿಲ್ಲ. ಅದರಲ್ಲಿಯೂ ಬೇಸಿಗೆಯ ದಿನಗಳಲ್ಲಿ ವಿಶ್ವ ಬ್ಯಾಂಕ್ ನೆರವಿನ ಯೋಜನೆಯಲ್ಲಿ ಇಟ್ಟುಕೊಳ್ಳಲಾಗಿದ್ದ ಗುರಿಯನ್ನು ತಲುಪಲು ಇಲಾಖೆಗೆ ಸಾಧ್ಯವಾಗಲಿಲ್ಲ. ಇದಕ್ಕೆ ಕಾರಣವೇನು ಎಂದು ಇಲಾಖೆಯವರನ್ನು ಕೇಳಿದರೆ ಈಗ ಲಭ್ಯವಿರುವ ತಳಿಗಳೂ ಉತ್ತಮವಾಗಿಲ್ಲ ಎನ್ನುವುದು. ಆದರೆ ಈ ವಾದವನ್ನು ಸಂಶೋಧಕರು ಒಪ್ಪುವುದಿಲ್ಲ. ಇಲಾಖೆಯ ವಿಸ್ತರಣಾ ಕಾರ್ಯ ಸಮರ್ಪಕವಾಗಿಲ್ಲ. ಅವಶ್ಯಕವಿದ್ದಷ್ಟು ಶ್ರಮ ಹಾಗೂ ಕ್ರಮಗಳನ್ನು ತೆಗೆದುಕೊಂಡಿಲ್ಲ. ಆದುದರಿಂದಲೇ ಗುರಿ ಸಾಧನೆಯಲ್ಲಿ ಎಡವಬೇಕಾಯಿತು.

ಈ ಎರಡು ವಾದಗಳಲ್ಲಿ ಯಾವುದು ಸರಿಯೆನ್ನುವುದೇ ನನಗೆ ಅರ್ಥವಾಗುತ್ತಿಲ್ಲ ಎಂದು ನನ್ನ ಅಳಲನ್ನು ತೋಡಿಕೊಂಡೆ. ಎಲ್ಲವನ್ನೂ ಸಮಚಿತ್ತದಿಂದ ಆಲಿಸುತ್ತಿದ್ದ ಓಮುರಾ ಹೇಳಿದರು.

ಭಾರತದಲ್ಲಿರುವ ರೇಷ್ಮೆ ಕೃಷಿ ಸಂಶೋಧಕರು ತಂತಮ್ಮ ನಿಲುವಿನಲ್ಲಿ ವಿನೀತಭಾವ (Not modest in their approach) ವನ್ನು ಹೊಂದಿಲ್ಲ. ತಾವು ಮಾಡಿರುವ ಕೆಲಸವೇ ಸರ್ವೋತ್ಕೃಷ್ಟ ಎಂಬ ನಂಬಿಕೆಯಲ್ಲಿ ಮುಳುಗಿದ್ದಾರೆ. ಇದರಂತಹ ಆತ್ಮಘಾತುಕ ಮನೋಭಾವ ಮತ್ತೊಂದಿರಲಾರದು....

ಹೀಗೆ ಹೇಳುವಾಗ ಮೈಸೂರಿನಲ್ಲಿರುವ ಕೇಂದ್ರ ಸಂಶೋಧನಾ ಸಂಸ್ಥೆಯ ನಿರ್ದೇಶಕರಾಗಿದ್ದು ನಂತರ ತಲಘಟ್ಟಪುರದಲ್ಲಿನ ರಾಜ್ಯ ಸಂಶೋಧನಾ ಸಂಸ್ಥೆಯ ಮುಖ್ಯಸ್ಥರಾಗಿದ್ದುಕೊಂಡು ಈಗ ನಿವೃತ್ತರಾಗಿರುವ ಡಾ. ಎಸ್. ಕೃಷ್ಣಸ್ವಾಮಿಯವರ ಹೆಸರನ್ನು ನೇರವಾಗಿ ಪ್ರಸ್ತಾಪಿಸಿದ ಅವರು ತಾವು ಕರ್ನಾಟಕದಲ್ಲಿ ನಡೆದಿರುವ ಸಂಶೋಧನೆಯ ವಿವರಗಳನ್ನು ಪಡೆದ ರೀತಿಯನ್ನು ನೆನಪು ಮಾಡಿಕೊಂಡರು. ಒಳ್ಳೆಯ ಫಲಿತಾಂಶ ನೀಡಿರುವ ಸಂಗತಿಗಳನ್ನು ಮಾತ್ರವೇ ತಿಳಿಸಿ ಸಂಶೋಧನೆಯೇ ಆಗದಿರುವ ಅಥವಾ ಕೈ ಬಿಟ್ಟಿರುವ ಆದರೆ ಅಗತ್ಯವಾಗಿ ಆಗಲೇಬೇಕಿರುವ ಬಹು ಮುಖ್ಯ ವಿಚಾರ ಇತ್ಯಾದಿಗಳನ್ನು ಮರೆಮಾಚಲಾಯಿತಂತೆ. ಕೇಂದ್ರ ರೇಷ್ಮೆ ಮಂಡಳಿಯ ಉಪಾಧ್ಯಕ್ಷರಾಗಿದ್ದ ಕೈಮಗ್ಗ ಅಭಿವೃದ್ಧಿ ಕಮೀಷನರ್ ಶ್ರೀ ರಾಮದೊರೈ ಮತ್ತು ಕರ್ನಾಟಕ ಸರ್ಕಾರದ ಜಂಟಿ ನಿರ್ದೇಶಕರಾಗಿದ್ದ ಡಿ. ಮಹಾದೇವಪ್ಪ ಇವರಿಬ್ಬರು ಮಾತ್ರ ಸಂಶೋಧನೆಯಲ್ಲಿನ ಹಿಂಜರಿತ ಹಾಗೂ ಲೋಪಗಳ ಕೊರತೆಗಳ ವಿವರ ತಿಳಿಸಿ ಅದೆಲ್ಲವನ್ನೂ ಸಮರ್ಥವಾಗಿ ಬಗೆಹರಿಸಲು ಸಲಹೆ ಬೇಕೆಂದು ಬಯಸಿದರಂತೆ. ಇವರಿಬ್ಬರ ಅಭಿಪ್ರಾಯಗಳು ಕೆಲವರಿಗೆ ಅಪಥ್ಯವಾದಂತೆ ಕಂಡಿತು ಎನ್ನುವ ಓಮುರಾ "ಸಂಶೋಧಕರಲ್ಲಿನ ಈ ಮನೋಭಾವವನ್ನು ಸರಿಪಡಿಸಲು ಸರ್ಕಾರ ಯಾವ ಕ್ರಮವನ್ನೂ ಕೈಗೊಂಡಿಲ್ಲವೇಕೆ" ಎಂದು ನನ್ನನ್ನು ಪ್ರಶ್ನಿಸಿ ಬೆಳೆಯಬೇಕಾಗಿರುವ ಉದ್ಯಮವೊಂದರ ನ್ಯಾಯಯುತ, ವೈಜ್ಞಾನಿಕ ವಿಶ್ಲೇಷಣೆ ಮುಸುಕಿನಲ್ಲಿಯೇ ಉಳಿಯಬಾರದು... ಸಂಶೋಧನೆಯ ಆರೋಗ್ಯಕರ ಬೆಳವಣಿಗೆಯಾಗಬೇಕಾದರೆ ಅಲ್ಲಿರುವ ಕೊರತೆ, ಲೋಪ, ತಪ್ಪುಗಳನ್ನು ಸರಿಪಡಿಸಿಕೊಳ್ಳುವ ಪ್ರಯತ್ನವಾಗಬೇಕೇ ಹೊರತಾಗಿ ಮುಚ್ಚಿಡುವುದು ಒಳ್ಳೆಯದೆ?" ಎಂದು ನನ್ನನ್ನು ಪ್ರಶ್ನಿಸಿ ವಾದಕ್ಕೆ ಎಳೆದರು.

ರೇಷ್ಮೆ ಬೆಳೆಗಾರರ ಸಮಸ್ಯೆಗಳನ್ನು ಗಮನಿಸಿದರೆ ಅವುಗಳಿಗೆ ಸಂಶೋಧಕರು ತೋರಿಸಿರುವ ಪರಿಹಾರವೇನೂ ಸಾಲದು ಎನ್ನುವ ಶ್ರೀಯುತರು ಮೈಸೂರಿನಲ್ಲಿರುವ ಸಂಶೋಧನಾ ಸಂಸ್ಥೆಯ ಕಾರ್ಯವೈಖರಿಯನ್ನು ಕಟುವಾಗಿ ಟೀಕಿಸುತ್ತಾರೆ. ಉತ್ಸಾಹಿಗಳಿಗೆ ಪ್ರೋತ್ಸಾಹ ಕೊಡದೆ, ಅವರ ಪ್ರಯತ್ನಗಳನ್ನು ಪ್ರಾರಂಭದಲ್ಲಿಯೇ ತಳ್ಳಿಹಾಕುವ ಮನೋಭಾವದಿಂದಾಗಿ ಈ ಸಂಸ್ಥೆಯಿಂದ ನಿರೀಕ್ಷಿತ ಮಟ್ಟದಿಂದ ಸಂಶೋಧನೆ ಸಾಧ್ಯವಾಗಿಲ್ಲವೆನ್ನುತ್ತಾರೆ. (ಈ ವಿಚಾರವಾಗಿ ಶಾಸಕನಾಗಿ ವಿಧಾನಸಭೆಯಲ್ಲಿ ಮತ್ತು ಮಂತ್ರಿ ಸ್ಥಾನದಲ್ಲಿದ್ದುಕೊಂಡು ಚಾಮರಾಜನಗರದಲ್ಲಿ ನಡೆದ ಸಮಾರಂಭದಲ್ಲಿ ನಾನು ನನ್ನ ಅನಿಸಿಕೆಗಳನ್ನು ಬಹಿರಂಗಗೊಳಿಸಿದ್ದಾಗ ಸಂಶೋಧಕರು ಒಪ್ಪಿರಲಿಲ್ಲ).

ರೇಷ್ಮೆ ತಳಿಗಳ ಆಯ್ಕೆಯಲ್ಲಿ ಭಾರತೀಯ ಸಂಶೋಧನಾ ತತ್ವದಲ್ಲಿ ಮೂಲಭೂತ ಬದಲಾವಣೆಯಾಗಬೇಕೆನ್ನುವುದು ಓಮುರಾ ಅವರ ಅಭಿಮತ. ಅವರು ಹೇಳುತ್ತಾರೆ:

*ತಳಿಗಳ ಆಯ್ಕೆ ಮಾಡುವಾಗ ಅದನ್ನು ಬೆಳೆಸುವ ರೈತನಿಗೆ ಹೆಚ್ಚಿನ ಅನುಕೂಲ ಒದಗುವಂತಿರಬೇಕು.

*ತಳಿ ಹೆಚ್ಚು ದೃಢಕಾಯವಾಗಿದ್ದರೆ ಸಾಕಣೆ ಕಷ್ಟಕರವಾಗದು.

*ರೇಷ್ಮೆ ಮೊಟ್ಟೆ ಉತ್ಪಾದನೆ ಉತ್ತಮ ಗುಣಮಟ್ಟ ಉಳಿಸಿಕೊಂಡು ವೆಚ್ಚ ಕಡಿಮೆಯಾಗುವ ವಿಧಾನ ರೂಪುಗೊಳ್ಳಬೇಕು.

*ತಳಿಗಳನ್ನು ಆಯ್ಕೆ ಮಾಡುವಾಗ ರೇಷ್ಮೆಯ (ಶೇಕಡವಾರು) ಅಂಶ ಹೆಚ್ಚಾಗಿದೆ ಎನ್ನುವುದೇ ಪ್ರಮುಖವಾಗಬಾರದು ಎಂದು ಖಚಿತವಾಗಿ ಹೇಳುವ ಓಮುರಾ ಅವರ ಅಭಿಪ್ರಾಯ ತಿಳಿದು ನಾನೂ ಸಹ ಆಶ್ಚರ್ಯಚಕಿತನಾದೆ.

## ಕ್ಯೋಟೋ

ರಾತ್ರಿ 'ಚೈನಾ' ಹೋಟೆಲ್‌ನಲ್ಲಿ ಊಟ ಮಾಡಿ ಹೋಟೆಲ್ ಸೇರಿ ನಾಳೆ ೭-೦೦ ಗಂಟೆಗೆ ಸಿದ್ಧವಾಗಬೇಕು ಅಂದರೆ ನಮ್ಮ ಕಾಲಮಾನದ ಪ್ರಕಾರ ೨-೦೦ ಗಂಟೆಗೆ ಏಳಬೇಕು ಎನ್ನುವ ಚಿಂತೆಯಲ್ಲಿ ಮಲಗಿದೆ. ತಾ. ೨೯ರಂದು ಜಪಾನಿನ ಸುಂದರ ಪ್ರದೇಶವಾದ "ಕ್ಯೋಟೋ"(KYOTO)ಗೆ ಹೊರಟೆವು. ಟೋಕಿಯೋದಲ್ಲಿ ಬೇಸಿಗೆಯಾದರೂ ಮಳೆ ಬೀಳುತ್ತಿದೆ. ಬೆಳಿಗ್ಗೆ ೫.೩೦ಕ್ಕೆ ಹೊರಟ ನಾವು ಮಳೆ ಬೀಳುತ್ತಾ ಇರುವ ಟೋಕಿಯೋ ನಗರದಲ್ಲಿ ಪ್ರಯಾಣ ಬೆಳೆಸಿದೆವು. ಸುತ್ತಲೂ ಎತ್ತರವಾದ ಕಟ್ಟಡ, ಸುಮಾರು ಒಂದು ಕೋಟಿ ೨೫ ಲಕ್ಷ ಜನಸಂಖ್ಯೆಯಿರುವ ಈ ನಗರದಲ್ಲಿ ಎಲ್ಲರಿಗೂ ಕಾರು ಇದೆ. ಆದರೆ ಎಲ್ಲೂ ಸದ್ದೇ ಇಲ್ಲ. ೬೦ ಕಿಲೋ ಮೀಟರುಗಳ ಪ್ರಯಾಣದಲ್ಲಿ ಯಾರೂ ಶಬ್ದ(Horn) ಮಾಡಿದ್ದು ಕೇಳಿಸಲಿಲ್ಲ. ಟೋಕಿಯೋದಿಂದ "ಬುಲೆಟ್ ಟ್ರೈನ್" (Bullet Train) ನಲ್ಲಿ ೬೦೦ ಕಿ. ಮೀ. ದೂರವಿರುವ ಕ್ಯೋಟೋ (KYOTO)ಗೆ ಹೊರಟೆವು. ಗಂಟೆಗೆ ೨೦೦ ಕಿ. ಮೀ. ವೇಗದಲ್ಲಿ ಓಡುವ ಈ ವಿದ್ಯುಚ್ಛಕ್ತಿ ರೈಲು ೩ ಗಂಟೆಗಳಲ್ಲಿ ೬೦೦ ಕಿ.ಮೀ. ದೂರವನ್ನು ಮುಗಿಸಿ ಕ್ಯೋಟೋಗೆ ಕೊಂಡೊಯ್ದಿತು. ಕ್ಯೋಟೋ ನಗರ ಟೋಕಿಯೋ ನಗರದಿಂದ

೬೦೦ ಕಿ.ಮೀ. ದೂರದಲ್ಲಿ ಬೆಟ್ಟಗುಡ್ಡಗಳಿಂದ ಸುತ್ತಿಕೊಂಡಿರುವ ನಗರ. ಹಿಂದೆ ಈ ನಗರವೇ ಜಪಾನಿನ ರಾಜಧಾನಿಯಾಗಿತ್ತಂತೆ. ಸುಮಾರು ೩೦೦ ವರ್ಷಗಳ ಹಿಂದೆ ಕ್ಯೋಟೋದಿಂದ ಟೋಕಿಯೋಗೆ ಜಪಾನಿನ ರಾಜಧಾನಿಯನ್ನು ಬದಲಾಯಿಸಲಾಗಿದೆ. ಜಪಾನಿನ ರೈಲಿನ ಬಗ್ಗೆ ಒಂದು ಮಾತು: ಎಲ್ಲದರಂತೆ ಇಲ್ಲಿಯೂ ಸ್ವಚ್ಛತೆ, ಸುಂದರವಾದ ಆಸನಗಳು, ಹವಾನಿಯಂತ್ರಣ, ಚಾಲಕನಿಲ್ಲದ ಈ ರೈಲು ತಾನಾಗಿಯೇ ಓಡುತ್ತದೆ, ತಾನಾಗಿಯೇ ನಿಲ್ಲುತ್ತದೆ. ಜಪಾನ್ ರಾಷ್ಟ್ರದ ರೈಲುಗಳ ಓಡಾಟವನ್ನು ನೋಡುವುದಕ್ಕೆ ಮೋಜೆನ್ನಿಸುತ್ತದೆ ಮತ್ತು ಅತ್ಯಂತ ಆಶ್ಚರ್ಯಕರವಾಗಿ ಕಾಣಿಸುತ್ತದೆ. ಕ್ಯೋಟೋ ತಲುಪುವ ವೇಳೆಗೆ ಈ ಬೇಸಿಗೆಯಲ್ಲೂ ಸುರಿಯುವ ಮಳೆ. ನಿಲ್ದಾಣಕ್ಕೆ ಹೋಟೆಲ್‌ನ ವಾಹನ ಹಾಜರಿದ್ದು ನಿಲ್ದಾಣದಿಂದ ನೇರವಾಗಿ ಕೆಲವು ಪ್ರೇಕ್ಷಣೀಯ ಸ್ಥಳಗಳಿಗೆ ನಾನು ಹಾಗೂ ಶ್ರೀ ಇಸೋಬೆ ಹೊರಟೆವು. ಕ್ಯೋಟೋದಿಂದ ೫೦ ಕಿ. ಮೀ. ದೂರದಲ್ಲಿರುವ ಒಸಾಕಾ ನಗರದಲ್ಲಿ ಅಳವಡಿಸಿರುವ ಶೈತ್ಯಾಗಾರವನ್ನು ನನಗೆ ತೋರಿಸಲು ಮಾರುಬೆನ್ನಿ (Marubeni) ಸಂಸ್ಥೆಯ ಅಧಿಕಾರಿಯೊಬ್ಬರು ನನ್ನ ಜೊತೆಯಲ್ಲಿ ಬಂದಿದ್ದರು, ಕ್ಯೋಟೋ ಅನೇಕ ದೇವಾಲಯಗಳ ಸುಂದರವಾದ, ಸ್ವಾಭಾವಿಕ ವನಗಳ ಗುಡ್ಡಗಳಿಂದ ಕೂಡಿದ ನಗರ, ಕಾಡಿನ ಮಧ್ಯದಲ್ಲಿ ಸುಂದರವಾದ ಮರಗಿಡಗಳಿಂದ ಆವೃತ್ತವಾಗಿರುವ "ಮಿಯಾಕೊ"(MIYAKO) ಹೋಟೆಲ್‌ನಲ್ಲಿ ತಂಗಿದೆವು. ಈ ನಗರದ ಅನೇಕ ಸ್ಥಳಗಳಿಗೆ ಆ ದಿನ ಭೇಟಿ ಕೊಟ್ಟಾಗ ನನ್ನ ಗಮನಕ್ಕೆ ಬಂದ ಅತ್ಯಂತ ತಮಾಷೆಯ ವಿಷಯವೆಂದರೆ ನಮ್ಮ ಚಪ್ಪಲಿಗಳನ್ನು ಹಾಕಿಕೊಂಡು ಅವರ ದೇವಾಲಯಗಳಿಗೆ ಹೋಗುವ ಹಾಗಿಲ್ಲ. ಆದರೆ ಅವರು ಕೊಡುವ ಚಪ್ಪಲಿಗಳನ್ನೇ ಹಾಕಿಕೊಂಡು ದೇವಸ್ಥಾನಕ್ಕೆ ಹೋಗಬಹುದು. ವಿಚಿತ್ರವೆಂದರೆ ತಮ್ಮ ಚಪ್ಪಲಿಗಳನ್ನು ಕೈಯಲ್ಲಿ ಹಿಡಿದುಕೊಂಡು ದೇವಸ್ಥಾನಕ್ಕೆ ಜನ ಹೋಗುತ್ತಾರೆ. ಅಷ್ಟೇ ಅಲ್ಲ, ಆ ಚಪ್ಪಲಿಗಳನ್ನು ಕೈಯಲ್ಲಿ ಹಿಡಿದು ಚಪ್ಪಲಿ ಸಮೇತ ದೇವರಿಗೆ ನಮಸ್ಕಾರ ಮಾಡುತ್ತಾರೆ. (ಶರೀರವನ್ನು ಅರೆಬಾಗಿಸಿದರೆ ನಮಸ್ಕರಿಸಿದಂತೆ) ಅನೇಕ ದೇವಸ್ಥಾನಗಳಲ್ಲಿ ಮಾಂಸ-ಮದ್ಯಗಳ ಸೇವನೆ, ಸಿಗರೇಟು ಸೇದುವುದು ಇವುಗಳನ್ನು ನೋಡಿ ನನಗೆ ವಿಚಿತ್ರವೆನ್ನಿಸಿತು. ೧೦೦೧ ಬುದ್ಧನ ವಿಗ್ರಹಗಳಿರುವ ದೇವಸ್ಥಾನ ನೋಡಿದಾಗ ಭಾರತದ ದೇವಸ್ಥಾನದಂತೆಯೇ ಕಂಡಿತು. ಎಲ್ಲಾ ದೇವಸ್ಥಾನಗಳೂ ದಟ್ಟವಾದ ಕಾಡುಗಳಿಂದ ಆವರಿಸಿವೆ.

ತಾರೀಖು ೩೦ರಂದು ಬೆಳಗ್ಗೆ ೬.೦೦ ಗಂಟೆಗೆ ಮಾರುಬೆನ್ನಿ ಸಂಸ್ಥೆಯವರ ಶೈತ್ಯಾಗಾರದ ತಾಂತ್ರಿಕ ಕೆಲಸವನ್ನು ನೋಡಲು ಒಸಾಕಾ ನಗರಕ್ಕೆ ಹೊರಟೆವು. ೫೦ ಕಿ. ಮೀ. ದೂರವನ್ನು ಜಪಾನಿನ ರೈಲಿನಲ್ಲಿ ೧೫-೨೦ ನಿಮಿಷಗಳಿಗೆ ಮುಗಿಸಬಹುದು. ಆದರೆ ಕಾರಿನಲ್ಲಿ ೨.೦೦ ಗಂಟೆಗಳಲ್ಲಿ ಮುಗಿಸುವುದು ಅನುಮಾನ ಎಂದರು ಮಿತ್ರ ಶ್ರೀ ಇಸೋಬೆ. ನನಗೆ ಆಶ್ಚರ್ಯವಾಯ್ತು. ಹೌದು ಇಲ್ಲಿಯ ರಸ್ತೆ ಟ್ರಾಫಿಕ್‌ನಿಂದ ಕೂಡಿದೆ. ರಸ್ತೆ ಪ್ರಯಾಣ ಅತೀ ನಿಧಾನ. ನಾನು ತಂಗಿರುವ ಆ ಕೊಠಡಿಯಿಂದ ಎಂತಹ ಸುಂದರವಾದ ಬೆಳಗನ್ನು ಕಾಣಲು ಸಹಾಯವಾಯ್ತು. ಕ್ಯೋಟೋನಲ್ಲಿಯೇ ಬೆಳಗಿನ ತಿಂಡಿ ಮುಗಿಸಿ, ಹಿಂದಿನ ದಿನದ

ಮಳೆಯಿಂದ ಸ್ವಚ್ಛವಾಗಿ ನಿಂತಿರುವ ಸುಂದರವಾದ ಹಸಿರು ಬೆಟ್ಟಗಳಿಂದ ಸುತ್ತುವರಿದ ನಗರವನ್ನು ಬಿಟ್ಟು ಓಸಾಕಾ ತಲುಪಿದೆವು. ಓಸಾಕಾ ನಗರ ಕೈಗಾರಿಕೆ, ವ್ಯಾಪಾರದಲ್ಲಿ ಜಪಾನಿನಲ್ಲಿಯೇ ಅತ್ಯಂತ ಪ್ರಮುಖವಾದ ಸ್ಥಳ. ಓಸಾಕಾದಲ್ಲಿ ಶಾರ್ಪ್ ಮತ್ತು ಓಶಿನಿ ಎಂಬ ಪ್ರತ್ಯೇಕ ಕಂಪನಿಗಳು ಶೈತ್ಯಾಗಾರಕ್ಕೆ ಸಂಬಂಧಿಸಿದ ಸಲಕರಣೆಗಳನ್ನು ತಯಾರು ಮಾಡುವುದು, ಅಲ್ಲದೆ ಶೈತ್ಯಾಗಾರಗಳನ್ನು ಅವಶ್ಯವಿದ್ದ ಕಡೆ ಜೋಡಿಸಿಕೊಡುವ ಕೆಲಸ ಮಾಡುತ್ತವೆ. ಆ ದಿನ ಅವರು ನನಗೆ ತೋರಿಸಿದ ಶೈತ್ಯಾಗಾರದ ವಿಶ್ವಾಸ ರೇಷ್ಮೆ ಇಲಾಖೆಯ ಉದ್ದೇಶಗಳಿಗೆ ಸರಿಯಾಗಿಲ್ಲ ಎನ್ನುವುದನ್ನು ನಾನು ತಿಳಿದುಕೊಂಡೆ. ರೇಷ್ಮೆ ಉದ್ಯಮಕ್ಕೇ ಪ್ರತ್ಯೇಕವಾದುದು ಬೇಕಾಗುತ್ತದೆ ಎಂದು ಆ ಕಂಪೆನಿಯವರೂ ನನಗೆ ತಿಳಿಸಿದರು. ನನ್ನ ಇಡೀ ಜಪಾನ್‌ನ ಪ್ರವಾಸದಲ್ಲಿ ಓಸಾಕಾ ನಗರದ ರಸ್ತೆಯ ಮೇಲೆ ಒಬ್ಬ ಕುಂಟನನ್ನು ಮೊದಲ ಬಾರಿಗೆ ನೋಡಿದೆ. ಜಪಾನ್‌ನಲ್ಲಿ ನಾನು ಪ್ರವಾಸ ಮಾಡುತ್ತಿರುವ ಕಾಲದಲ್ಲಿ ಆ ರಾಷ್ಟ್ರದ Dietನ (parliament) ಎರಡು ಮನೆಗಳಿಗೂ ಅಂದರೆ ಹೌಸ್ ಆಫ್ ಕೌನ್ಸಿಲ್ಲರ್ ಮತ್ತು ಹೌಸ್ ಆಫ್ ರೆಪ್ರೆಸೆಂಟೀಟಿರ್ಸ್‌ಗೂ ಚುನಾವಣೆ ನಡೆಯುವ ಸಂದರ್ಭ. ಜುಲೈ ೬ ರಂದು ಚುನಾವಣೆ ನಡೆಯುತ್ತಿತ್ತು. ಎಲ್ಲಿಯೂ ಭಿತ್ತಿಪತ್ರಗಳನ್ನು ಅಂಟಿಸುವುದಾಗಲೀ, ಧ್ವನಿವರ್ಧಕಗಳ ಮೂಲಕ ಪ್ರಚಾರ ಮಾಡುವ ವ್ಯವಸ್ಥೆಯಾಗಲೀ ಕಾಣಲಿಲ್ಲ. ನಿರ್ದಿಷ್ಟವಾದ ಕೆಲವೇ ಸ್ಥಳಗಳಲ್ಲಿ ಸ್ವಚ್ಛವಾದ ಹಲಗೆಯ ಮೇಲೆ ಅಭ್ಯರ್ಥಿಯ ಹೆಸರು, ಭಾವಚಿತ್ರ ಮತ್ತು ಆತನ ಪಕ್ಷದ ಹೆಸರನ್ನು ಮುದ್ರಿಸಿರುವ ಭಿತ್ತಿ ಪತ್ರಗಳನ್ನು ಅಂಟು ಹಾಕಿರುವುದನ್ನು ಕಾಣಬಹುದಿತ್ತು. ಓಸಾಕಾ ನಗರದಿಂದ ಮತ್ತೆ ರೈಲಿನಲ್ಲಿ ಟೋಕಿಯೋ ತಲುಪಿದೆ. ರಾತ್ರಿ ಶ್ರೀ ರುದ್ರಯ್ಯನವರು ಸಲಾಲ್‌ನಿಂದ ಫೋನ್ ಮಾಡಿ ಹಣ ಕಳುಹಿಸಿರುವುದಾಗಿ ತಿಳಿಸಿದರು. ಸ್ವಲ್ಪ ಸಮಯ ಕಳೆದ ಮೇಲೆ ಅಂದರೆ ಸುಮಾರು ೧೧ ಗಂಟೆ ೩೦ ನಿಮಿಷಕ್ಕೆ ಭಾರತದಿಂದ ಕರೆ- ಮಂತ್ರಿ ಮಂಡಲದ ಪುನರ್‌ರಚನೆ, ಎಲ್ಲಾ ರಾಜ್ಯ ಮಂತ್ರಿಗಳನ್ನೂ ನಾನೂ ಸೇರಿದಂತೆ ಕೈ ಬಿಟ್ಟಿರುವುದಾಗಿ ತಿಳಿದುಬಂತು! ದೂರವಾಣಿಯ ಮೂಲಕ ಈ ವಿಷಯವನ್ನು ನನಗೆ ತಿಳಿಸುವಾಗ ಶ್ರೀ ಹೆಚ್. ಡಿ. ದೇವೇಗೌಡರವರು ಬಹಳ ನೊಂದುಕೊಂಡಂತೆ ಭಾಸವಾಯಿತು. “Iam sorry for all these happenings” ಎಂದರು. ಇದಕ್ಕೆ ನಾನು ಸಿದ್ಧನಾಗಿದ್ದೆ. ಈ ಸನ್ನಿವೇಶವನ್ನು ಬಹುಮಟ್ಟಿಗೆ ನಾನು ಬಯಸಿದ್ದೆ ಮತ್ತು ನಿರೀಕ್ಷಿಸಿದ್ದೆ. ಬಾಟ್ಲಿಂಗ್ ಕೇಸಿನ ತೀರ್ಪು ಬಂದಾಗಿನಿಂದಲೂ ನಾನು ಈ ಸರ್ಕಾರದಿಂದ ಹೊರಬರಲು ಹವಣಿಸಿದ್ದೆ. ಅವಕಾಶ ಕಾಯುತ್ತಿದ್ದೆ. ಡಾ. ಹೆಚ್. ನರಸಿಂಹಯ್ಯ, ಶ್ರೀ ಹೆಚ್. ಡಿ. ದೇವೇಗೌಡ ಅವರ ಅಭಿಪ್ರಾಯದಂತೆ ನನ್ನ ರಾಜೀನಾಮೆ ಕೊಟ್ಟಿರಲಿಲ್ಲ. ಜೊತೆಗೆ ತುಮಕೂರಿನ ನನ್ನ ಕಿರಿಯ ಮಿತ್ರ ಬಾಬು ಅವರೂ ಇದಕ್ಕೆ ಅಡ್ಡಿ ಬಂದಿದ್ದರು. ಆದ್ದರಿಂದ ನನ್ನ ಮನಸ್ಸಿನ ಮೇಲೆ ಈ ಸುದ್ದಿ ಯಾವ ಪ್ರಭಾವವನ್ನೂ ಬೀರಲಿಲ್ಲ. ನೆಮ್ಮದಿಯಾಗಿಯೇ ನಿದ್ದೆ ಮಾಡಿದೆ. ಕಳೆದ ಬೇಸಿಗೆಯಲ್ಲಿಯೇ ನನ್ನ ಪತ್ನಿ ಅನಸೂಯ ಹೇಳುತ್ತಿದ್ದಳು, “ಕುಣಿಗಲ್‌ನಲ್ಲಿ ಎಷ್ಟು ಆರಾಮವಾಗಿರಬಹುದು” ಎಂದು. ಬೆಂಗಳೂರಿನಲ್ಲಿ ಮಕ್ಕಳ ವಿದ್ಯಾಭ್ಯಾಸದ ಒಂದೇ ಒಂದು ಸಮಸ್ಯೆ.

ಈ ದಿನ ಸಂಜೆ "ಟೆಂಪರೋ ಹೌಸ್" (TEMPERO HOUSE)ನಲ್ಲಿ ಜಪಾನಿನ ಸಾಂಪ್ರದಾಯಿಕ ಪದ್ಧತಿಯ ಊಟ ಮಾಡಿ, ರಾತ್ರಿ ನನ್ನ ಮಿತ್ರರಾದ ತನಾಕಾ, ಇಸೋಬೆ ಮತ್ತು ಇತರೇ ಸ್ನೇಹಿತರು ರಾತ್ರಿ ಟೋಕಿಯೋ ಅಡ್ವೆಂಚರನ್ನು ಏರ್ಪಾಡು ಮಾಡಿ ನಾನೂ ಭಾಗವಹಿಸಲು ವಿನಯವಾಗಿ ವಿನಂತಿಸಿದರು. ಅಷ್ಟೇ ವಿನಯದಿಂದ ಅವರ ವಿನಂತಿಯನ್ನು ನಾನು ನಿರಾಕರಿಸಿದೆ. ಭಾರತೀಯನಾದ ನನಗೆ, ಇಂತಹ ಚಟುವಟಿಕೆಗಳಲ್ಲಿ ಭಾಗವಹಿಸುವ ಮಾನಸಿಕ ಸ್ಥಿತಿ ಇಲ್ಲವೆನ್ನುವುದನ್ನು ಅರಿತುಕೊಂಡ ನನ್ನ ಸ್ನೇಹಿತರು ನನ್ನನ್ನು ಒತ್ತಾಯ ಮಾಡಲಿಲ್ಲ. ಸಾವಿರಾರು ಮೈಲಿಗಳ ದೂರದಲ್ಲಿ ಸಂಪೂರ್ಣವಾಗಿ ಹೊಸದಾಗಿರುವ ವಾತಾವರಣದಲ್ಲಿ ತಂಗಿದ್ದ ನನಗೆ ದೂರವಾಣಿಯ ಮುಖಾಂತರ ನನ್ನ ಪತ್ನಿ ಮಂತ್ರಿಮಂಡಲದ ಬದಲಾವಣೆಯ ಸುದ್ದಿಯ ಜೊತೆಗೆ ನನ್ನ ಚಿಕ್ಕಪ್ಪನವರಾದ ಶ್ರೀ ಹೊನ್ನೇಗೌಡರವರು ನಾನು ಹೊರದೇಶಕ್ಕೆ ಹೊರಟ ೩ನೆಯ ದಿನ ದೈವಾಧೀನರಾದರೆಂಬ ಸುದ್ದಿಯನ್ನೂ ಕೂಡ ತಿಳಿಸಿದಳು. ನನ್ನ ಉನ್ನತ ವಿದ್ಯಾಭ್ಯಾಸದ ಸಮಯದಲ್ಲಿ, ರಾಜಕೀಯ ಉನ್ನತಿಯ ದಿನಗಳಲ್ಲಿ ಅತ್ಯಂತ ಅಭಿಮಾನ ಮತ್ತು ನನ್ನ ಶ್ರೇಯಸ್ಸನ್ನು ಕಂಡು ಸಂತೋಷಪಡುತ್ತಿದ್ದ ಮತ್ತು ನನ್ನ ಎಲ್ಲಾ ಶ್ರೇಯಸ್ಸಿಗೂ, ಹೆಮ್ಮೆಪಡುತ್ತಿದ್ದ ಈ ವ್ಯಕ್ತಿಯ ಸಾವಿನ ಸುದ್ದಿ ಸ್ವಲ್ಪಮಟ್ಟಿಗೆ ಮನಸ್ಸನ್ನು ವಿಚಲಿತಗೊಳಿಸಿತು. ಇನ್ನು ಮುಂದೆ ನನ್ನ ಕಾರ್ಯಕ್ರಮವನ್ನು ಮುಂದುವರೆಸಿ ನಿಯೋಜಿತ ರೀತಿಯಲ್ಲಿ ಮುಗಿಸಬೇಕೆ ಅಥವಾ ಕೊನೆ ಮಾಡಿ ವಾಪಸ್ ಭಾರತಕ್ಕೆ ಹೋಗಬೇಕೇ ಎನ್ನುವ ಚಿಂತೆ ಬಂದಾಗ ಕಾರ್ಯಕ್ರಮವನ್ನು ಮುಂದುವರೆಸಲು ನಾನು ತೀರ್ಮಾನಿಸಿದೆ. ಕಾರಣ ನನ್ನ ಪ್ರವಾಸವು ಅಂತರರಾಷ್ಟ್ರೀಯ ಕೃಷಿ ಸಹಕಾರೀ ಪರಿಣತರ ಸಂಘದ (I.A.C.E.A.) ಆಹ್ವಾನದ ಮೇರೆಗೆ ಸ್ವಂತ ಖರ್ಚಿನಲ್ಲಿ ನಿರೂಪಿಸಿದ್ದರಿಂದ ಈ ಬದಲಾವಣೆ ನನ್ನ ಪ್ರವಾಸಕ್ಕೆ ಯಾವ ವಿಧವಾದ ಆತಂಕ ತರುವ ಸಂಭವವಿರಲಿಲ್ಲ. ನನ್ನ ಪತ್ನಿ ಅನಸೂಯ ಮತ್ತು ಮಕ್ಕಳು ಕೂಡ ಪ್ರವಾಸ ಮುಗಿಸಿಕೊಂಡೇ ಹಿಂದಿರುಗುವಂತೆ ತಿಳಿಸಿದರು. "ಹುಷಾರಾಗಿ ಬೇಗೆ ಬಂದು ಬಿಡಣ್ಣ" ಎಂದ ನನ್ನ ಕಿರಿಯ ಮಗ ಪಪ್ಪಿ. ತೀರಿಕೊಂಡ ನನ್ನ ಚಿಕ್ಕಪ್ಪನವರನ್ನು ವಾಪಸ್ ಹೋದರೂ ನಾನು ಕಾಣುವ ಅವಕಾಶ ಇರಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಜೀವನದಲ್ಲಿ ಇಂತಹ ಅನಿರೀಕ್ಷಿತ ಹಾಗೂ ಅಸ್ವಾಭಾವಿಕ ಘಟನೆಗಳನ್ನು ನಿಭಾಯಿಸಿದ್ದ ನನ್ನ ದೈವದತ್ತವಾದ "ಧೈರ್ಯ" ಈ ಸಮಯದಲ್ಲಿಯೂ ಕೂಡ ಕೈ ಕೊಡಲಿಲ್ಲ. ಆದ್ದರಿಂದ ನಿಯೋಜಿಸಿದ ರೀತಿ ಕಾರ್ಯಕ್ರಮವನ್ನು ಮುಂದುವರೆಸಲು ನಾನು ನಿರ್ಧರಿಸಿ ತಾ. ೧-೭-೮೬ ರಂದು ಯಮಗನಿ (YAMAGANI) ಪ್ರಿಫೆಕ್ಚರ್ (PREFECTURE) ನಲ್ಲಿರುವ ಅಮಿ ಸಿರಿಕಲ್ಚರಲ್ ಬ್ರೀಡಿಂಗ್ ಇನ್ಸ್‌ಟಿಟ್ಯೂಟ್‌ಗೆ (AMI SERICULTURAL BREEDING INSTITUTE) ಭೇಟಿ ಕೊಡಲು ರಸ್ತೆಯ ಮುಖಾಂತರ ಹೊರಟೆವು. ಟೋಕಿಯೋದಿಂದ "ಕುಷಿಮಾ" ದ (Kushima) ವರೆಗಿನ ರಾಷ್ಟ್ರೀಯ ಹೆದ್ದಾರಿ ಎಷ್ಟೊಂದು ವಿಶಾಲವಾಗಿದೆ. ಸ್ವಚ್ಛವಾಗಿದೆ ಮತ್ತು ಸುಂದರವಾಗಿದೆ ಎಂಬುದನ್ನು ಕಣ್ಣಾರೆ ಕಂಡೇ ತಿಳಿಯಬೇಕು, ಗೆಳೆಯ ಶ್ರೀ ಇಸೋಬೆರವರ ಹೊಸ ಟೋಯೇಟೋ ಸೋರರ್ (TOYOTO SOARER) ಕಾರಿನಲ್ಲಿ ಗಂಟೆಗೆ ೧೪೦ ಕಿ.ಮೀ. ವೇಗದಲ್ಲಿ ಹೊರಟೆವು. ಅಲುಗಾಡದ ಹವಾ ನಿಯಂತ್ರಣ ಅಳವಡಿಸಿರುವ ಸಂಪೂರ್ಣವಾಗಿ ಸ್ವಯಂಚಾಲಿತ (Autpmatic)

ವಾಗಿರುವ ಈ ವಾಹನ ಇಡೀ ನನ್ನ ಜಪಾನ್ ಪ್ರವಾಸದಲ್ಲಿ ನನ್ನೊಡನಿದ್ದು ಸಹಕರಿಸಿತು.. ದಾರಿಯಲ್ಲಿ ಹೋಗುವಾಗ "ಸುಚಿಗುರಾ" ಪಟ್ಟಣ ಸಿಗುತ್ತದೆ. ದಾರಿಯಲ್ಲಿ ಹೋಗುವಾಗ ಸಿಗುವ ಪಟ್ಟಣಗಳು ಮತ್ತು ನಗರಗಳಲ್ಲಿ ರಸ್ತೆಯ ಮೇಲೆ ಯಾರೂ ಕಾಣುತ್ತಿರಲಿಲ್ಲ.. ಆಶ್ಚರ್ಯಪಟ್ಟ ನಾನು ಏನಿದು, ಈ ಪಟ್ಟಣಗಳ ಜನರು ಎಲ್ಲೂ ಒಬ್ಬರೂ ಬೀದಿಯಲ್ಲಿ ಕಾಣಿಸುತ್ತಿಲ್ಲವಲ್ಲ, ಎಲ್ಲಿ ಹೋಗಿದ್ದಾರೆ ಎಂದು ಪ್ರಶ್ನಿಸಿದಾಗ ನನ್ನ ಪಕ್ಕದಲ್ಲಿ ಇದ್ದ ಸ್ನೇಹಿತರು ಹೇಳಿದರು : "This is the working hour, the people are expected to be on the work and not on the street."

ಮೋಟು ಬೀಡಿ ಸೇದಿಕೊಂಡು, ಶರೀರದ ಎಲ್ಲಾ ಅಂಗಾಂಗಗಳನ್ನು ಕೆರೆದುಕೊಂಡು, ರಾಜೀವ್‌ಗಾಂಧಿಯಿಂದ ಹಿಡಿದು ರಾಮಯ್ಯನವರೆಗಿನ ರಾಜಕೀಯ ಮಾತನಾಡುತ್ತಾ, ಬೀದಿ ಬೀದಿಗಳಲ್ಲಿ ನಿಂತು, ಕುಳಿತು, ಕಾಲ ಕಳೆಯುವ ಭಾರತದ ಕೆಲವು ಜನರ ಪರಿಸ್ಥಿತಿಯನ್ನು ಜ್ಞಾಪಿಸಿಕೊಂಡು ನಾನು ನಕ್ಕು ಸುಮ್ಮನಾದೆ. ದಾರಿಯಲ್ಲಿ ಹೋಗುವಾಗ, "ಕೈಗಾರಿಕೆ", "ಬೇಸಾಯ" ಮತ್ತು "ವ್ಯಾಪಾರ" ಒಂದೇ ಕಡೆ ಇರುವ ಜಪಾನ್‌ನ ವೈಶಿಷ್ಟ್ಯ ಮೊಟ್ಟ ಮೊದಲಿಗೆ ನನಗೆ ಅರಿವಾಯ್ತು. ಅಮಿ ಒಂದು ಪಟ್ಟಣ. ಇಲ್ಲಿ ಇರುವ ಸಿರಿಕಲ್ಚರಲ್ ಬ್ರೀಡಿಂಗ್ ಇನ್‌ಸ್ಟಿಟ್ಯೂಟ್‌ನ ಕಿರಿಯ ಅಧಿಕಾರಿ ಶ್ರೀ ತನಾಕಾರವರ ಜೊತೆ ಚರ್ಚಿಸಿದೆ. ಅಸಾಹಿತೋಕರ (Asahitoka) ತಳಿಯ ಹುಳುವನ್ನು ಸುಮಾರು ಶೇಕಡಾ ೨೬.೮ ಮತ್ತು "ಟೋಯೋಟೊಕಾಯಿ" (Toyotokayi) ತಳಿಯನ್ನು ಸುಮಾರು ಶೇಕಡಾ ೨೩ರಷ್ಟು ಜಪಾನಿನ ರೇಷ್ಮೆ ಬೆಳೆಗಾರರು ಉಪಯೋಗಿಸುತ್ತಾ ಇದ್ದಾರೆ ಎಂದು ಶ್ರೀ ತನಾಕಾರವರು ತಿಳಿಸಿದರು. ಅದೇ ಅಮಿಯಿಂದ ವಾಪಸ್ ಬಂದು ಜಪಾನ್‌ನ ವ್ಯವಸಾಯ ಮಂತ್ರಾಲಯದಲ್ಲಿ ರೇಷ್ಮೆ ನಿರ್ದೇಶಕರೊಡನೆ ಚರ್ಚಿಸಿದೆ. ಅವರ ಕಚೇರಿಗೆ ಭೇಟಿ ಕೊಟ್ಟಾಗ, ಭಾರತದ ಕಚೇರಿಗಳು ಮತ್ತು ಇಲ್ಲಿ ನಡೆಯುವ ಕೆಲಸದ ವ್ಯವಸ್ಥೆಗೂ ಮತ್ತು ಜಪಾನಿನುದ್ದಕ್ಕೂ ಇರುವ ವ್ಯತ್ಯಾಸವನ್ನು ಅರಿತುಕೊಳ್ಳಲು ಸಹಾಯವಾಯಿತು. ಸಾರ್ವಜನಿಕ ಚುನಾವಣೆಯ ಕೆಲಸದ ಭರದಲ್ಲಿ ಜಪಾನ್‌ನ ವ್ಯವಸಾಯ ಮತ್ತು ರೇಷ್ಮೆ ಖಾತೆಯ ಸಚಿವರನ್ನು ಭೇಟಿ ಮಾಡಲು ಸಾಧ್ಯವಾಗಲಿಲ್ಲ. ಅದೇ ದಿನ "ಡೈನಿಲ್ಟಾನ್ ರಾ ಸಿಲ್ಕ್ ಫೌಂಡೇಷನ್" (Dainilton Raw Silk Foundation) ಗೆ ಭೇಟಿ ಕೊಟ್ಟು ಅಲ್ಲಿಯ ಮುಖ್ಯಸ್ಥರೊಡನೆ ಚರ್ಚೆಮಾಡಿ ಇಡೀ ದಿನ ಊಟ ಮಾಡದೆ ಬಳಲಿದ ನಾನು ಮತ್ತು ಇಸೋಬೆ ಸಂಜೆ ಊಟ ಮಾಡಿ ಹೋಟೆಲ್‌ಗೆ ವಾಪಸ್ ಬಂದೆವು . ಶ್ರೀ ತನಾಕಾರವರು ನಮ್ಮ ಜೊತೆ ಸೇರಿಕೊಂಡರು. ತಾ. ೨ ರಂದು ಪ್ರಿಫೆಕ್ಚರಲ್ ಸಿರಿಕಲ್ಚರಲ್ ಎಕ್ಸ್‌ಪರಿಮೆಂಟ್ ಸ್ಟೇಷನ್ (Ibaragi Perfectural Sericultural Experiment Station) ಗೆ ಭೇಟಿ ಕೊಟ್ಟು ಅಲ್ಲಿಯ ಮಲ್‌ಬೆರ್ರಿ ಪ್ಯಾಥೋಲಜಿ ನಿರ್ದೇಶಕರೊಡನೆ ಚರ್ಚಿಸಿದೆ.

### ಸೆರಿಕಲ್ಚರಲ್ ಎಕ್ಸ್‌ಪೆರಿಮೆಂಟ್ ಸ್ಟೇಷನ್

ಇಂಬಾರಗಿ ಪ್ರಿಫೆಕ್ಚರಲ್ ಸಿರಿಕಲ್ಚರಲ್ ಎಕ್ಸ್‌ಪೆರಿಮೆಂಟ್ ಸ್ಟೇಷನ್‌ಗೆ ನನ್ನ ಭೇಟಿ ನನಗೆ ಹೊಸ ಅನುಭವಗಳಿಗೆ ಅವಕಾಶ ನೀಡಿತು ಎನ್ನಬಹುದು. ಸತಾಗಾವ ಅಲ್ಲಿನ

ನಿರ್ದೇಶಕರು. ಹಿಪ್ಪುನೇರಳೆಯ ರೋಗಗಳ ಬಗ್ಗೆ ಪರಿಣತರು ಬಹಳಷ್ಟು ವಿಚಾರಗಳನ್ನು ನನಗೆ ಮನವರಿಕೆ ಮಾಡಿಕೊಟ್ಟರು. ಅಲ್ಲಿ ಸುಮಾರು ಮೂವತ್ತು ತೆರನಾದ ಹಿಪ್ಪುನೇರಳೆ ತಳಿಗಳಿವೆ ಎಂದು ನನಗೆ ತಿಳಿಸಿದರು. (Thirty verities of Mulberry) ನಿರ್ದಿಷ್ಟ ಋತುಮಾನಕ್ಕೆ ನಿರ್ದಿಷ್ಟ ತಳಿಗೆ ಸರಿಹೊಂದಬಲ್ಲ ಹಿಪ್ಪುನೇರಳೆ ತಳಿಗಳಿವೆ ಎಂದಾಗ ನಾನು ಅವಾಕ್ಕಾದೆ. ಅವರು ಹೇಳುತ್ತಿದ್ದಾಗ ನನ್ನ ಮನಸ್ಸು ಮೈಸೂರಿನ ಸಂಶೋಧನಾ ಸಂಸ್ಥೆಯಲ್ಲಿ ಒಬ್ಬ ಸಂಶೋಧಕರೊಡನೆ ಹಿಂದೆ ನಾನು ಅವರನ್ನು ಕೇಳಿದ್ದೆ. ಹುಳುಗಳು ತಿನ್ನುವ ಸೊಪ್ಪು ಮತ್ತು ಹುಳುಗಳಿಗೆ ಬರುವ ರೋಗ "ಪರಸ್ಪರ ಸಂಬಂಧ ಹೊಂದಿಲ್ಲವೆ" (diet and the disease) ಎನ್ನುವುದು ನನ್ನ ಪ್ರಶ್ನೆಯಾಗಿತ್ತು. There is no relationship between the leaf and the worms disease (ಸೊಪ್ಪಿಗೂ ಹುಳುವಿಗೆ ತಗಲುವ ರೋಗಕ್ಕೂ ಸಂಬಂಧವಿಲ್ಲ) ಎನ್ನುವುದು ಅವರ ವಾದವಾಗಿತ್ತು!

ಆದರೆ ಶ್ರೀ ಸತಗಾವ ಖಚಿತ ಧ್ವನಿಯಲ್ಲಿ ಹೇಳಿದ್ದರು - ರೇಷ್ಮೆ ಹುಳುಗಳು ತಿನ್ನುವ ಹಿಪ್ಪುನೇರಳೆ (ತಳಿಯನ್ನುದ್ದೇಶಿಸಿ ಹೇಳಿದ್ದರು) ಹಾಗೂ ರೇಷ್ಮೆ ಹುಳುಗಳ ರೋಗಕ್ಕೆ ನಿಕಟ ಸಂಬಂಧವಿದೆ ಎಂದು.

ಮೈಸೂರಿನ ಸಂಶೋಧನಾ ಸಂಸ್ಥೆಗೆ ಭೇಟಿ ನೀಡಿ ಅಲ್ಲಿನ ಸಂಶೋಧಕರೊಡನೆ ನಡೆಸಿದ್ದ ಚರ್ಚೆಯಲ್ಲಿ ನನಗೆ ತಿಳಿದುಬಂದಿದ್ದು. "ಹಿಪ್ಪುನೇರಳೆಯಲ್ಲಿನ ಯಾವ ಅಂಶಗಳು ಹುಳುಗಳ ಬೆಳವಣಿಗೆಯಲ್ಲಿ ಅಥವಾ ರೋಗದಲ್ಲಿ ಪ್ರಧಾನ ಪಾತ್ರ ವಹಿಸುತ್ತವೆ ಎಂಬುದೂ, ಯಾವ ವಿಶೇಷ ಅಂಶ ರೇಷ್ಮೆ ಗ್ರಂಥಿಯು ಉತ್ತಮವಾಗಿ ಉಳಿಯಲು ನೆರವಾಗುತ್ತದೆ ಎಂಬುದೂ ಇನ್ನೂ ಸಂಶೋಧನೆಯೇ ಆಗಿಲ್ಲ" ಎನ್ನುವುದು. ಹಾಗೂ ಒಟ್ಟಾರೆ ರೇಷ್ಮೆ ಹುಳುಗಳ ಏಕೈಕ ಆಹಾರವಾದ ಹಿಪ್ಪುನೇರಳೆ ಕುರಿತು ಸಂಶೋಧನೆಯು ಆಗಬೇಕಾಗಿದ್ದ ಪ್ರಮಾಣದಲ್ಲಿ ಮತ್ತು ಆಗಬೇಕಾಗಿದ್ದ ರೀತಿಯಲ್ಲಿ ಆಗಲಿಲ್ಲವೇನೋ ಎನ್ನುವ ನನ್ನ ಸಂದೇಹಕ್ಕೆ ಜಪಾನಿನ ಈ ತಜ್ಞರೊಡನೆ ನಡೆಸಿದ ಚರ್ಚೆ ಮತ್ತಷ್ಟು ನೀರೆರೆದಿತ್ತು.

ಪ್ರವಾಸ ಮುಂದುವರಿಯಿತು. ಸುಕುಬಾಕ್ಕೆ (Tsukuba) ಬಂದಿಳಿದೆವು. ಇದೊಂದು ಸುಂದರ ತಾಣ. ಇಡೀ ಜಪಾನ್ ರಾಷ್ಟ್ರದ ಸಂಶೋಧನಾ ಸಂಸ್ಥೆಗಳನ್ನು ತನ್ನಲ್ಲಿ ಅಡಗಿಸಿಕೊಂಡಿರುವ ನಗರವಿದು. "ನ್ಯಾಷನಲ್ ಸಿರಿಕಲ್ಚರಲ್ ಎಕ್ಸ್‌ಪೆರಿಮೆಂಟ್ ಸ್ಟೇಷನ್" ಇಲ್ಲಿದೆ. ಜಪಾನ್‌ನ ರೇಷ್ಮೆ ಉದ್ಯಮದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರ ವಹಿಸಲು ನೆರವಾದ ಸಂಸ್ಥೆಯಿದು. ಇದರ ಮುಖ್ಯಸ್ಥರಾದ ಡಾ. ಹಜ್‌ಮಾ ಅವರನ್ನು ಭೇಟಿಯಾಗುವ ಸದವಕಾಶ ದೊರಕಿತ್ತು. ಪ್ರತಿ ಋತುಮಾನಗಳಿಗೂ ಪ್ರತ್ಯೇಕ ತಳಿಯನ್ನು ಸಾಕಣೆ ಮಾಡುತ್ತಾರೆ ಎಂದು ನಂಬಿದ್ದ ನಾನು ಬೇಸಿಗೆಯಲ್ಲಿ ಬೆಳೆಯಿರುವುದಿಲ್ಲವೆಂಬ ಮಾತು ಕೇಳಿ ತಬ್ಬಿಬ್ಬಾದೆ. ಉಷ್ಣಾಂಶ ಅಧಿಕವಾಗಿರುವುದರಿಂದ ಸಾಕಣೆ ಸಾಧ್ಯವಿಲ್ಲವೆಂದು ನಂಬುಗೆ ಅವರದ್ದಾಗಿದೆ. ಹವಾಮಾನದ ವೈಪರೀತ್ಯವನ್ನು ಎದುರಿಸಿ ನಿಲ್ಲಬಲ್ಲ ತಳಿಯ ಅಭಾವವಿದೆ ಎನ್ನುತ್ತಾರೆ. ಬೇಸಿಗೆಯ ದಿನಗಳಲ್ಲಿ ಬೈವೋಲ್ಟಿನ್ ಬೆಳೆ ಸಮರ್ಪಕವಾಗಿ ಆಗುವುದಿಲ್ಲವಾದುದರಿಂದ

ಮಲ್ಟಿವೋಲ್‌ಟೈನ್ ಗುಣದ ಚೀನಾ ಮೂಲದ ತಳಿಯನ್ನು ಸಾಕುವುದಾಗಿ ತಿಳಿಸಿದರು. ಆಗ ನನಗೆ ಕರ್ನಾಟಕದಲ್ಲಿ ಶ್ವೇತ ಕಾಂತ್ರಿಯನ್ನು ಮಾಡಬೇಕೆಂದು ಹೊರಟಿರುವ ಸಂಶೋಧಕರು ನನ್ನ ನೆನಪಿಗೆ ಬಂದರು. ಬೇಸಿಗೆಯನ್ನು ತಡೆದುಕೊಂಡು ಬೆಳೆಯಾಗುವಂತಹ ತಳಿಯಿಲ್ಲವೆಂಬ ಕಾರಣಕ್ಕಾಗಿ ಜಪಾನಿಯರು ಆ ಋತುಮಾನದಲ್ಲಿಬೈವೋಲ್ಟಿನ್ ಕೈಬಿಟ್ಟಿದ್ದಾರೆಂದ ಮೇಲೆ ನನ್ನ ದೇಶದ ಹವಾಮಾನಕ್ಕೆ ಪ್ರತಿಸ್ಪಂದಿಸಬಲ್ಲ ತಳಿ ನಮ್ಮಲ್ಲಿದೆಯೆ ಎಂಬ ಚಿಂತೆ ನನ್ನನ್ನು ಕಾಡಿತು. ಈ ಮಾತನ್ನು ಬರೆಯುವಾಗ ಬೇಸಿಗೆಯಲ್ಲಿ ಬೈವೋಲ್ಟಿನ್ ಸಾಕಣೆ ಕೈಗೊಳ್ಳುವುದು ಬೇಡ ಎನ್ನುವ ಅಭಿಪ್ರಾಯಕ್ಕೆ ನಾನು ಬಂದಿದ್ದೇನೆ ಎಂದು ಭಾವಿಸಬಾರದು. ನನ್ನ ಉದ್ದೇಶವೂ ಅದಲ್ಲ. ಸದ್ಯಕ್ಕೆ ಈಗ ಇರುವ ತಳಿಗಳು ಬೆಳೆಗಾರನ ಶ್ರಮಕ್ಕೆ ತಕ್ಕ ಪ್ರತಿಫಲ ಕೊಡುತ್ತಿಲ್ಲವೆನ್ನುವ ಭಾವನೆ ನನ್ನದು. ನಮ್ಮ ದೇಶದ ಹವಾಮಾನಕ್ಕೆ ಹೊಂದಿಕೊಳ್ಳುವಂತಹ ತಳಿಗಳ ಆವಿಷ್ಕಾರಕ್ಕೆ ಎಲ್ಲ ಸಂಶೋಧಕರೂ ಗಮನ ಕೊಡಬೇಕು. ನಮ್ಮಲ್ಲಿನ ಬೆಳೆಗಾರನ ವಾಸಸ್ಥಿತಿ ಸಾಮಾಜಿಕ ಜೀವನ ಕ್ರಮ ಶೋಚನೀಯವಾಗಿರುವಾಗ ಬೈವೋಲ್ಟಿನ್ ತಳಿಯನ್ನು ಸಾಕುವುದಕ್ಕೆ ಒತ್ತಾಯವಿರಬೇಕೇ ಎನ್ನುವ ಪ್ರಶ್ನೆ ನನ್ನದು. ಒಳ್ಳೆಯ ತೋಟ, ಅನುಕೂಲಕರ ಮನೆ, ವೈಜ್ಞಾನಿಕ ಸಲಕರಣೆಗಳಿರುವಂತವರು ಮಾತ್ರ ಬೇಸಿಗೆಯಲ್ಲೇ ಸಾಕಣೆ ಮಾಡಬಹುದು. ಈಗಿರುವ ತಳಿಗಳೇ ಸರಿಯಾಗಿವೆ ಎನ್ನುವ ನಂಬಿಕೆಯೇ ಬಹಳ ಕಾಲದವರೆಗೂ ಮುಂದುವರಿಯಬಾರದು.

ಸಾಕಣೆಗೆ ಇಟ್ಟುಕೊಂಡಿದ್ದ ಎಲ್ಲ ಬೈವೋಲ್ಟಿನ್ ಬೆಳೆಗಳೂ ಆಗುತ್ತಿಲ್ಲ. ಬೆಳೆ ಉಳಿಯುವಂತಹ ಬೈವೋಲ್ಟಿನ್ ತಳಿಯನ್ನು ಒದಗಿಸುವ ಗುರಿ ನಮ್ಮ ಸಂಶೋಧಕರದಾಗಬೇಕು. ರೇಷ್ಮೆಯ ಅಂಶ ಹೆಚ್ಚಾಗಿರುವ ತಳಿಗಳು ಕ್ಷೇತ್ರದಲ್ಲಿ (Field trails) ಸೋಲುತ್ತಿರುವುದರ ಹಿನ್ನೆಲೆಯಲ್ಲಿ ನಮ್ಮ ಧೋರಣೆ ರೂಪುಗೊಳ್ಳಬೇಕು. ಹೆಚ್ಚು ಗಟ್ಟಿಮುಟ್ಟಾದ ತಳಿಗಳನ್ನು ಸಂಶೋಧಿಸಲು ನಿರಂತರ ಸಂಶೋಧನೆ ನಡೆಯಬೇಕು. ಹೀಗಾಗದಿದ್ದಲ್ಲಿ ಎಷ್ಟು ಸಂಶೋಧನೆ ನಡೆದರೂ ಅದು ಸಾಮಾನ್ಯ ರೈತನಿಗೆ ಉಪಯೋಗವಾಗದು. ನನ್ನ ಆಲೋಚನಾ ತರಂಗಗಳನ್ನು ದಿನಚರಿಯಲ್ಲಿ ಆ ರಾತ್ರಿಯೇ ಗುರುತು  ಹಾಕಿಕೊಂಡೆ. ಕೊಟ್ಟಿಗೆ ಗೊಬ್ಬರ ಹಾಗೂ ಹಾಗೂ ಹಸಿರೆಲೆ ಗೊಬ್ಬರವನ್ನು ಹೆಚ್ಚು ಹೆಚ್ಚಾಗಿ ಹಿಪ್ಪುನೇರಳೆ ತೋಟಕ್ಕೆ ಕೊಡಬೇಕೆನ್ನುವುದನ್ನೂ, ರೆಂಬೆಗಳನ್ನು ಕಿತ್ತು ಹುಳುಗಳಿಗೆ ಹಾಕುವುದು ಉತ್ತಮವೆಂಬುದನ್ನೂ ಪರಿಣತರ ಬಳಿ ಮಾತನಾಡುವಾಗ ತಿಳಿದೆ. ನಮ್ಮ ದೇಶದಲ್ಲಿ ರಸಗೊಬ್ಬರ ಬಳಕೆ ಮೇಲುಗೈ ಆಗಿ ಕೊಟ್ಟಿಗೆ ಗೊಬ್ಬರ 'ನೆಪಮಾತ್ರ'ವಾಗಿರುವುದನ್ನು ನೆನಪು ಮಾಡಿಕೊಂಡಾಗ ನಮ್ಮ ರೈತರು ಎಸಗುತ್ತಿರುವ ದೊಡ್ಡ ತಪ್ಪಿನ ನೆನಪಾಯಿತು. ರಸಗೊಬ್ಬರದ ಬಳಕೆ ಹಿಪ್ಪುನೇರಳೆಯ ಬೆಳೆಗೆ ಪೂರಕವಾಗಬೇಕೆ ಹೊರತು ಮೂಲ ಪೋಷಕವಾಗಲಾರದು ಎನ್ನುವುದನ್ನು ಅರ್ಥಮಾಡಿಕೊಂಡು ಕೊಟ್ಟಿಗೆ ಗೊಬ್ಬರವನ್ನು ಹೆಚ್ಚಾಗಿ ಸಂಗ್ರಹಿಸುವಂತಾಗಬೇಕೆನ್ನುವ ನಿಷ್ಠುರ ಸತ್ಯದ ಅರಿವಾಯಿತು.

ಬೆಳೆಗಾರರಿಗೆ ರೋಗರಹಿತ ಮೊಟ್ಟೆ ಸರಬರಾಜು ಆಗುವಂತಾದರೆ ಬಹುಪ್ರಮುಖ ಹೊಣೆಗಾರಿಕೆಯನ್ನು ನಿರ್ವಹಿಸಿದಂತೆ ಎಂದು ಆಗಾಗ ಹೇಳುತ್ತಾ ಬಂದವನು ನಾನು....

ರೇಷ್ಮೆ ಮೊಟ್ಟೆ ತಯಾರಿಕಾ ಕೇಂದ್ರಗಳು ಬೆಳೆಗಾರನ ಭಾಗದ ದೇವಾಲಯಗಳು ಎಂದು ಹೇಳುತ್ತಿದ್ದವನು.... ರೇಷ್ಮೆ ಇಲಾಖೆಯ ತಾಂತ್ರಿಕ ಸಿಬ್ಬಂದಿ ಇಲ್ಲಿ ಕರ್ತವ್ಯಲೋಪ ಮಾಡಿದರೆ ಆಗುವ ಅನಾಹುತದ ಬಗ್ಗೆ ಎಚ್ಚರಿಸುತ್ತಿದ್ದವನು.... ಸಹಜವಾಗಿಯೇ ಅಲ್ಲಿಯ ಗ್ರೈನೇಜುಗಳನ್ನು ನೋಡಲು ಬಯಸಿದೆ. ರೋಗ ಅಥವಾ ಮತ್ತಾವುದೇ ಕಾರಣಕ್ಕಾಗಿ ಮೊಟ್ಟೆಗಳನ್ನು ತಿರಸ್ಕರಿಸಿ ರೋಗರಹಿತ ಮೊಟ್ಟೆಗಳನ್ನು ಮಾತ್ರವೇ ವಿತರಣೆಗೆ ಸಿದ್ಧಮಾಡಿಡುವುದು ಎಲ್ಲ ಬಿತ್ತನೆ ಕೋಠಿಗಳಲ್ಲಿ ನಡೆವ ಕೆಲಸ. ಜಪಾನಿನಲ್ಲಿ ತಿರಸ್ಕೃತವಾಗುವ ಮೊಟ್ಟೆಯ ಶೇಕಡವಾರು ಪ್ರಮಾಣ ಕೇವಲ ೧-೨ ಮಾತ್ರ ಇದ್ದಿತು. "ಪ್ಯೂಪ" ಹಂತದಲ್ಲಿಯೇ ಗಂಡು-ಹೆಣ್ಣು ವಿಂಗಡಣೆ ಮಾಡುತ್ತಿದ್ದರು. ನಮ್ಮಲ್ಲಿ ಗೂಡಿನಿಂದ ಚಿಟ್ಟೆ ಹೊರಬಿದ್ದ ಮೇಲೆ ಮಾತ್ರ ಗಂಡು-ಹೆಣ್ಣು ಚಿಟ್ಟೆಗಳ ಆಯ್ಕೆ ಮಾಡುವುದು ರೂಢಿ.

"ನ್ಯಾಷನಲ್ ಸಿರಿಕಲ್ಚರಲ್ ಎಕ್ಸ್‌ಪರಿಮೆಂಟ್ ಸ್ಟೇಷನ್" ನ ನಿರ್ದೇಶಕರು ಡಾ. ಕಜುವೊ ಹಜ್‌ಮಾ ಸ್ನೇಹಪರ ವ್ಯಕ್ತಿ. ಸಂಶೋಧನೆಯ ಮೇಲೆ ಪ್ರಭುತ್ವ ಪಡೆದವರು. ಅಲ್ಲಿ ರೇಷ್ಮೆ ಉದ್ಯಮದ ಏಳುಬೀಳುಗಳನ್ನು ಒಳಹೊಕ್ಕು ನೋಡಿದವರು. ನನ್ನೊಡನೆ ಮನಬಿಚ್ಚಿ ಮಾತನಾಡಿದರು. ನನ್ನ ಪ್ರಶ್ನೆಗಳನ್ನು ಗಮನವಿಟ್ಟು ಕೇಳಿದರು. ಕೈಗಾರಿಕೆಯದೇ ಮೇಲಾಗಿ ರೇಷ್ಮೆ ಉದ್ಯಮ ಕುಂಟುತ್ತಿದೆ ಎಂದರು. ರೇಷ್ಮೆಯ ಅಂಶ ಅಧಿಕವಾಗಿರುವ ತಳಿಗಳು ಬೇಗ ರೋಗಕ್ಕೆ ಬಲಿಯಾಗುತ್ತಿರುವುದಾಗಿಯೂ, ರೇಷ್ಮೆ ಅಂಶ ಕಡಿಮೆ ಇರುವ ತಳಿಗಳಲ್ಲಿ ಹೆಚ್ಚು ದೃಢತೆ ಇರುವುದಾಗಿಯೂ, ಸಾಕಣೆ ಕೈಗೊಳ್ಳುವ ರೈತ ನಷ್ಟಕ್ಕೆ ಒಳಗಾಗದಂತೆ ನಾವು ಮೊಟ್ಟೆಯನ್ನು ಒದಗಿಸಬೇಕೆಂಬುದಾಗಿಯೂ ತಿಳಿಸಿದರು. ಈ ಹಿಂದೆ ಇದೇ ವಿಚಾರದಲ್ಲಿ ತಮ್ಮ ಅಭಿಪ್ರಾಯ ಕೊಟ್ಟಿದ್ದ ಡಾ. ಓಮುರಾ ಅವರ ಹೇಳಿಕೆಯನ್ನು ಪುಷ್ಟೀಕರಿಸಿದಂತಾಯಿತು ಎಂದುಕೊಂಡೆ. ಚೀನಾದಲ್ಲಿಯೂ ಇದೇ ನೀತಿಗೆ ಹೆಚ್ಚು ಒತ್ತು ಕೊಡಲಾಗುತ್ತಿದೆಯೆಂದು ತಿಳಿಸಿದರು. ರೇಷ್ಮೆಯ ಅಂಶದ ಶೇಕಡವಾರು ಪ್ರಮಾಣ ಕಡಿಮೆಯಿದ್ದರೂ ಪರವಾಗಿಲ್ಲ ತಳಿ ದೃಢವಾಗಿದ್ದರೆ ಸಾಕೆನ್ನುವ ವಿಚಾರವೇ ಜಪಾನ್‌ನಲ್ಲಿಯೂ ಜನಪ್ರಿಯವಾಗುತ್ತಿದೆ. ಭಾರತದಲ್ಲಿ ನಡೆಯುತ್ತಿರುವ ಸಂಶೋಧನೆಯ ಬಗ್ಗೆ ಇವರು ಹೆಚ್ಚು ಮಾಹಿತಿಯನ್ನಿಟ್ಟುಕೊಂಡಿದ್ದಾರೆ. ಡಾ. ಹಜ್‌ಮಾ, ಮೈಸೂರಿನಲ್ಲಿರುವ ಸಂಶೋಧನಾ ಸಂಸ್ಥೆಯ ಕ್ಷೇತ್ರದಲ್ಲಿರುವ ಸಮಸ್ಯೆಗಳನ್ನು ಆಧರಿಸಿ ಕಾರ್ಯಕ್ರಮ ರೂಪಿಸಿಕೊಳ್ಳಬೇಕೆಂದು ತಿಳಿಸಿದರು. ರಾಜ್ಯ ಸರ್ಕಾರದ ಸಂಶೋಧನಾ ಸಂಸ್ಥೆ (ಕೆಎಸ್‌ಎಸ್‌ಡಿಐ) ಮೈಸೂರಿನ ಸಂಸ್ಥೆಯು ತುಳಿದ ಹಾದಿಯನ್ನೇ ಅನುಸರಿಸಬಾರದೆಂಬುದು ಅವರ ಖಚಿತ ಅಭಿಪ್ರಾಯವಾಗಿತ್ತು. ಒಟ್ಟಾರೆ ಭಾರತದ ರೇಷ್ಮೆ ಕೃಷಿ ಸಂಶೋಧಕರ ಮೂಲ ನಿಲುವಿನಲ್ಲಿ ಬದಲಾವಣೆಯಾಗಬೇಕೆಂದರು ಅವರು.

ಇರಬಾರಗಿಯಲ್ಲಿನ 'ಸೆಕೆಮೋತೊ' ಚಾಕಿ ಸಾಕಣೆ ಕೇಂದ್ರಕ್ಕೆ ಭೇಟಿ ಕೊಟ್ಟಿದ್ದೆ. ಅದು ಒಂದು ಖಾಸಗಿ ಸಂಸ್ಥೆ. ಹದಿನೈದು ವರ್ಷಗಳಷ್ಟು ಹಳೆಯದು. ೧೨೦ ಮಂದಿ ಸದಸ್ಯರಿದ್ದಾರೆ. ತಿಂಗಳಿಗೊಂದು ಬಾರಿ ಚಾಕಿ ಕಟ್ಟುತ್ತಾರೆ. ಒಂದು ದಿನಕ್ಕೆ ಎರಡು ಬಾರಿ ಮಾತ್ರ ಆಹಾರ ಕೊಡುತ್ತಾರೆ. ಎರಡನೇ ಜ್ವರದವರೆಗೆ ಸಾಕಣೆ ಮಾಡಿದ ಚಾಕಿಗಳಿಗೆ ೧೦೦ ಮೊಟ್ಟೆಗೆ ೮೪೦೦

ಎನ್‌ಗಳು ಅಥವಾ ೩೦ ಡಾಲರ್‌ಗಳಾಗುವುದಾಗಿ ತಿಳಿಯಿತು. ಬಾಕಿ ಸಾಕಣೆಯಲ್ಲಿ ಜಪಾನಿಯರು ತೋರುವ ಶ್ರದ್ಧೆಯನ್ನು ಗಮನಿಸಿದರೆ ನಮ್ಮಲ್ಲಿ ಅಂತಹ ದಿನಗಳನ್ನು ಕಾಣಬಲ್ಲನೆ ಎನಿಸಿತು. ನಮ್ಮಲ್ಲಿರುವ ಬಾಕಿ ಕೇಂದ್ರಗಳಿಗೂ, ಅಲ್ಲಿನ ಕೇಂದ್ರಗಳಿಗೂ ಕಾರ್ಯವಿಧಾನಗಳಿಗೂ ಅಜಗಜಾಂತರ.

ಸುಜುಕಿ ಎಂಬ ರೈತನ ಮನೆಗೆ ಹೋಗಿದ್ದೆ. ಮೂರು ಹೆಕ್ಟೇರು ತೋಟದ ಒಡೆಯ. ೭೫೦ ಮೊಟ್ಟೆಯ ಬೆಳೆ ಇದ್ದಿತು. ೬೦೦ ಕಿಲೋಗ್ರಾಂ ಗೂಡು ಅಂದಾಜು ಮಾಡಿದ್ದೆ. ರೇಷ್ಮೆಯ ಜೊತೆಗೆ ಬತ್ತ, ತರಕಾರಿಯನ್ನು ಸಹ ಸುಜುಕಿ ಬೆಳೆಯುತ್ತಾರೆ. ಆದರೆ ಆತನ ಮೊದಲ ಗಮನ ರೇಷ್ಮೆಗೆ. ಬೆಳೆದ ಹುಳುಗಳ (Adult worms) ಪಾಲನೆ- ಪೋಷಣೆಯಲ್ಲಿ ಭಾರತೀಯರು ಹೆಚ್ಚು ಶ್ರದ್ಧೆ ತೋರುತ್ತಾರೆ. ಚಾಕಿಗೆ ಅಷ್ಟಕ್ಕಷ್ಟೆ. ಆದರೆ ಜಪಾನಿಯರಲ್ಲಿ ಅದು ತಿರುಗು ಮುರುಗು. "ಸುಕುಬಾ" ದಲ್ಲಿಯೇ ಊಟ ಮಾಡಿ ಅಲ್ಲಿಂದ "ಯೂಕಿ" ಗೆ ಹೊರಟೆವು. ಯೂಕಿ ಒಂದು ನಗರ.ಇಲ್ಲಿ (Perfectural Director) ರೊಡನೆ ದೀರ್ಘ ಚರ್ಚೆಯೊಡನೆ ಅಲ್ಲೇ ತಂಗಣೆ. ಇಲ್ಲಿಯ ಪ್ರತಿಯೊಬ್ಬ ರೈತನಿಗೆ ಎರುಡ ಕಾರು, ಒಂದು ದೂರವಾಣಿ ಇರುವುದು ನನ್ನ ಗಮನಕ್ಕೆ ಬಂತು. ಈ ರಾಷ್ಟ್ರದಲ್ಲಿ ವ್ಯವಸಾಯ ಸಹಕಾರ ಸಂಘಗಳಿಂದ ಪ್ರತೀ ರೈತನಿಗೂ ಅವನ ಬೆಳೆಯ ಬಗ್ಗೆ ರೇಡಿಯೋ ಮೂಲಕ ಸಲಹೆ ಕೊಡುತ್ತಾರೆಂದು ತಿಳಿದುಬಂತು. ಯೂಕಿನಗರ ಕೈಮಗ್ಗದ ರೇಷ್ಮೆ ಬಟ್ಟೆ ನೇಯುವ ಪ್ರಸಿದ್ಧನಗರ.

**ಯಮಗತಾ - ಸುರಾಕಾ**

ಮರುದಿನ ಯಾಗಿ ನಗರದಿಂದ ತೊಯಾಕ್ ಹೆದ್ದಾರಿಯಲ್ಲಿ ಪ್ರಯಾಣ ಮುಂದುವರಿಯಿತು. ಕಣ್ಣು ಹಾಯಿಸಿದೆಡೆಗಳಲ್ಲೆಲ್ಲಾ ಹಸಿರು. ಚೊಕ್ಕಟವಾಗಿರುವ ರಸ್ತೆಗಳು. ಯಮಗತಾ ಪ್ರಿಫೆಕ್ಚರ್‌ಗೆ ಹೊರಟಿದ್ದೇವೆ ಎಂದು ಹೇಳಿದರು. ನನ್ನ ಜೊತೆಯಲ್ಲಿದ್ದ ತನಾಕಾ. ಜಪಾನಿನಲ್ಲಿ ಸಾಮಾನ್ಯವಾಗಿ ರೇಷ್ಮೆ ಬೆಳೆಗಾರನ ಮನೆಯಲ್ಲಿ ಕನಿಷ್ಠ ಎರಡು ಕಾರು ಮತ್ತು ಒಂದು ಫೋನು ಇದ್ದೇ ಇರುತ್ತದೆ ಎಂದರು. ವ್ಯವಸಾಯ ಸಹಕಾರ ಸಂಘಗಳು ರೈತರಿಗೆ ಬಹಳಷ್ಟು ಅನುಕೂಲ ಮಾಡಿಕೊಟ್ಟಿವೆ ಎನ್ನುವುದನ್ನು ತಿಳಿದಾಗ ನಮ್ಮಲ್ಲಿರುವ ಸೊಸೈಟಿಗಳು ಥಟಕ್ಕನೆ ನೆನಪಿಗೆ ಬಂದವು. ಬೆಳೆಗಾರರನ್ನು ಅವರವರ ಮನೆಯಲ್ಲಿಯೇ ಕಂಡು ಮಾತನಾಡಿಸುವ ಆಸೆ ಹೊತ್ತಿದ್ದೆನಾದ ಕಾರಣ ನನ್ನ ಮನಸ್ಸನ್ನು ಅರಿತು ಅಂತಹ ವ್ಯವಸ್ಥೆ ಮಾಡಿದ್ದರು. ಜಪಾನಿ ಭಾಷೆಯಲ್ಲಿ "ಯಮ" ಎಂದರೆ ಬೆಟ್ಟ. ಯಮಗತಾ ಎಂದರೆ ಬೆಟ್ಟಗುಡ್ಡಗಳಿಂದ ಆವೃತ್ತವಾಗಿರುವ ಪ್ರದೇಶ ಎಂದರ್ಥ ಎಂದು ನಾವಿದ್ದ ಸ್ಥಳಕ್ಕೆ ಹೆಸರಿಟ್ಟಿರುವುದನ್ನು ಪರಿಚಯಿಸಿದರು ನನ್ನ ಜೊತೆಗಿದ್ದವರು. ಬೆಟ್ಟ-ಗುಡ್ಡಗಳೇ ತುಂಬಿರುವ 'ಯಮಗತಾ' ದಲ್ಲಿ ತಗ್ಗು ಪ್ರದೇಶದಲ್ಲಿ ಭತ್ತ, ಎತ್ತರ ಪ್ರದೇಶದಲ್ಲಿ ಹಿಪ್ಪುನೇರಳೆ ಬೆಳೆಯುವುದು ರೂಢಿ. ಎಕ್ಸ್‌ಟೆನ್‌ಷನ್ ಡೈರೆಕ್ಟರ್ ತಕಾಮಿಯೂ, ಎಕ್ಸ್‌ಟೆನ್‌ಷನ್ ಆಫೀಸರ್ ಕೊಂಥಾ, ಅವರು ಅಲ್ಲಿನ ವಿಸ್ತರಣಾ ಕಾರ್ಯಕರ್ತರೊಡನೆ ರೈತರ ಭೇಟಿಯ ವ್ಯವಸ್ಥೆ ಮಾಡಿದ್ದರು. ಅಲ್ಲಿಯ ರೈತರೊಡನೆ ಕಳೆದಷ್ಟು ವೇಳೆ ತುಂಬಾ ಉಪಯುಕ್ತವೆನಿಸಿತ್ತು.

ಪ್ರತಿ ಗಳಿಗೆಯಲ್ಲಿಯೂ ನನ್ನ ನಾಡಿನ ರೈತರ ಚಿತ್ರ ನೆನಪಾಗುತ್ತಿತ್ತು. ಅಲ್ಲಿಯ ರೈತರ ಆರ್ಥಿಕ ಸ್ಥಿತಿ ಉತ್ತಮಗೊಂಡಿರಬೇಕಾದರೆ ಅವರು ನಿರ್ವಹಿಸುತ್ತಿರುವ ಕಸುಬಿನಲ್ಲಿ ಅವರಿಗಿರುವ ವೈಜ್ಞಾನಿಕ ದೃಷ್ಟಿಕೋನ ಹಾಗೂ ಅತೀವ ಶ್ರದ್ಧೆ ಆಸಕ್ತಿ ಎನ್ನುವುದನ್ನು ಗಮನಿಸಲು ಬೇರೆ ಯಾರನ್ನು ಕೇಳಬೇಕಾಗಿರಲಿಲ್ಲ. ಈ ಬೆಳೆಯಿಂದ ಸುಮಾರು "ಇಷ್ಟು ತೂಕ" ಗೂಡು ಸಿಕ್ಕುತ್ತದೆ ಎಂದು ಹೇಳುತ್ತಿದ್ದ ಅವರು ಬೆಳೆ ಹಾಳಾದ ಪ್ರಕರಣಗಳನ್ನು ಹೇಳುತ್ತಿರಲಿಲ್ಲ. ರೋಗ ಬಂದು ಬೆಳೆ ಕೆಡಲಿಲ್ಲವೆ ಎಂಬ ನನ್ನ ಪ್ರಶ್ನೆಗೆ "ಬೆಳೆ ಯಾಕೆ ಕೆಡುತ್ತೆ.... ಅಲ್ಲೊಂದು-ಇಲ್ಲೊಂದು ಹುಳು ರೋಗಕ್ಕೆ ತುತ್ತಾಗಬಹುದು. ಅಷ್ಟೇ ಹೊರತು ಇಳುವರಿ ಕುಸಿಯಲು ಸಾಧ್ಯವೇ ಇಲ್ಲ" ಎನ್ನುವ ಖಚಿತ ವಿಶ್ವಾಸ ಅವರಲ್ಲಿತ್ತು. ಚಾಕಿ ಸಾಕಣೆಯಲ್ಲಿ ವಿಪರೀತ ಗಮನ ಕೊಡುವ ಈ ಮಂದಿ ಬೆಳೆದ ಹುಳುಗಳ ಸಾಕಣೆಯಲ್ಲಿ ನಿರ್ಲಕ್ಷ್ಯರಾಗಿಯೇ ಇರುತ್ತಾರೆ. ಹುಳುಗಳ ಗಾತ್ರ ನೋಡಿದಾಗ ನನಗೆ "ತಳಿ" ಯ ಗುಣ, ಸ್ವಭಾವವೂ ಹಾಗೆಯೇ ಇರಬೇಕು ಎನ್ನಿಸಿತ್ತು. ಹಿಪ್ಪುನೇರಳೆ ತೋಟಗಳು ತೂಗಿ ತೊನೆಯುವುದನ್ನು ನೋಡುವುದೇ ಒಂದು ಹಬ್ಬವೆನ್ನಿಸಿತ್ತು. ತೋಟ ನಿರ್ವಹಣೆಯಲ್ಲಿ ಹೆಚ್ಚಿನ ಆಸಕ್ತಿ ತೋರದೆ ಹುಳು ಸಾಕಣೆಯಲ್ಲಿ ಗಮನಹರಿಸುವ ನನ್ನ ನಾಡಿನ ಕೆಲವರು ನೆನಪಿಗೆ ಬಂದದ್ದೂ ಉಂಟು.

ಲೋಕಭಿರಾಮವಾದ ಕೆಲವು ಸಂಗತಿಗಳನ್ನು ಜಪಾನಿಯರೊಡನೆ ಪ್ರಸ್ತಾಪ ಮಾಡಿದೆ. ಅಮೆರಿಕನ್ನರನ್ನು ಕಂಡರೆ ಇವರಿಗೆ ತುಂಬಾ ಅಭಿಮಾನ. ಮಹಾಯುದ್ಧದ ಸಮಯದಲ್ಲಿ ಬಾಂಬ್ ಎಸೆದು ತಲೆಮಾರುಗಳವರೆಗೂ ನೆನಪಿನಲ್ಲಿ ಉಳಿಯುವಂತಹ ಬರ್ಬರ ಕೃತ್ಯ ಎಸಗಿದ್ದ ಅಮೆರಿಕನ್ನರು ಈಗ ಅವರ ದೃಷ್ಟಿಯಲ್ಲಿ ಪರಮಾಪ್ತರು. ಸುಟ್ಟು ಹೋಗಿದ್ದ ನಗರವನ್ನು ಮರಳಿ ಕಟ್ಟಲು ಸಹಾಯ ಮಾಡಿದ್ದಾರೆ ಎಂಬ ಕಾರಣಕ್ಕಾಗಿ. ಅಲ್ಲದೆ ಜಪಾನಿನಲ್ಲಿ ಉತ್ಪಾದನೆಯಾಗುತ್ತಿರುವ ಯಾವ ಸಾಮಗ್ರಿಗಳೇ ಆದರೂ ಮೊದಲ ಮಾರುಕಟ್ಟೆ ಅಮೆರಿಕಾ. ಎಲ್ಲ ವಿಧದಲ್ಲಿಯೂ ನೆರವಾಗುತ್ತಿರುವ ರಾಷ್ಟ್ರ. ಯಮಗತಾ ಪ್ರಿಫೆಕ್ಚರಲ್‌ನ ಮತ್ತೊಂದು ಜನಪ್ರಿಯ ಬೆಳೆಯೆಂದರೆ "ಚೆರ್ರಿ" ಹಣ್ಣು, ಎಲ್ಲಿ ನೋಡಿದರೂ ದಂಡಿಯಾಗಿದೆ.

ವಿಸ್ತರಣಾಧಿಕಾರಿಯ ಸಂಬಳವನ್ನು ಜಿಲ್ಲಾ ಆಡಳಿತ (ಪ್ರಿ ಫೆಕ್ಚರಲ್ ಗೌರ್ನಮೆಂಟ್) ಕೇಂದ್ರಾಡಳಿತ (Central Govt) ರೈತರ ಸಹಕಾರ ಸಂಘ (Formers co-operative society) ಸಮನಾಗಿ ಹಂಚಿಕೊಳ್ಳುತ್ತವೆ.

ಬೆಳೆ ಕೆಟ್ಟು ಹೋಯಿತೆಂದಾಗ ಕಾರಣ ಪತ್ತೆ ಮಾಡಲು ವಿಸ್ತರಣಾ ಕ್ಷೇತ್ರದ ನಿರ್ದೇಶಕ, ಜಿಲ್ಲಾ ಸಂಶೋಧನಾ ಸಂಸ್ಥೆ ಕಾರ್ಯನಿರತವಾಗುತ್ತದೆ. ತದನಂತರ ರಾಷ್ಟ್ರೀಯ ರೇಷ್ಮೆ ಕೃಷಿ ಪ್ರಯೋಗ ಸಂಸ್ಥೆ (national sericultural expertmental station) ಅಂತಿಮ ವಿಶ್ಲೇಷಣೆ ಕೈಗೊಳ್ಳುತ್ತದೆ. ಬಿತ್ತನೆಯ ದೋಷದಿಂದ ಬೆಳೆ ಕೆಟ್ಟಿತೆಂದು ರುಜುವಾತಾದರೆ "ಗ್ರೈನೇಜು" ನಷ್ಟ ತುಂಬಿಕೊಡಲು ಕೇಳಲಾಗುತ್ತದೆ. ಗೂಡಿನ ಬೆಲೆಯನ್ನು ಸಹ.

ಇಲ್ಲಿರುವ ವಿಸ್ತರಣಾಧಿಕಾರಿಗಳ ಪೈಕಿ ಒಬ್ಬರು ಜಿಲ್ಲಾಡಳಿತದಿಂದ ನೇಮಕಗೊಂಡವರು. ಮತ್ತೊಬ್ಬರು ಸಹಕಾರಿ ಸಂಘದಿಂದ ನೇಮಕವಾದವರು. ತನ್ನ ಕೆಲಸದಲ್ಲಿ ನಿರ್ಲಕ್ಷ್ಯ ತೋರಿ

ಬೆಳೆ ಹಾಳಾಗಲು ಕಾರಣನಾದನೆಂಬುದು ಸಾಬೀತು ಆದರೆ ಸಹಕಾರ ಸಂಘವು ಆ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕುತ್ತದೆ. ಜಿಲ್ಲಾ ಆಡಳಿತದಿಂದ ನೇಮಕಗೊಂಡ ವಿಸ್ತರಣಾಧಿಕಾರಿಯ ಲೋಪ ಈ ತೊಂದರೆಗೆ ಕಾರಣವಾಯಿತು ಎಂದಾಗ ಅಂತಹವರನ್ನು ಅಲ್ಲಿಂದ ವರ್ಗಾಯಿಸುವ ಅಥವಾ ಡಿಸ್‌ಮಿಸ್ ಮಾಡುವ ಶಿಸ್ತಿನ ಕ್ರಮ ಕೈಗೊಳ್ಳಲಾಗುತ್ತದೆ. ರೈತನೇ ನಿರ್ಲಕ್ಷ್ಯದಿಂದ ಬೆಳೆ ಕಳೆದುಕೊಂಡಿದ್ದಾನೆಂಬುದು ಖಚಿತವಾದರೆ ಅವನೇ ಆ ನಷ್ಟ ಅನುಭವಿಸಬೇಕು. ಯಾವ ಪರಿಹಾರಧನವೂ ಆತನಿಗೆ ಸಿಕ್ಕುವುದಿಲ್ಲ.

ಈ 'ಯಮಗತಾ'ದ ರಮಣೀಯ ದೃಶ್ಯದಿಂದ ಆಕರ್ಷಿತನಾದ ನಾನು ಆ ರಾತ್ರಿ ಅಲ್ಲಿಯೇ ಉಳಿಯುವ ಅಪೇಕ್ಷೆ ವ್ಯಕ್ತಪಡಿಸಿದೆ. ಗೆಳೆಯ ತನಾಕಾ ಮತ್ತು ಇಸೋಬೆ ಅವರುಗಳು 'ಸಿಂಜೋ' ಪಟ್ಟಣದ ಸೆಮಿಗ್ರಾಂಡ್ ಹೋಟೆಲ್‌ನಲ್ಲಿ ನನ್ನ ವಾಸ್ತವ್ಯಕ್ಕಾಗಿ ವ್ಯವಸ್ಥೆ ಮಾಡಿದ್ದರು.

ಬೆಟ್ಟಗಳ ಮಧ್ಯದಲ್ಲಿ ನದಿಯ ದಡದಲ್ಲಿರುವ ಈ ವಸತಿಗೃಹ ನನಗೆ ವಿನೂತನ ಅನುಭವ ತಂದಿತು. ಮೊದಲ ಬಾರಿಗೆ ಜಪಾನಿನ ರಾತ್ರಿ ನರ್ತನವನ್ನು ನೋಡುವ ಕಾರ್ಯಕ್ರಮ ಏರ್ಪಡಿಸಿದರು. ಅತ್ಯಂತ ಆಶ್ಚರ್ಯಕರ ಪದ್ಧತಿಯೊಂದನ್ನು ಇಲ್ಲಿ ನಾನು ಕಂಡೆ. ಈ ಹೋಟೆಲ್‌ನ ಒಂದು ಭಾಗದಲ್ಲಿ ಉಕ್ಕಿ ಹರಿಯುವ ಬಿಸಿ ನೀರಿನ ಏರ್ಪಾಟಿರುವ ಸಾರ್ವತ್ರಿಕ ಸ್ನಾನಗೃಹದಲ್ಲಿ ಒಂದು ಭಾಗದಲ್ಲಿ ನಗ್ನರಾದ ಹೆಂಗಸರೂ, ಮತ್ತೊಂದು ಭಾಗದಲ್ಲಿ ನಗ್ನರಾದ ಗಂಡಸರೂ ಒಟ್ಟಾಗಿ ಸ್ನಾನ ಮಾಡುವ ಪದ್ಧತಿಯನ್ನು ನೋಡಿದೆ. ಈ ಸ್ನಾನ ಗೃಹಕ್ಕೆ ಗಾಜಿನ ಪರದೆಯಿರುವುದರಿಂದ ಸ್ನಾನ ಮಾಡುವ ದೃಶ್ಯವನ್ನು ಹೋಟೆಲಿನಲ್ಲಿ ಕುಳಿತು ಯಾರು ಬೇಕಾದರೂ ನೋಡವ ಅವಕಾಶವಿದೆ. ಆದರೆ ಸಂಪೂರ್ಣವಾಗಿ ನಗ್ನರಾಗಿ ಸ್ನಾನ ಮಾಡುವ ಹೆಂಗಸರಾಗಲೀ, ಗಂಡಸರಾಗಲೀ, ಯಾವ ಅಂಜಿಕೆ, ನಾಚಿಕೆ ಅಥವಾ ಸಂಕೋಚವಿರುವಂತೆ ಕಾಣಲಿಲ್ಲ. ಈ ರಾಷ್ಟ್ರದ ಜನರಲ್ಲಿ ಹೆಚ್ಚಿನ ಜನಕ್ಕೆ ಇಂಗ್ಲಿಷ್ ಭಾಷೆ ಮಾತನಾಡಲು ಬರುವುದಿಲ್ಲ. ಕೆಲವರಿಗೆ ಓದಲು, ಬರೆಯಲು ಬಂದರೂ ಸಹ ಮಾತನಾಡಲೂ ಅವರಿಂದ ಸಾಧ್ಯವಿಲ್ಲ. ನನಗೆ ಭಾಷೆಯ ತೊಂದರೆಯಾಗದೇ ಇರಲಿ ಎಂದು ಇದ್ದುದ್ದರಲ್ಲಿ ಉತ್ತಮವಾಗಿ ಇಂಗ್ಲಿಷ್ ಮಾತನಾಡುವ 'ಟೋಯೋ' ಕಂಪನಿಯ ವ್ಯವಸ್ಥಾಪಕ ನಿರ್ದೇಶಕ ಶ್ರೀ ಇಸೋಬೆರವರು ನನ್ನ ಇಡೀ ಪ್ರವಾಸದ ಸಮಯದಲ್ಲಿ ಜೊತೆಯಲ್ಲಿರಬೇಕೆನ್ನುವ ಏರ್ಪಾಡನ್ನು ನಮ್ಮ ಕರ್ನಾಟಕದ ರೇಷ್ಮೆ ಕೃಷಿ ನಿರ್ದೇಶಕರಾದ ಶ್ರೀ ಬಿ.ಕೆ. ದಾಸ್‌ರವರು ಕಟ್ಟುನಿಟ್ಟಾಗಿ ಗೊತ್ತು ಮಾಡಿದ್ದರು. ಈ ಮನುಷ್ಯ ನಾನು 'ನಾರಿಟಾ' ವಿಮಾನ ನಿಲ್ದಾಣದಲ್ಲಿ ಇಳಿದ ಸಮಯದಿಂದ ಹಾಂಕಾಂಗ್ ವಿಮಾನ ನಿಲ್ದಾಣದಲ್ಲಿ ವಿಮಾನಕ್ಕೆ ಹೆಜ್ಜೆಯಿಡುವವರೆಗೂ ನನ್ನ ಜೊತೆಯಲ್ಲೇ ಇದ್ದು, ಎಲ್ಲೂ ಯಾವುದೇ ರೀತಿಯ ತೊಂದರೆಯಾಗದಂತೆ ನೋಡಿಕೊಂಡಂತಹ ಅತ್ಯಂತ ಸ್ನೇಹಪ್ರಿಯ ವ್ಯಕ್ತಿ. ನನ್ನ ಪ್ರವಾಸದ ಯಶಸ್ಸಿಗೆ ಕಾರಣರಾದವರಲ್ಲಿ ಈತ ಮೊದಲಿಗ. ಗೆಳೆಯ ಶ್ರೀ ಇಸೋಬೆಯವರ ಅತ್ಯಂತ ನಿಕಟ ಬೆಂಗಾವಲು ಇದ್ದರೂ ಸಿಂಜೋ ಪಟ್ಟಣದ "ಸೆಮಿಗ್ರ್ಯಾಂಡ್" ಹೋಟೆಲಿನಲ್ಲಿ ತಂಗಿದ್ದ ದಿನ ಮೊಟ್ಟ ಮೊದಲ ಬಾರಿಗೆ ಭಾಷೆಯ ತೊಂದರೆಯುಂಟಾಯಿತು. ಅತ್ಯಂತ ವಿಶಾಲವಾದ

ಸುಸಜ್ಜಿತವಾದ, ಹಿಂದುಗಡೆ ಹಸಿರಾದ ಕಾಡಿಗೆ ಹೊಂದಿಕೊಂಡಿರುವ ನನ್ನ ಕೊಠಡಿಯಿಂದ ಬೆಳಗ್ಗೆ ಕಾಫಿಗಾಗಿ ಸಂಪರ್ಕಿಸಿದಾಗ ಆ ಇಡೀ ಹೋಟೆಲ್ಲಿನ ಸಿಬ್ಬಂದಿಗೆ ಯಾರಿಗೂ ಇಂಗ್ಲಿಷ್ ಬರದೇ ನಾನು ಏನು ಹೇಳುತ್ತಿದ್ದೇನೆ ಎನ್ನುವ ವಿಷಯ ಅರ್ಥವಾಡಿಕೊಳ್ಳಲು ಸಾಧ್ಯವಾಗಲಿಲ್ಲ. ನಾನೇ ನೇರವಾಗಿ ಕೆಳಗೆ ಹೋಗಿ ಕೇಳಿದರೂ ಅವರಿಗೆ ತಲೆ ಚಚ್ಚಿದರೂ ಒಂದು ಪದವೂ ಇಂಗ್ಲಿಷ್ ಅರ್ಥವಾಗುತ್ತಿರಲಿಲ್ಲ. ಅವರ ಭಾಷೆ ನನಗೆ ಅರ್ಥವಾಗುತ್ತಿರಲಿಲ್ಲ. ಕೊನೆಗೆ ಶ್ರೀ ಇಸೋಬೆರವರು ತಂಗಿದ್ದ ಕೊಠಡಿಗೆ ಹೋಗಿ ಅವರನ್ನು ಎಬ್ಬಿಸಿ ಕಾಫಿ ತರಿಸಲು ಏರ್ಪಾಡು ಮಾಡಲು ಕೇಳಿಕೊಳ್ಳಬೇಕಾಯಿತು. ಬಹುಶಃ ನನ್ನ ಇಡೀ ಪ್ರವಾಸದಲ್ಲಿ ಇದು ಒಂದೇ ಸಮಯದಲ್ಲಿ ಭಾಷೆಯ ತೊಂದರೆ ಕಾಣಿಸಿತು. ಯಮಗತ ಪ್ರಿಫೆನಿಕ್ಚರ್‌ನ ಒಂದು ಪಟ್ಟಣವಾದ ಸಿಂಜೋನಲ್ಲಿ ೮ನೇ ತಾರೀಖು ಬಟ್ಟೆಗಳನ್ನು ಹೊಲಿಯುವ ಒಂದು ಕಾರ್ಖಾನೆಗೆ ಭೇಟಿ ನೀಡಿದೆವು. ಇಲ್ಲಿಯ ಕೆಲಸಗಾರರು ೧೦೦ ರಲ್ಲಿ ೮೦ ಭಾಗ ಹೆಂಗಸರು, ೨೦ ಭಾಗ ಗಂಡಸರು. ಅವರ ಕೆಲಸದ ಶ್ರದ್ಧೆ, ವ್ಯವಸ್ಥಿತ ಉತ್ಪಾದನೆ, ಈ ಕೆಲಸಗಾರರಿಗಾಗಿ ಮಾಡಿರುವ ಊಟದ ವ್ಯವಸ್ಥೆ, ಇತರೇ ಅನುಕೂಲಗಳು ಮತ್ತು ಬರುವ ಲಾಭವನ್ನು ಹಂಚಿಕೊಳ್ಳುವ ವಿಧಾನವನ್ನು ತಿಳಿದು ನನಗೆ ತುಂಬಾ ಅಚ್ಚರಿಯೆನಿಸಿತು. ಇಲ್ಲಿಂದ "ಮೊಂಗಾಯಿ" ನದಿಯ ಪಾತ್ರದಲ್ಲಿ "ಮಾಚುಯಾಮ" ಪಟ್ಟಣಕ್ಕೆ ಹೊರಟೆವು. ಎಲ್ಲೆಲ್ಲೂ ಇರುವ ವನಸಿರಿಯನ್ನು ಇಲ್ಲಿಯೂ ಕಾಣಬಹುದು. ಜಪಾನೀಯರ ಸಾಂಪ್ರದಾಯಿಕ ಹುಲ್ಲಿನ ಮನೆಗಳು ಎಲ್ಲೆಲ್ಲೂ ನನ್ನ ಮನಸೆಳೆದವು. ರಸ್ತೆಗಳ ವಿಶಾಲತೆ, ಸ್ವಚ್ಛತೆ, ವಾಹನಗಳ ಚಾಲಕರ ಶಿಸ್ತು ಇಲ್ಲೂ ನನ್ನ ಮನ ಸೆಳೆಯಿತು. 'ಮಂಘಾಯಿ' ನದಿಯ ಎಡಗಡೆಯ ಪಾತ್ರದಲ್ಲಿ ಹಾದುಹೋಗುವ ರಸ್ತೆಯಲ್ಲಿ ಹೋಗುವಾಗ ಆ ಸೌಂದರ್ಯ ನನಗೆ "ಭವ್ಯ" ವಾಗಿ ಕಂಡಿತು. ಮಾಟುವೋಕಾ ಫಿಲೇಚರ್‌ಗೆ ಭೇಟಿ ನೀಡಿ ಅಲ್ಲಿಯ ಅಧ್ಯಕ್ಷರೊಡನೆ ಚರ್ಚಿಸಿದೆ. ಅಲ್ಲಿಂದ "ಮಾಟುವೋಕಾ" ನೇಯ್ಗೆ ಫ್ಯಾಕ್ಟರಿಗೆ ಭೇಟಿ ಕೊಟ್ಟು ಅಲ್ಲಿ ನಮ್ಮ ಕೆ. ಎಸ್. ಐ. ಸಿ.ಯ 'ಸ್ಕಾರ್ಫ್'ನ ಗುಣಮಟ್ಟದ ಮತ್ತು ವೈವಿಧ್ಯತೆಯ ಬಗ್ಗೆ ಚರ್ಚೆ ಮಾಡುವಾಗ ಕೆ. ಎಸ್. ಐ. ಸಿ. ಬಟ್ಟೆಯ ನೇಯ್ಗೆ ಉತ್ತಮವಾಗಿಲ್ಲ ಮತ್ತು ಪ್ರಿಂಟಿಂಗ್ ಸಂಪೂರ್ಣವಾಗಿ ಪೆನಿಟ್ರೇಟ್ ಆಗಿಲ್ಲ ಎಂದು ಅವರು ಅಭಿಪ್ರಾಯಪಟ್ಟರು. ಈ ಫಿಲೇಚರ್ ಮತ್ತು ವೀವಿಂಗ್ ಫ್ಯಾಕ್ಟರಿ ಇರುವುದು ಸುರಾಕಾ ಪಟ್ಟಣದಲ್ಲಿ. ಈ ಪಟ್ಟಣ ಕೂಡಾ ಜಪಾನಿನಲ್ಲಿ ಒಂದು ಪ್ರಸಿದ್ಧಿಯಾದ ಪಟ್ಟಣ. ಅದೇ ದಿನ 'ಮಾಟುವೋಕಾ' (Matuoka) ರೇಷ್ಮೆ ಬಿತ್ತನೆ ಕೋಠಿಗೆ ಭೇಟಿ ನೀಡಿದೆವು. ರೇಷ್ಮೆ ಮಂತ್ರಿಯಾಗಿ ಕರ್ನಾಟಕದ ರೇಷ್ಮೆ ಬಿತ್ತನೆ ಕೋಠಿಗಳನ್ನು ವ್ಯವಸ್ಥೆಗೊಳಿಸಲು ನಾನು ಪಟ್ಟಪಾಡು ನೆನಪಿಗೆ ಬಂತು. ಇಲ್ಲಿಯ ಪರಿಸ್ಥಿತಿಯೊಡನೆ ಹೋಲಿಸಿ ನಿಟ್ಟುಸಿರುಬಿಟ್ಟೆ. ಅದಾದ ಮೇಲೆ 'ಪುಜಿಸಿಮೋ' (Fujisimo) ಪಟ್ಟಣದಲ್ಲಿ ಬೆಳೆಗಾರರ ಮನೆಗೆ ಭೇಟಿ ಮಾಡಿದೆ. ಅವರಲ್ಲಿ ಶ್ರೀ ಕಾಥೋ ಒಬ್ಬ ದೊಡ್ಡ ಬೆಳೆಗಾರರು. ೧,೭೫೦ ಮೊಟ್ಟೆಯಿಂದ ಕಟ್ಟಿರುವ ಹುಳುಗಳು ಹಣ್ಣಾಗುತ್ತಿವೆ. ನಾವು ಮೇಕೆಗೆ ಸೊಪ್ಪುಗಳನ್ನು ಹಾಕುವ ರೀತಿ ಕತ್ತರಿಸಿ ಅದರ ಕೊಂಬೆಗಳಿಂದ ಸುರಿಯುತ್ತಿರುವ ನೀರಿನ ಸಮೇತ ಹುಳುಗಳಿಗೆ ಹಾಕುತ್ತಿರುವುದನ್ನು ನಾನು ನೋಡಿದೆ. ಜಪಾನ್‌ನಲ್ಲಿ ನಾನು ಭೇಟಿ ಮಾಡಿದ ಬೆಳೆಗಾರರಲ್ಲಿ

ಶ್ರೀ ಕಾಥೋ ಅತ್ಯಂತ ದೊಡ್ಡ ಬೆಳೆಗಾರರು. ನಮ್ಮ ರಾಜ್ಯದ ಕೆಲವು ಅಧಿಕಾರಿಗಳು ಜಪಾನಿಗೆ ತರಬೇತಿಗಾಗಿ ಹೋಗಿದ್ದ ಸಮಯದಲ್ಲಿ ಈತನ ಮನೆಯಲ್ಲಿ ಸ್ವಲ್ಪ ದಿನ ತಂಗಿದ್ದರೆಂದು ತಿಳಿದುಬಂತು. ಈ ಬೆಳೆಗಾರ ಅತ್ಯಂತ ಸಂತೋಷದಿಂದ ಆ ಅಧಿಕಾರಿಗಳ ಭಾವಚಿತ್ರ ಮತ್ತು ಅವರು ಬರೆದಿರುವ ಪತ್ರಗಳನ್ನು ನನಗೆ ತೋರಿಸಿದರು.

ಯಮಗತಾ ಈ ರಾಷ್ಟ್ರದ ಸುಮಾರು ಶೇಕಡಾ ೯೦ರಷ್ಟು "ಚೆರಿ" ಹಣ್ಣು ಬೆಳೆಯುವ ಪ್ರದೇಶ. ಎಲ್ಲಿ ಹೋದರೂ ಆಗ ತಾನೇ ಗಿಡದಿಂದ ಕಿತ್ತು ತಂದಿರುವ ತಾಜಾ ಹಣ್ಣುಗಳನ್ನು ಕೊಡುತ್ತಾರೆ. ಇಷ್ಟೆಲ್ಲಾ ಕಾರ್ಯಕ್ರಮಗಳನ್ನು ಮುಗಿಸಿಕೊಂಡು 'ಸುರಾಕಾ' ಪಟ್ಟಣದ "ದಾಯಿ-ಇಚಿ" ಹೋಟೆಲಿನಲ್ಲಿ ತಂಗಣೆ. ಆ ದಿನ ಬಟ್ಟೆ ಕಾರ್ಖಾನೆಯ ಅಧ್ಯಕ್ಷರಾದ ಮತ್ತು ಶ್ರೀ ತನಾಕಾರವರ ಗೆಳೆಯರಾದ ಶ್ರೀ ಯಮನಕಾರ ಜೊತೆ ರಾತ್ರಿ ಊಟಕ್ಕೆ ನಮ್ಮ ಜೊತೆಗೆ ಜಪಾನಿನ ಇಂಗ್ಲಿಷ್ ಟೀಚರ್ ಯಮಗುಚಿ ಮತ್ತು ಅವರ ಪತ್ನಿ ಕೂಡಿಕೊಂಡರು. ಈ ಉಪಾಧ್ಯಾಯ ದಂಪತಿಗಳು ನನಗೆ ನಮ್ಮ ರಾಜ್ಯದಿಂದ ತರಬೇತಿಗೆ ಹೋಗಿದ್ದ ಅಧಿಕಾರಿಗಳ ತಂಡವೊಂದರ ಮೇಲ್ವಿಚಾರಣೆಯನ್ನು ಈ ದಂಪತಿಗಳು ವಹಿಸಿಕೊಂಡಿದ್ದರೆಂದು ತಿಳಿಸಿದರು. ಆ ಹೆಣ್ಣು ಮಗಳು ನಕ್ಕು ಹೇಳಿದರು. "ನಿಮ್ಮ ಅಧಿಕಾರಿಗಳಿಗೆ ಹೋಮ್ ಸಿಕ್‌ನೆಸ್ ಬಂದಾಗಲೆಲ್ಲಾ ನಾನು ಇವರೊಡನೆ ಇದ್ದು ಅದನ್ನು ತೊಲಗಿಸಲು ಪ್ರಯತ್ನಿಸುತ್ತಿದ್ದೆ" ಎಂದು. ಈ ದಿನದ ಊಟಕ್ಕೆ ಅಮೆರಿಕಾದಿಂದ ಸುರಾಕಾ ಸಿಟಿ ಆಡಳಿತದವರು ಮಕ್ಕಳಿಗೆ ಇಂಗ್ಲಿಷ್ ಕಲಿಸಲು ಆಹ್ವಾನಿಸಿರುವ ಇಂಗ್ಲಿಷ್ ಉಪಾಧ್ಯಾಯರಾದ "ಧನ್" ರವರು ನಮ್ಮ ಜೊತೆ ಸೇರಿಕೊಂಡರು. ಒಬ್ಬ ಭಾರತೀಯ, ಒಬ್ಬ ಅಮೆರಿಕಾದ ಪ್ರಜೆ, ಅನೇಕ ಜನ ಜಪಾನೀ ಪ್ರಜೆಗಳ, ಈ ಔತಣಕೂಟದಲ್ಲಿ ಸುಮಾರು ಸಮಯಗಳ ಕಾಲ ಅನೇಕ ವಿಷಯಗಳ ಬಗ್ಗೆ ಗಂಭೀರವಾದ ಮತ್ತು ಖುಷಿ ಕೊಡುವ ವಿಷಯಗಳ ಬಗ್ಗೆ ಚರ್ಚೆ ನಡೆದು ವಾಪಸ್ ರೂಮಿಗೆ ಬಂದೆ. ಕೊಠಡಿಯಲ್ಲಿ ದೂರದರ್ಶನ ಚಾಲನೆ ಮಾಡಿದಾಗ ಮೊಟ್ಟ ಮೊದಲ ಬಾರಿಗೆ ಜಪಾನ್‌ನಲ್ಲಿ ಟಿ.ವಿ. ಪರದೆಯ ಮೇಲೆ ಹೊಲಸು ನೋಟಗಳನ್ನು ನೋಡಿ. ಟಿ.ವಿ. ಚಾಲನೆಯನ್ನು ನಿಲ್ಲಿಸಿ ಮಲಗಿದೆ. ಬೆಳಗ್ಗೆಯಿಂದ ಪ್ರಯಾಣ ಮಾಡಿದ 'ಮಂಘಾಯಿ' ನದಿಯ ದಡದಲ್ಲಿ ಕಂಡ "ಸೀಡ" ಮರಗಳ ವನಸಿರಿಯ ತಾಂಡವವೊಂದು ಕಡೆ, ಗಂಭೀರವಾಗಿ ಹರಿಯುತ್ತಿರುವ ಮಂಘಾಯಿ, ನದಿಯ ಸುಂದರ ದೃಶ್ಯ ಮತ್ತೊಂದು ಕಡೆ ಮನಸ್ಸು ತುಂಬಿತು. ಇಡೀ ನದಿಯ ಪಾತ್ರವನ್ನು ಟರ್ಫ್ ಮಾಡಿದ್ದಾರೆ. (ಹುಲ್ಲು ಹಾಯಿಸಿದ್ದಾರೆ) ಆ ನದಿಗೆ ಕಟ್ಟಿರುವ ಸೇತುವೆ ಹಸಿರು ಕಣಿವೆಯ ಮಧ್ಯದಲ್ಲಿ ಎರಡು ಬೆಟ್ಟಗಳಿಗೂ ಕಟ್ಟಿರುವ ಒಂದು ಹಗ್ಗದಂತೆ ಕಾಣುತ್ತದೆ. ಈ ಸೇತುವೆಯ ಮೇಲೆ ಹೋದುಹೋಗುವ ರೈಲು- ಈ ಸುಂದರ ದೃಶ್ಯವನ್ನು ಸೆರೆಹಿಡಿಯಲು ಉತ್ಸುಕನಾಗಿ ಛಾಯಾಚಿತ್ರ ತೆಗೆದೆ. ಈ ಪ್ರದೇಶದಲ್ಲಿ ನಾನು ಪ್ರವಾಸ ಮಾಡುವಾಗ ನಿರ್ಮಿಸಿರುವ ರಸ್ತೆಗಳನ್ನು, ಸೇತುವೆಗಳನ್ನು ಕಂಡಾಗ ಜಪಾನ್‌ನ ಶಿಲ್ಪಿಗಳ ಚಾತುರ್ಯದ ಅರಿವಾಯ್ತು. ನನ್ನ ಜಪಾನ್ ಪ್ರವಾಸದಲ್ಲಿ ಕಂಡ ಅತ್ಯಂತ ಸುಂದರ ಸ್ವಾಭಾವಿಕ ಸ್ಥಳವೆಂದರೆ ಈ ಪ್ರದೇಶ. ಈ ಪ್ರದೇಶದಲ್ಲಿ ಬದುಕುವ ಜನ ಎಷ್ಟೊಂದು ಭಾಗ್ಯಶಾಲಿಗಳು ಎನ್ನಿಸಿತು.

ನಿದ್ದೆ ಬರುತ್ತಿದ್ದರೂ ಮಂಘಾಯಿ ನದಿಯ ಪಾತ್ರದಲ್ಲಿ ಹಾದು ಬರುವಾಗ ಒಂದು ಕಡೆ ಬೆಟ್ಟದ ಪಕ್ಕದಲ್ಲಿ ರಸ್ತೆಗೆ ಹೊಂದಿಕೊಂಡಂತೆ ಒಂದು ಕಡೆ ಹೂವು ಇಟ್ಟು ಪೂಜಿಸಿರುವ ಒಂದು ದೃಶ್ಯವನ್ನು ನೋಡಿ, ಅದರ ಬಗ್ಗೆ ವಿಚಾರಿಸಿದಾಗ ಹಿರಿಯರಾದ ಶ್ರೀ ತನಾಕಾರವರು ಅದರ ಹಿನ್ನೆಲೆಯ ಕಥೆಯನ್ನು ಹೇಳಿದ್ದು ಮತ್ತೊಮ್ಮೆ ನನ್ನ ಮನಃ ಪಟಲದ ಮೇಲೆ ಹಾದುಹೋಯಿತು. ಮಂಘಾಯಿ ನದಿಯ ಎಡಕ್ಕೆ ರಸ್ತೆ ಬಲಗಡೆ ಸಣ್ಣದಾದ ಹಳ್ಳಿಯಿದೆ. ಆ ಹಳ್ಳಿಯ ಮಕ್ಕಳು ದಿನನಿತ್ಯವೂ ದೋಣಿಗಳ ಮುಖಾಂತರ ಪ್ರಯಾಣ ಮಾಡಿ ಶಾಲೆಗಳಿಗೆ ಬರಬೇಕು. ಅಂತಹ ಒಂದು ದಿನದಲ್ಲಿ ೫ ಶಾಲಾ ಮಕ್ಕಳು, ದೋಣಿ ಮಗುಚಿಕೊಂಡು ಮುಳುಗುವಾಗ ತನ್ನ ಪ್ರಾಣ ತೆತ್ತು ಆ ಮಕ್ಕಳನ್ನು ರಕ್ಷಿಸಿದ ಶಿಕ್ಷಕನಿಗಾಗಿ ನಿರ್ಮಿಸಿರುವ ಪುಟ್ಟ ಸ್ಮಾರಕ ಇದು. ಈ ಶಾಲೆಗೆ ಹೋಗುವ ಈ ಊರಿನ ಮಕ್ಕಳು ನಿತ್ಯವೂ ಹೂವು ಇಟ್ಟು ಪೂಜಿಸಿ ನಮಸ್ಕರಿಸುವ ಪದ್ಧತಿ ಇಂದಿಗೂ ನಡೆದುಬಂದಿದೆ. ಯಾಕೋ, ಏನೋ ಈ ದಿನ ಎಂದೂ ಇಲ್ಲದ ಮನಸ್ಸಿನ ಡೋಲಾಯಮಾನ - ಜಪಾನಿನ ಪ್ರವಾಸಕ್ಕಾಗಿ ನಾನು ತೆತ್ತ ಬೆಲೆ ಮಂತ್ರಿ ಪದವಿ! ಸುತ್ತಲೂ ಸಿಗರೇಟು ಸೇದುವ ಜನ, ಚಳಿಯಾದ ವಾತಾವರಣ, ವರ್ಣರಂಜಿತ ದೃಶ್ಯಗಳು, ನಾವು ಮಜ್ಜಿಗೆ ಕುಡಿಯುವಂತೆ ಜಪಾನೀಯರು ಸೇರಿಸುವ "ರೈಸ್ ವೈನ್‌ನ" ಸೇವನೆ - ಓಹ್ ನನಗೂ ಸಿಗರೇಟ್ ಸೇದುವ ಹಂಬಲ, ಆದರೆ ಇಸೋಬೆ ಒಪ್ಪುವುದಿಲ್ಲ. ಸಿಗರೇಟ್ ಮುಟ್ಟಿದರೆ ದೈನ್ಯರಾಗಿ ಬೇಡವೆಂದು ಕೈ ಮುಗಿಯುತ್ತಾರೆ. ನನಗನಿಸಿತು ಈ ಪ್ರವಾಸ ಮುಗಿದ ಮೇಲೆಯಾದರೂ ಸಿಗರೇಟ್ ಸೇದುವುದನ್ನು ಬಿಡಬಹುದೆಂದುಕೊಂಡೆ. ಸುಮಾರು ೨೬ ವರ್ಷಗಳಿಂದ ನನಗೆ ಅಂಟಿಕೊಂಡಿದ್ದ ಈ ಸಿಗರೇಟು ಸೇದುವ ಚಟವನ್ನು ನಿರೀಕ್ಷಿತವಾಗಿ ನಾನು ಪ್ರವಾಸಕ್ಕೆ ಹೊರಟಿದ್ದ ೪ ತಿಂಗಳ ಮುಂಚೆಯಷ್ಟೆ ಬಿಟ್ಟಿದ್ದೆ. ದಾರಿಯಲ್ಲಿ ಬರುವಾಗ 'ಮಚುಮಾಯ' ಪಟ್ಟಣದಲ್ಲಿ 'ಮಶುಹೋಕ' (Mashuhoka) ದಾರ ಬಿಚ್ಚುವ ಕೋ- ಆಪರೇಟ್ ಫಿಲೇಚರ್‌ನ್ನು ನೋಡಿದೆ. ಅಲ್ಲಿಯ ವ್ಯವಸ್ಥೆಯನ್ನು ಕಂಡಾಗ ಈ ಜನರು ಎಷ್ಟು ವಿಚಿತ್ರ ನಡವಳಿಕೆಯವರು ಎನ್ನಿಸಿತು. ಮುಚುಯಾಮದಿಂದ "ಷೋನಾಯ್" (Shonoy) "ಪ್ಲೈನ್‌ಲ್ಯಾಂಡ್" (Plainland) ಮುಖಾಂತರ ಬತ್ತದ ಗದ್ದೆಗಳ ಮಧ್ಯದಲ್ಲಿ ಪ್ರಯಾಣ ಮಾಡಿ ಗೆಳೆಯ ಶ್ರೀ ತನಾಕಾರವರ ಮನೆ ತಲುಪಿದೆವು. 'ಓನಾಯ್' ಇಡೀ ಜಪಾನ್‌ನಲ್ಲಿಯೇ ಅತ್ಯಂತ ದೊಡ್ಡದಾದ ಬತ್ತ ಬೆಳೆಯಲು ಅನುಕೂಲವಾದ "ಪ್ಲೈನ್ ಲ್ಯಾಂಡ್". ನಾಟಿಯಾಗಿದೆ, ಬೆಳೆ ಇನ್ನೂ ವಡೆಗೆ ಬಂದಿಲ್ಲ. ಕಣ್ಣು ಕಾಣುವವರೆಗೂ ಕಾಣುವ ಗದ್ದೆಗಳು. ಈ ಪ್ರದೇಶದ ಅಕ್ಕಿ ಜಪಾನಿನಲ್ಲಿಯೇ ಪ್ರಸಿದ್ಧಿಯಂತೆ. ಈ ದೇಶಕ್ಕೆ ಭೇಟಿ ಕೊಡಬೇಕೆಂದು ನನ್ನನ್ನು ಒತ್ತಾಯಪೂರ್ವಕವಾಗಿ ಆಹ್ವಾನಿಸಿ ಆದರಿಸಿ ಕಳುಹಿಸಿದ ಹಿರಿಯ ಗೆಳೆಯರಾದ ಶ್ರೀ ತನಾಕಾರವರ ಮನೆ ಕೂಡಾ ಸುತ್ತಲೂ ಬೆಟ್ಟದಿಂದ ಕೂಡಿರುವ ಸಮಗಾಡು ಪ್ರದೇಶದ ಈ "ಷೋನಾಯ್" ನಲ್ಲಿದೆ.

ಇಡೀ ಜಪಾನಿನ ಪ್ರವಾಸದ ಸಮಯದಲ್ಲಿ ನಾನು ನೋಡಿದ ಎಲ್ಲಾ ಗದ್ದೆಗಳಲ್ಲಿಯೂ ಬತ್ತದ ಬೆಳೆ ಒಂದೇ ಹಂತದಲ್ಲಿದೆ. ಗದ್ದೆಗಳ ಮಧ್ಯದಲ್ಲಿ ಸ್ವಚ್ಛವಾದ ಟಾರು ರಸ್ತೆಗಳು,

ಹೆಚ್ಚಾದ ನೀರು ಇಂಗಿಹೋಗಲು ಸುವ್ಯವಸ್ಥಿತವಾದ ಕಾಲುವೆಗಳು. ಈ ರಸ್ತೆಗಳ ಮೇಲೆ ವಾಹನಗಳನ್ನು ನಿಲ್ಲಿಸಿ ತಲೆಗೆ ಟೊಪ್ಪಿಗೆಯನ್ನು ಧರಿಸಿ ಗದ್ದೆಯಲ್ಲಿ ಕೆಲಸ ಮಾಡುವ ರೈತನನ್ನು ಇಲ್ಲಿ ಕಾಣಬಹುದು. ಜಪಾನಿನ ಜನ ತರಕಾರಿಯನ್ನು ಬೆಳೆಯುವ ವೈಖರಿಯನ್ನು ನಾವು ನೋಡಬೇಕು. ಎಷ್ಟೊಂದು ವಿಧವಾದ ಹಣ್ಣುಗಳು, ಎಷ್ಟೊಂದು ಬಗೆಯ ತರಕಾರಿಗಳು. ಬಹುಶಃ ಜಪಾನೀಯರ ದೀರ್ಘ ಬಾಳ್ವೆಗೆ ಕಾರಣ ಅವರ ಆಹಾರ ಪದ್ಧತಿ. ಊಟದಲ್ಲಿ ಕಾರ ಮತ್ತು ಎಣ್ಣೆ ಇರುವುದಿಲ್ಲ. ಸಮುದ್ರದ ಎಲ್ಲಾ ಹುಳುಗಳನ್ನು, ಗಿಡದ ಎಲ್ಲಾ ಬೇರುಗಳನ್ನು ತಿನ್ನುತ್ತಾರೆ. ಹಸಿಮೀನು ತಿನ್ನುವುದು ಸಾಮಾನ್ಯ ಪದ್ಧತಿ. ಈ ಜನರು ರಾಷ್ಟ್ರವನ್ನು ಕಟ್ಟಿದ್ದಾರೆ. ಬೆಟ್ಟದಿಂದ ಚಳಿಗಾಲದಲ್ಲಿ ಬರುವ ಮಂಜನ್ನು ತಡೆಯಲು ರಸ್ತೆಯ ಉತ್ತರ ಭಾಗಕ್ಕೆ "ಷಟರ್ಸ್" ಹಾಕಿದ್ದಾರೆ. ಈ ಪ್ರದೇಶದಲ್ಲಿ ಚಳಿಗಾಲದಲ್ಲಿ ಅತ್ಯಂತ ಚಳಿಯಿರುತ್ತದೆಯಂತೆ. ಸುರಾಕಾ ಪಟ್ಟಣ "ಓನಾಯ್" ಪ್ರದೇಶದಲ್ಲಿರುವ ಒಂದು ನಗರ. ಜಪಾನಿನಲ್ಲಿಯೂ ದೇವಸ್ಥಾನಗಳಿವೆ, ದೇವರುಗಳಿವೆ. ಇಲ್ಲಿಯೂ ಹೆಂಚಿನ ಮನೆಗಳಿವೆ. ಅದರಲ್ಲೂ ಕರೀ ಹೆಂಚಿನ ಮನೆಗಳನ್ನು ಕಾಣಬಹುದು. "ಸಿಂಥೋ" ಜಪಾನಿನ ಜನರು ಪೂಜಿಸುವ ಗದ್ದುಗೆ (shrines) ಇಂತಹ ಗದ್ದುಗೆಗಳನ್ನು ಎಲ್ಲಾ ಕಡೆಯಲ್ಲಿಯೂ ಕಾಣಬಹುದು. ಬಾಗಿಲಿನಲ್ಲಿ ಆ ಕಡೆ ಈ ಕಡೆ ಎರಡು ಎತ್ತರವಾದ ಮರ ಅಥವಾ ದಿಂಡಿನ ಮೇಲೆ ಅಡ್ಡಲಾಗಿ ಒಂದು ಮರ ಅಥವಾ ದಿಂಡನ್ನು ಮಾಡಿರುವ ಚಿಹ್ನೆ. ಇದು "ಸಿಂಥೋ" ಎಂದು ಸಾರುತ್ತಾರೆ. ಇಲ್ಲಿಯ ಜನ ಸಿಂಥೋ ಗದ್ದುಗೆಯನ್ನು ಮತ್ತು ದೇವಾಲಯದಲ್ಲಿ ಬುದ್ಧನನ್ನು ಪೂಜಿಸುತ್ತಾರೆ. ನಾನು ಈಗಾಗಲೇ ತಿಳಿಸಿದ್ದೇನೆ. ಸುರಾಕಾ ಪಟ್ಟಣ ಪ್ರಮುಖವಾದ ಪಟ್ಟಣ. ಒಂದು ಕಾಲದಲ್ಲಿ ಮಹಾರಾಜರ ಆಳ್ವಿಕೆಯಲ್ಲಿದ್ದಂಥ ಊರು. ಈಗಲೂ ಅರಮನೆಯಿದೆ. ಅವಶೇಷಗಳಿವೆ. ರಾಜ ಎಲ್ಲವನ್ನೂ ಸರ್ಕಾರಕ್ಕೆ ಕೊಟ್ಟಿದ್ದಾನೆ. ಅಂದಿನ ಅರಮನೆ ಇಂದಿನ ಸಂಗ್ರಹಾಲಯ ಮತ್ತು ವಾಚನಾಲಯವಾಗಿದೆ. ಈ ರಾಜವಂಶದ ಬಗ್ಗೆ ನಾನು ಚರ್ಚೆ ಮಾಡಿದ ಮೇಲೆ ಸ್ವಲ್ಪಮಟ್ಟಿಗೆ ನಮ್ಮ ಮೈಸೂರು ಮಹಾರಾಜರ ಮನೆತನದ ಹೋಲಿಕೆಗಳನ್ನು ಗಮನಿಸಿದೆ. ಈಗ ಈ ರಾಜಮನೆತನಕ್ಕೆ ಸೇರಿದವರು ಜನಸಾಮಾನ್ಯರಂತೆ ಜೀವಿಸುತ್ತಾ ಒಂದು ಮಾಥುಕಾ (MATHUKA) ವೀವಿಂಗ್ ಫ್ಯಾಕ್ಟರಿಯನ್ನು ನಡೆಸುತ್ತಾ ಇದ್ದಾರೆ, ಅವರೇ ಇದಕ್ಕೆ ಅಧ್ಯಕ್ಷರು. ಶ್ರೀ ತನಾಕಾರವರ ಧರ್ಮಪತ್ನಿ ನಾನು ಅವರ ಮನೆಗೆ ಹೋದಾಗ ಸ್ವಾಗತಿಸಿದ ವಿಚಿತ್ರ ರೀತಿ ಕೂಡ ನನ್ನ ಮುಂದೆ ಹಾದುಹೋಯಿತು. ಅತಿಥಿಗಳು ಬಾಗಿಲಿಗೆ ಬರುತ್ತಿದ್ದಂತೆ ನೆಲದ ಮೇಲೆ ಕುಳಿತು, ಮಂಡಿಯನ್ನು ನೆಲಕ್ಕೆ ಊರಿ, ತಲೆಯನ್ನು ಸಂಪೂರ್ಣವಾಗಿ ಭೂಮಿಗೆ ಮುಟ್ಟಿಸಿ ಸ್ವಾಗತಿಸುವ ಸಾಂಪ್ರದಾಯಿಕ ರೀತಿ ಮೊದಲಿಗೆ ನಾನು ಈ ಗೃಹಿಣಿಯಲ್ಲಿ ನೋಡಿದೆ. ಇವರ ಒಬ್ಬನೇ ಮಗ ನಮ್ಮೊಡನೆ ಊಟಕ್ಕೆ ಕುಳಿತರು. ಈ ಗೃಹಿಣಿ ತಯಾರಿಸಿದ 'ಸೂಪ್' ನನಗೆ ತುಂಬಾ ಹಿಡಿಸಿ ಮತ್ತೊಂದು ಸಾರಿ ಅದನ್ನು ತರಿಸಿಕೊಂಡು ಊಟ ಮಾಡಿದೆ. ಪುಷ್ಕಳವಾದ ಊಟ, ಹೃದಯ ತುಂಬಿದ ಸನ್ನಿವೇಶ, ಊಟ ಮುಗಿಸಿ ಎಲ್ಲರೂ ಒಟ್ಟಿಗೆ ಚಿತ್ರ ತೆಗೆಸಿಕೊಂಡು ಅವರ ಮನೆಯನ್ನು ಬಿಟ್ಟು ಬರುವಾಗ ಏನೋ ಒಂದು ವಿಧವಾದ ಮಾನಸಿಕ ಗಲಿಬಿಲಿ. ಜಪಾನಿನ ಅನೇಕ ಕಿರಿಯರಿಗೆ ಇಂಗ್ಲಿಷ್

ಕಲಿಸುತ್ತಿದ್ದಾರೆ. ತನಾಕಾರವರ ಮಗನೂ ಸಹ ಸ್ವಲ್ಪಮಟ್ಟಿಗೆ ಇಂಗ್ಲಿಷ್ ಅನ್ನು ಅರ್ಥಮಾಡಿಕೊಳ್ಳುವ ಸ್ಥಿತಿಯಲ್ಲಿದ್ದಾನೆ. ಮುಂದಿನ ದಿನದ ಕಾರ್ಯಕ್ರಮವನ್ನು ಯೋಚನೆ ಮಾಡುತ್ತಿದ್ದಂತೆ ಮಲಗಿ ನಿದ್ದೆ ಹೋದೆ.

**ಆಧುನಿಕತೆ - ಜನಜೀವನ**

ತಾ. ೫ ರಂದು ಸುರಾಕಾ ನಗರದಿಂದ ಟೋಕಿಯೋಗೆ ಥೋಹೋಕ್ ಹೆದ್ದಾರಿ ಮುಖಾಂತರ ಪ್ರಯಾಣ. ಬರುವ ದಾರಿಯಲ್ಲಿ 'ಜಾವೋ' ಬೆಟ್ಟಗಳ ಪ್ರದೇಶ ಸಿಗುತ್ತದೆ. ಸುರಾಕಾದಿಂದ ಟೋಕಿಯೋಗೆ ೬೦೦ ಕಿ. ಮೀ. ಗಳಷ್ಟು ದೂರವಿದೆ. ಜಾವೋ ಅಗ್ನಿಪರ್ವತಕ್ಕೆ (Zavo Volcano) ಭೇಟಿ, ರೋಪ್‌ವೇ ಮುಖಾಂತರ ಈ ಅಗ್ನಿಪರ್ವತವನ್ನು ತಲುಪಿ ಅಲ್ಲಿಯೇ ಊಟ ಮಾಡಿ ಹೊರಟೆವು. ಈ ನನ್ನ ಜಪಾನ್ ಪ್ರವಾಸದ ಸಮಯದಲ್ಲಿ ಅಷ್ಟೊಂದು ವಾಹನಗಳ ಸಂಚಾರವಿದ್ದರೂ ಎಲ್ಲಿಯೂ ಕೆಟ್ಟು ನಿಂತಿರುವ ಅಥವಾ ಅಪಘಾತಕ್ಕೆ ಒಳಗಾಗಿರುವ ಒಂದು ವಾಹನವನ್ನೂ ನಾನು ಕಾಣಲಿಲ್ಲ. ಇದರಿಂದ ಈ ದೇಶದ ವಾಹನ ಸಂಚಾರ ವ್ಯವಸ್ಥೆ ಎಷ್ಟೊಂದು ಪರಿಪೂರ್ಣವಾದುದು ಮತ್ತು ಶಿಸ್ತಿನಿಂದ ಕೂಡಿದ್ದು ಎಂದು ತಿಳಿದುಕೊಳ್ಳಬಹುದು. ಈ ಹೆದ್ದಾರಿಯಲ್ಲಿ ಸಿಗುವ ಒಂದು ಪಟ್ಟಣದಲ್ಲಿ ವಾಹನವನ್ನು ನಾವು ನಿಲ್ಲಿಸಿದ್ದಕ್ಕೆ ಅನಿರೀಕ್ಷಿತವಾಗಿ ಚರಂಡಿಯಲ್ಲಿ ಹರಿಯುವ ನೀರಿನ ಕಡೆ ನನ್ನ ಗಮನ ಹರಿಯಿತು. ಆ ನೀರು ಕುಡಿಯುವ ನೀರಿನಷ್ಟೇ ಸ್ವಚ್ಛವಾಗಿತ್ತು. ಕಾರಣ ಇಲ್ಲಿಯ ಜನ ಯಾವುದೇ ವಿಧವಾದ ಕಸವನ್ನು ಸಿಕ್ಕಿದ್ದಲ್ಲಿ ಹಾಕುವ ಪ್ರವೃತ್ತಿಯಿಲ್ಲ. ವ್ಯವಸ್ಥಿತವಾದ ಸ್ಥಳದಲ್ಲಿ ಅದನ್ನು ಕೂಡಿ ಇಡುವ ಅವರ ನಡತೆ ಈ ಸ್ವಚ್ಛತೆಯನ್ನು ಕಾಪಾಡಿಕೊಳ್ಳಲು ಸಾಧ್ಯವಾಯಿತು ಎನ್ನಿಸುತ್ತದೆ. ಈ ಹೆದ್ದಾರಿಯಲ್ಲಿ ನಾವು ಪ್ರಯಾಣ ಮಾಡುವಾಗ ಮಿತಿ ಮೀರಿದ ವೇಗವಾಗಿ ವಾಹನವನ್ನು ಓಡಿಸಿದ್ದಕ್ಕೆ ಪೊಲೀಸಿನವರು ನಮ್ಮ ವಾಹನವನ್ನು ತಡೆಹಿಡಿದರು. ವಾಹನಗಳ ವೇಗವನ್ನು ದಾಖಲಾತಿ ಮಾಡಿಕೊಳ್ಳಲು ಅನೇಕ ನವಿರಾದ ಉಪಕರಣಗಳನ್ನು ಇಲ್ಲಿ ಅಳವಡಿಸಿದ್ದಾರೆ.

ಹೆದ್ದಾರಿಯ ಪಕ್ಕದಲ್ಲಿ ಒಂದು ಕಚೇರಿಯಲ್ಲಿ ಪೊಲೀಸಿನವರು ಮಿತಿ ಮೀರಿದ ವೇಗಕ್ಕಾಗಿ ೧೦, ೦೦೦ ಯೆನ್ ಅಂದರೆ ಸುಮಾರು ೫೦೦-೦೦ ರೂಪಾಯಿಗಳನ್ನು ದಂಡವಾಗಿ ವಿಧಿಸಿದರು. ಈ ದೇಶದಲ್ಲಿ ಅತಿಯಾದ ವೇಗದಿಂದ ವಾಹನವನ್ನು ನಡೆಸಿದರೆ, ಕುಡಿದು ಮತ್ತರಾಗಿರುವಾಗ ವಾಹನವನ್ನು ನಡೆಸಿದರೆ ಮತ್ತು ಇತರೇ ಅಪರಾಧಗಳಿಗಾಗಿ ಇಂತಿಷ್ಟೇ ಅಂಕಿಗಳಿದ್ದ ಅವರ ಡ್ರೈವಿಂಗ್ ಲೈಸೆನ್ಸ್‌ನಲ್ಲಿ ನಮೂದಿಸಲಾಗುವುದು. ನಿರ್ದಿಷ್ಟ ಅಂಕಿಗಳಿಗಿಂತ ಹೆಚ್ಚಾದಾಗ ಚಾಲಕನಿಗೆ ಕೊಡುವ ಶಿಕ್ಷೆಯೆಂದರೆ ಅರ್ಧ ದಿನ ಅವರಿಗೆ ವಾಹನ ಕಾನೂನುಗಳ ಬಗ್ಗೆ ಉಪನ್ಯಾಸ. ಪ್ರಯಾಣ ಮಾಡುವಾಗ ದಾರಿಯಲ್ಲಿ ಯಾವ ಪ್ರಾಣಿಗಳೂ ರಸ್ತೆಯ ಮೇಲೆ ಕಾಣುವುದಿಲ್ಲ. ಈ ದೇಶದಲ್ಲಿ ಎಮ್ಮೆಗಳಿಲ್ಲ. ಹಸುಗಳಿವೆ. ದನ, ಹಂದಿ, ಕುದುರೆ, ಕೋಳಿ, ಮೀನು, ಕಪ್ಪೆ ತಿನ್ನುತ್ತಾರೆ. ಕುರಿಗಳಿಲ್ಲ, ಸಾಕಷ್ಟು ಮೇಕೆಗಳಿವೆ ಹಾಲಿಗೆ ಮಾತ್ರ. ಮೇಕೆಗಳನ್ನು ತಿನ್ನುವುದಿಲ್ಲ. ಈ ದೇಶದಲ್ಲಿ ಕುದುರೆಗಳಿಂದ ಉತ್ತು

ಬೇಸಾಯ ಮಾಡುತ್ತಿದ್ದ ಕಾಲವೊಂದಿತ್ತು. ಸುಮಾರು ನೂರು ವರ್ಷಗಳ ಹಿಂದೆ ಕೇವಲ ಮೀನು ಮತ್ತು ತರಕಾರಿ ಮಾತ್ರ ಅವರ ಆಹಾರವಾಗಿತ್ತು. ಆದರೆ ಪಾಶ್ಚಿಮಾತ್ಯ ಸಂಸ್ಕೃತಿ ಜಪಾನ್ ಜನತೆಯ ಅನೇಕ ಕ್ಷೇತ್ರಗಳಲ್ಲಿ ಬದಲಾವಣೆಯನ್ನು ತಂದಂತೆ ಆಹಾರದಲ್ಲಿಯೂ ಬದಲಾವಣೆಯನ್ನು ತಂದಿತು. ಈ ದೇಶದಲ್ಲಿ ಮೊಲ, ನರಿ, ಕರಡಿ, ತೋಳ ಮುಂತಾದ ಕಾಡು ಪ್ರಾಣಿಗಳಿವೆ. ಈ ಎಲ್ಲಾ ಪ್ರಾಣಿಗಳನ್ನು ಅವರು ತಿನ್ನುತ್ತಾರೆ. ಹಂದಿಯ ಮಾಂಸ ಬಹಳ ವಿಶೇಷವಾದ ಆಹಾರವಾಗಿದೆ. ದಾರಿಯಲ್ಲಿ ಬಿಳಿಯ ಹಂದಿಗಳನ್ನು ಸಾಗಿಸುವುದನ್ನು ಎಲ್ಲೆಲ್ಲೂ ಕಾಣಬಹುದು. ನನ್ನ ಪ್ರವಾಸದ ಸಮಯದಲ್ಲಿ ಎಲ್ಲಿಯೂ ವಾಹನಗಳನ್ನು ರಿಪೇರಿ ಮಾಡುವ ಅಂಗಡಿಗಳನ್ನು ಕಾಣಲಿಲ್ಲ. ಈ ಜನ ಹೇಳುತ್ತಾರೆ. ಇಲ್ಲಿ ಯಾವುದನ್ನೂ ರಿಪೇರಿ ಮಾಡುವುದಿಲ್ಲವೆಂದು. ಕಾರಣ ಅದರ ವೆಚ್ಚ ಹೆಚ್ಚಾಗುತ್ತಿದೆ. ಸಾಮಾನ್ಯವಾಗಿ ವಾಹನಗಳು ೫ ವರ್ಷಗಳ ಕಾಲ ಯಾವುದೇ ವಿಧವಾದ ತೊಂದರೆಯನ್ನು ಕೊಡುವುದಿಲ್ಲ. ೫ ವರ್ಷಗಳಾದ ಮೇಲೆ ಈ ವಾಹನಗಳನ್ನು ಗುಜರಿಗೆ ಕಳುಹಿಸುತ್ತಾರೆ. ನಾವು 'ಘಾಸಾನ್' ಬೆಟ್ಟಗಳ ನಡುವೆ ಪ್ರಯಾಣ ಮಾಡುವಾಗ ಸುಮಾರು ೩ ಕಿ.ಮೀ. ದೂರದ ಸುರಂಗದಲ್ಲಿ ಹಾದುಹೋಗಬೇಕಾಗಿದೆ. ಈ ಬೇಸಿಗೆಯಲ್ಲಿಯೂ (೨೪.೫೩) ಬೆಟ್ಟಗಳ ಮಧ್ಯದಲ್ಲಿ ಬೆಳ್ಳನೆಯ ಮಂಜನ್ನು ಕಾಣಬಹುದು. "ಘಾಸಾನ್" ಬೆಟ್ಟಗಳೆಂದರೆ ಮಲಗಿರುವ ಹಸುವಿನ ಆಕಾರದ ಬೆಟ್ಟಗಳು ಎಂದು ಅರ್ಥ (Sleeping cow shaped mountains) ದಾರಿಯಲ್ಲಿ "ಷಾಂಗಾಯ್ ಡ್ಯಾಮಾ" ನ ಕಟ್ಟಡ ಕೆಲಸ ನಡೆಯುತ್ತಿರುವ ಸ್ಥಳ ಸಿಗುತ್ತದೆ. ಕುಡಿಯುವ ನೀರು, ವಿದ್ಯುತ್ ಮತ್ತು ವ್ಯವಸಾಯಕ್ಕೆ ೩ ವರ್ಷಗಳಿಂದ ಈ ಅಣೆಕಟ್ಟನ್ನು ಕಟ್ಟುತ್ತಿದ್ದಾರೆ. ಮುಗಿಯುವ ಹಂತದಲ್ಲಿದೆ. ಎಲ್ಲವೂ ಯಂತ್ರಗಳಿಂದ ನಡೆಯುವ ಕೆಲಸ. ಇಲ್ಲಿ ನೋಡಬೇಕು ಮಾನವ ನಿರ್ಮಿತ ಯಂತ್ರಗಳ ಕಾರ್ಯ ಚತುರತೆಯನ್ನು. ಇಲ್ಲಿ ಒಂದು ಸಣ್ಣ ಯಂತ್ರವನ್ನು ಅಳವಡಿಸಿದ್ದಾರೆ. ಈ ಯಂತ್ರದ ಒಂದು ಗುಂಡಿಯನ್ನು ಒತ್ತಿದರೆ ಈ ಅಣೆಕಟ್ಟಿನ ಸಂಪೂರ್ಣ ಮಾಹಿತಿಯನ್ನು ಈ ಯಂತ್ರ ಬಿತ್ತರಿಸುತ್ತದೆ. ಈ ಯಂತ್ರದಿಂದ ಬಿತ್ತರಿಸಿದ ಮಾಹಿತಿಯನ್ನು ಕೇಳುತ್ತಿದ್ದಂತೆ ನಾನು ಮೂಕನಾದೆ. ವೇದನೆ ಆಯಿತು. ೧೯೭೩ರಿಂದ ಕೇವಲ ಕಾಲುವೆ ಕೆಲಸಗಳನ್ನು ಮಾಡಿಕೊಂಡು ಹೇಮಾವತಿ ಜಲಾಶಯದಿಂದ ತುಮಕೂರು ಜಿಲ್ಲೆಯ ೪ ಲಕ್ಷ ಎಕರೆ ಭೂಮಿಗೆ ನೀರು ಬಿಟ್ಟುಕೊಳ್ಳಲು ಸಾಧ್ಯವಾಗದ ನಮ್ಮ ಸ್ಥಿತಿಗೂ, ಕೇವಲ ಮೂರು ವರ್ಷಗಳಲ್ಲಿ ಇಂತಹ ಬೃಹತ್ ಅಣೆಕಟ್ಟನ್ನು ಕಟ್ಟಿ ಜನರಿಗೆ ಅರ್ಪಿಸಲು ಸಿದ್ಧವಾಗಿರುವುದನ್ನು ಹೋಲಿಸಿ ಇದಕ್ಕಾಗಿ ನಾವು ಪಟ್ಟ ಪಾಡೆಲ್ಲವನ್ನು ಮೆಲುಕು ಹಾಕುತ್ತಾ ಮುಂದೆ ಸಾಗಿದೆವು.

ಇಲ್ಲಿನ ಜನರು ತುಂಬಾ ಆರೋಗ್ಯವಂತರು. ಬಹುಶಃ ಇದಕ್ಕೆ ಕಾರಣ ಅವರ ಆಹಾರ ಪದ್ಧತಿ ಮತ್ತು ಹವಾಮಾನ. ವಿಚಿತ್ರ ಜನ ಇವರು. ಇಡೀ ನನ್ನ ಪ್ರವಾಸ ಕಾಲದಲ್ಲಿ ಕೋಪಗೊಂಡವರನ್ನೇ ನಾನು ಕಾಣಲಿಲ್ಲ. ಇಡೀ ರಾಷ್ಟ್ರದಲ್ಲಿ ಒಂದೇ ಜನಾಂಗ, ಒಂದೇ ಭಾಷೆ. ಒಂದು ಕಾಲದಲ್ಲಿ ಕಷ್ಟಕ್ಕೆ ಸಿಕ್ಕಿದ ಇವರ ಕರ್ತವ್ಯ ಪ್ರಜ್ಞೆ, ರಾಷ್ಟ್ರ ಪ್ರೇಮ, ಎಲ್ಲರೂ ಬದುಕಬೇಕೆಂಬ ಮಾನವೀಯ ಪ್ರವೃತ್ತಿ ಈ ದೇಶದ ಅದ್ಭುತ ಪ್ರಗತಿಗೆ ಕಾರಣವಾಗಿದೆ. ಈ

ದೇಶದ ರಕ್ಷಣಾ ವೆಚ್ಚ ಕೇವಲ ಶೇಕಡಾ ೫ರಷ್ಟು ಮಾತ್ರ. 'ನಮಗೆ ಶತ್ರುಗಳೇ ಇಲ್ಲ' ಎನ್ನುತ್ತಾರೆ ಈ ಜನ. ಇಲ್ಲಿ ಅಜಾಗರೂಕತೆಗೆ ಅವಕಾಶವಿಲ್ಲ. ಹಾಗಾದರೆ ತೆರಬೇಕಾದ ಬೆಲೆ ಅಪಾರ. ಮಣ್ಣು ಸವಕಲಾಗದಂತೆ ಮಾಡಿರುವ ಇವರ ಪರಿಶ್ರಮ ಮೆಚ್ಚುವಂಥಾದ್ದು. ಇವರಿಂದ ಎಲ್ಲೂ ನಾವು ಮಣ್ಣನ್ನು ಕಾಣಲಾಗುವುದಿಲ್ಲ. ಎಲ್ಲೆಲ್ಲೂ ಹಸಿರೋ ಹಸಿರು. ಕುಳ್ಳರಾದ ಈ ಜನಕ್ಕೆ ಎತ್ತರದ ಬಗ್ಗೆ ಬಹು ಆಸಕ್ತಿ. ಟೋಕಿಯೋದಲ್ಲಿನ ಅತಿ ಎತ್ತರದ ೬೮ ಮಹಡಿಯ "ಹಿಸ್ಸಿಹಿಸ್ಸಿ" ಕಟ್ಟಡ ಹಾಗೂ ೩೩೩ ಅಡಿ ಎತ್ತರದ ಟೋಕಿಯೋ ಟವರ್ ಇದಕ್ಕೆ ಉದಾಹರಣೆ.

೧೯೪೧ ರ ಎರಡನೇ ಮಹಾಯುದ್ಧದಲ್ಲಿ ಎಲ್ಲಾ ಮರಗಳನ್ನು ಕಡಿದು ಉಪಯೋಗಿಸಿದ್ದರಿಂದ ಬರಡಾದ ನೆಲವನ್ನು ಮತ್ತೆ ಜನರು ಹಸಿರು ನಾಡಾಗಿ ಮಾಡಿರುವ ಸಾಧನೆ ಮೆಚ್ಚುವಂತಹದ್ದು. ಎರಡನೇ ಮಹಾಯುದ್ಧದಲ್ಲಿ ಎಲ್ಲವನ್ನೂ ಅಂದರೆ ಕಾಡು, ಕೈಗಾರಿಕೆ, ವ್ಯವಸಾಯವನ್ನು ಈ ದೇಶ ಕಳೆದುಕೊಂಡಿತು. ಹಿರೋಶಿಮಾ - ನಾಗಸಾಕಿಯ ಮೇಲೆಸೆದ ಬಾಂಬ್‌ನ , ಸಿಡಿತ ತಂದ ಹಸಿವೆ ರೋಗರುಜಿನಗಳು ಎಲ್ಲೆಲ್ಲೂ ಹತಾಶಭಾವನೆ ತುಂಬಿದವು. ಎಂತಹ ವಿಚಿತ್ರ. ನಾಶ ಮಾಡಿದ ಅಮೆರಿಕಾ ದೇಶ ಮತ್ತೆ ಹಾಳಾದ ಜಪಾನ್‌ನನ್ನು ಕಟ್ಟಲು ಎಲ್ಲಾ ವಿಧದಲ್ಲಿ ಸಹಾಯ ಮಾಡಿತು. ನಾಶ ಮಾಡಿದ ಅಮೆರಿಕಾದವರನ್ನು ಜಪಾನಿಯವರು ಅತೀವವಾಗಿ ಪ್ರೀತಿಸುತ್ತಾರೆ. ಜಪಾನಿನ ಯಂತ್ರ ನಾಗರೀಕತೆಯನ್ನು ಅಮೆರಿಕನ್ನರೇ ಅನುಕರಿಸುವಷ್ಟರ ಮಟ್ಟಿಗೆ ಜಪಾನ್ ಇಂದು ಅದ್ಭುತವನ್ನು ಸಾಧಿಸಿದೆ.

ಜಪಾನ್ ಸಾವಿರಾರು ದ್ವೀಪಗಳುಳ್ಳ ಒಂದು ಸುಂದರ ದೇಶ. ಹೊನ್‌ಷು (Honshu), (Kyushu), ಷಿಕೋಕು(Shikoku), ಮತ್ತು ಹೊಕೈಡೊ (Hokkaido), ದೊಡ್ಡ ದ್ವೀಪಗಳು. ಜಪಾನಿಯವರು ಮೂಲತಃ ಸಂಪ್ರದಾಯಗಳಿಗೆ ಕಟ್ಟುಬಿದ್ದ ಜನರು. ಆದರೆ ಏಳನೆಯ ಶತಮಾನದಿಂದ ಒಂಬತ್ತನೆಯ ಶತಮಾನಗಳಲ್ಲಿ ಆಗಿನ ಕಾಲದಲ್ಲಿ ಪ್ರಪಂಚದಲ್ಲೇ ಮುಂದುವರೆದ ಚೈನಾ ದೇಶದ ಸಕಲ ಶಿಕ್ಷಣಗಳನ್ನು ಅಳವಡಿಸಿಕೊಳ್ಳುವಲ್ಲಿ ಯಶಸ್ವಿಯಾದರು. ಇದರಿಂದ ದೇಶದ ಎಲ್ಲಾ ಭಾಗಗಳನ್ನು ಒಂದುಗೂಡಿಸುವಲ್ಲಿ ಸಾಧ್ಯವಾಯಿತು. ಆದರೂ ಸಹ ಜಪಾನ್ ತನ್ನದೇ ಆದ ಸಂಸ್ಕೃತಿಯನ್ನುಳಿಸಿಕೊಂಡಿತ್ತು. ೧೧೯೨ ರಲ್ಲಿ ರಾಜರ ಆಡಳಿತ ಹೋಗಿ ಶೋಗನ್ ಎಂಬುವರ ಆಡಳಿತ ಬಂತು. ಈ ಶೋಗನ್ ಕಾಲದಲ್ಲಿ ಎಂದರೆ ೧೧೯೨ ರಿಂದ ೧೩೩೩ ಜಪಾನ್ ಹೊರ ದೇಶಗಳ ಸಂಬಂಧದಿಂದ ದೂರವಾಯಿತು. ಆದರೆ ಜಪಾನಿನ ಸಂಸ್ಕೃತಿ ಶೋಗನ್ ಕಾಲದಲ್ಲಿ ತನ್ನದೇ ಆದ ನೆಲೆಯನ್ನು ಕಂಡಿತು. ಚೋಳ ರಾಜ ಮನೆತನದವರಿಗೂ ಮತ್ತು ಶೋಗನ್‌ರಿಗೂ ಒಳ ಜಗಳ ಮತ್ತು ಸಂಚುಗಳಿಂದ ಮತ್ತು ಖುಬ್‌ಲಿ ಖಾನ್ (Khubli khan) ನೇತೃತ್ವದಲ್ಲಿ ಮಂಗೋಲರ ದಾಳಿಗಳಿಂದ ಶೋಗನ್‌ರ ಆಡಳಿತ ಕೊನೆಗೊಂಡು ಪುನಃ ರಾಜರುಗಳ ಆಡಳಿತ ಸ್ಥಾಪಿತವಾಯಿತು.

ಆದಿಯಲ್ಲಿ ಅನಾಗರಿಕತೆಯಿಂದ ಕೂಡಿದ್ದ ಜಪಾನಿಯರಲ್ಲಿ ಬರೆಯುವ ಲಿಪಿ ಇರಲಿಲ್ಲವಾದ್ದರಿಂದ ಯಾವಾಗ ರೇಷ್ಮೆ ವ್ಯವಸಾಯ ಜಪಾನಿಗೆ ಬಂದಿತೆಂದು ಹೇಳಲು

ಸಾಧ್ಯವಿಲ್ಲ. ಬರವಣಿಗೆ ಲಿಪಿಯನ್ನು ಏಳರಿಂದ ಒಂಬತ್ತನೆಯ ಶತಮಾನಗಳಲ್ಲಿ ಚೈನಾ ಲಿಪಿಯಲ್ಲಿ ಜಪಾನ್ ಭಾಷೆಯನ್ನು ಬಹಳಷ್ಟು ಕಷ್ಟಬಿದ್ದು ಬರೆಯಲು ಕಲಿತುಕೊಂಡರು. ಆದರೆ ರೇಷ್ಮೆ ವ್ಯವಸಾಯ ಸುಮಾರು ೨೦೦೦ ವರ್ಷಗಳ ಹಿಂದಕ್ಕೆ ಚೈನಾದಿಂದ ಜಪಾನಿಗೆ ಬಂದಿತೆಂದು ಆಧಾರ ಸಹಿತವಾಗಿ ಹೇಳಬಹುದು. ೧೮೫೩ ರಲ್ಲಿ ಅಮೆರಿಕಾ ಕಮ್ಯಾಂಡರ್ ಪೆರಿ, ಹೊರ ದೇಶಗಳಿಗೆ ಮುಚ್ಚಿದ್ದ ಜಪಾನಿನ ಬಾಗಿಲನ್ನು ತಟ್ಟಿದಾಗ, ಜಪಾನ್ ಹೊರ ದೇಶಗಳ ಸಂಪರ್ಕಕ್ಕೆ ಬಲವಂತವಾಗಿ ಅವಕಾಶ ಕೊಡುವಂತಾಯಿತು. ಈ ಸಮಯಕ್ಕೆ ಪಷ್ಯಾ ದೇಶಗಳಾದ ಇಂಡಿಯಾ, ಚೈನಾ ದೇಶಗಳು ಪಾಶ್ಚಾತ್ಯ ದೇಶಗಳ ಆಡಳಿತಕ್ಕೆ ಒಂದಲ್ಲ ಒಂದು ರೀತಿಯಲ್ಲಿ ತಲೆಬಾಗಿದ್ದುವು. ೧೮೬೮ರಲ್ಲಿ ಮೆಜಿ ಕ್ರಾಂತಿಯ ಫಲವಾಗಿ ಊಳಿಗಮಾನ್ಯ ಪದ್ಧತಿಯನ್ನು ಕಿತ್ತೊಗೆದು ಆಧುನಿಕ ಕೇಂದ್ರ ಆಡಳಿತ ಪದ್ಧತಿಯನ್ನು ಜಾರಿಗೆ ತಂದರು. ಇದಕ್ಕೆ ಮೊದಲೇ ೧೭೦೨ ರಲ್ಲಿ ರೇಷ್ಮೆ ವ್ಯವಸಾಯದ ಬಗ್ಗೆ ಒಂದು ಪಠ್ಯ ಪುಸ್ತಕವನ್ನು ಬರೆಯಲಾಗಿತ್ತು. ಮೆಜಿ ಕ್ರಾಂತಿಯಾದ ಮೇಲೆ ಜಪಾನಿನ ಆರ್ಥಿಕ ಅಭಿವೃದ್ಧಿ ಅಸ್ತಿಭಾರವನ್ನು ಹಾಕಲಾಯಿತು. ಇದರಿಂದಾಗಿ ಪಾಶ್ಚಾತ್ಯ ದೇಶಗಳ ವೈಜ್ಞಾನಿಕ ಮತ್ತು ತಾಂತ್ರಿಕತೆಯನ್ನು ಕೈಗಾರಿಕೆಯ ಬೆಳವಣಿಗೆಯಲ್ಲಿ ಅಳವಡಿಸಿಕೊಳ್ಳಲಾಯಿತು. ರೇಷ್ಮೆ ಕೈಗಾರಿಕೆಯ ಅಭಿವೃದ್ಧಿಗೆ ಫ್ರಾನ್ಸ್ ಮತ್ತು ಇಟಲಿ ದೇಶಗಳ ತಾಂತ್ರಿಕತೆಯನ್ನು ಬಳಸಿಕೊಳ್ಳಲಾಯಿತು. ಹೀಗೆ ರೇಷ್ಮೆ ಹುಳುಗಳನ್ನು ಸಾಕುವಲ್ಲಿ, ಹಿಪ್ಪುನೇರಳೆ ಬೆಳೆಯುವಲ್ಲಿ ಮತ್ತು ಇತರ ಭಾಗಗಳಲ್ಲಿ ರೇಷ್ಮೆ ಕೈಗಾರಿಕೆಯ ಅಭಿವೃದ್ಧಿ ಒಂದೇ ಸಮನೆ ನಡೆಯಿತು. ೧೮೭೪ರಲ್ಲಿ ಫೆಬ್ರಿನ್ ರೋಗದ ಹಾವಳಿಯನ್ನು ತಡೆಯಲು ಮತ್ತು ಹಿಡಿತದಲ್ಲಿಡಲು ಟೋಕಿಯೋದಲ್ಲೊಂದು ನೈಟೊ-ಸಿನ್‌ಜೆಕು(Naito a shinjuku) ಪ್ರಯೋಗಾಲಯವನ್ನು ಸ್ಥಾಪಿಸಲಾಯಿತು. ಕೆಲಸಗಾರರಿಗೆ ತರಬೇತಿ ಕೊಡುವವರ ಮೂಲಕ ಒಂದು ಕಾಲೇಜನ್ನು ಸ್ಥಾಪಿಸಲಾಯಿತು. ೧೮೮೪ ರಲ್ಲಿ ರೇಷ್ಮೆ ಹುಳುಗಳ ರೋಗಗಳ ಅಧ್ಯಯನಕ್ಕೋಸ್ಕರ ಸಂಶೋಧನಾಲಯವನ್ನು ತೆರೆಯಲಾಯಿತು. ೧೮೭೨ ರಲ್ಲಿ ನೂಲು ಬಿಚ್ಚುವ ಯಂತ್ರಗಳನ್ನು ಆಧುನಿಕತೆಗೊಳಿಸಲು ಮತ್ತು ಸ್ಥಾಪಿಸಲು ಫ್ರಾನ್ಸ್ ದೇಶದ ತಾಂತ್ರಿಕ ನೆರವನ್ನು ಪಡೆಯಲಾಯಿತು ಮತ್ತು ನೂಲು ಬಿಚ್ಚುವುದರಲ್ಲಿ ತರಬೇತಿ ಕೊಡಲಾಯಿತು. ಹೀಗೆ ಜಪಾನಿನ ರೇಷ್ಮೆ ಉದ್ಯಮವು ಪ್ರಗತಿ ಪಥದಲ್ಲಿದ್ದಾಗ ಹಂಸ ತಳಿಗಳನ್ನು ಕಂಡುಹಿಡಿಯುವುದು ಮತ್ತು ರೋಗಗಳನ್ನು ಹತೋಟಿಯಲ್ಲಿಡುವುದು ಅನಿವಾರ್ಯವಾಯಿತು. ೧೯೧೧ ರಲ್ಲು ಪಿ೧ ತಳಿಯ ಅಭಿವೃದ್ಧಿಗೆ ಮತ್ತು ಮೊಟ್ಟೆಗಳ ತಯಾರಿಕೆಗೆ ಕೇಂದ್ರ ಸಂಸ್ಥೆಯೊಂದನ್ನು ಸ್ಥಾಪಿಸಲಾಯಿತು. ಈ ಕೇಂದ್ರ ಸಂಸ್ಥೆಯ ಸಂಶೋಧನಾಲಯದ ಫಲವಾಗಿ ೧೯೧೪ ರಲ್ಲಿ ಮಿಶ್ರತಳಿಗಳನ್ನು ಸಾಕುವುದರಿಂದ ಹೆಚ್ಚು ಇಳುವರಿ ಪಡೆಯುವ ಸಾಧ್ಯತೆಯನ್ನು ಪ್ರದರ್ಶಿಸಲಾಯಿತು. ಅದೇ ವರ್ಷ ಈ ಕೇಂದ್ರದ ಹೆಸರನ್ನು ರೇಷ್ಮೆ ಸಂಶೋಧನಾಲಯವೆಂದು ಬದಲಾಯಿಸಲಾಯಿತು. ಈಗಲೂ ಸಹ ಈ ಸಂಸ್ಥೆ ರೇಷ್ಮೆ ಉದ್ಯಮದ ಎಲ್ಲಾ ಚಟುವಟಿಕೆಗಳಿಗೂ ಮತ್ತು ಅಭಿವೃದ್ಧಿಗೂ ಮಾತೃ ಸಂಸ್ಥೆಯಾಗಿದೆ. ೧೯೨೧ ರಲ್ಲಿ ಪ್ಯೂಪ ಹಂತದಲ್ಲಿ ಲಿಂಗ ಗಂಡು -ಹೆಣ್ಣು ಜಾತಿಯ ಪ್ಯೂಪಗಳನ್ನು ಬೇರ್ಪಡಿಸುವ ವಿಧಾನವನ್ನು ಮಿಶ್ರ ಜಾತಿ ಮೊಟ್ಟೆಗಳ ತಯಾರು ಮಾಡುವಲ್ಲಿ

ಜಾರಿಗೆ ತರಲಾಯಿತು. ೧೯೨೪ರಲ್ಲಿ ಬೈವೊಲ್ಟಿನ್ ಮೊಟ್ಟೆಗಳನ್ನು ಆಸಿಡ್‌ನಲ್ಲಿ ಸಂಸ್ಕರಿಸಿ, ಕೃತಕವಾಗಿ ಚಾಕಿ ಮಾಡುವುದನ್ನು ಪ್ರಾರಂಭಿಸಲಾಯಿತು. ೧೯೪೪ ರಲ್ಲಿ ಹೊಸ ತಳಿಗಳನ್ನು ಕಂಡುಹಿಡಿದು ಇಳುವರಿಯನ್ನು ಹೆಚ್ಚು ಮಾಡಲಾಯಿತು. ೧೯೫೪ ರಲ್ಲಿ ಸೊಪ್ಪು ಬಿಡಿಸುವ ಬದಲು ರೆಂಬೆಗಳನ್ನು ಕತ್ತರಿಸಿ ಹುಳುಗಳಿಗೆ ಆಹಾರವಾಗಿ ಕೊಡುವುದನ್ನು ಜಾರಿಗೆ ತರಲಾಯಿತು. ೧೯೬೫ ರಲ್ಲಿ ೧೯೮೧ರವರೆಗೆ ಸುಮಾರು ೧೩ ಹೊಸ ಹಿಪ್ಪುನೇರಳೆ ತಳಿಗಳನ್ನು ಕಂಡು ಸಂಸ್ಕರಿಸಲಾಗಿದೆ. ಹಾಗೆಯೇ ಅನೇಕ ಹೊಸ ರೇಷ್ಮೆ ಹುಳುಗಳ ತಳಿಗಳನ್ನು ಆಗಿಂದಾಗ್ಗೆ ಸಂಸ್ಕರಿಸುತ್ತಲೇ ಇದ್ದಾರೆ. ಅಲ್ಲಿನ ವಿಜ್ಞಾನಿಗಳ ಅಭಿಪ್ರಾಯದ ಪ್ರಕಾರ ಎಲ್ಲಾ ಋತುಗಳಲ್ಲೂ ಬೆಳೆ ಮಾಡಬಹುದಾದಂಥ "ಜೊಸೊ ಹುಳು ಸಾಕಾಣಿಕೆ" ಅಂದರೆ ರೆಂಬೆ- ಕೊಂಬೆಗಳನ್ನು ಕತ್ತರಿಸಿ ಹುಳುಗಳಿಗೆ ಆಹಾರವಾಗಿ ಕೊಡುವುದು ಮತ್ತು ಸ್ವಯಂಚಾಲಿತ ರೇಷ್ಮೆ ನೂಲು ಬಿಚ್ಚುವ ಯಂತ್ರ ಮತ್ತು ಡೀನಿಯರ್ ಕಂಡುಹಿಡಿಯುವ ಯಂತ್ರದ ಜೋಡಣೆ. ಇಡೀ ಜಪಾನ್‌ನ ವ್ಯವಸ್ಥೆಯನ್ನು ಕೆಲವೇ ಮಾತುಗಳಲ್ಲಿ ಹೇಳಬೇಕೆಂದರೆ ಕೈಗಾರೀಕರಣದ ಕ್ರಾಂತಿಯಾಗಿದೆ - ವ್ಯವಸಾಯ ವೈಜ್ಞಾನಿಕವಾಗಿದೆ- ವ್ಯಾಪಾರ ಅಂತರರಾಷ್ಟ್ರೀಯವಾಗಿದೆ. ಎಲ್ಲರೂ ಚೆನ್ನಾಗಿ ಬದುಕಬೇಕೆಂಬುದು ಈ ಜನರ ಮೂಲ ತತ್ವ. ಕೈಗಾರಿಕೆಗಳಲ್ಲಿ ವ್ಯಕ್ತಿಗತ ಒಡೆತನವಿಲ್ಲ. ಎಲ್ಲವೂ ಕಂಪನಿಗಳ ಮುಖಾಂತರ ನಡೆಯುತ್ತದೆ. ಈ ರಾಷ್ಟ್ರದ ಕೈಗಾರೀಕರಣದ ವ್ಯವಸ್ಥೆಯಲ್ಲಿ ಅತ್ಯಂತ ಮುಖ್ಯವಾದ ಅಂಶವೆಂದರೆ ಕೆಲಸಗಾರರಿಗೂ (worker), ಆಡಳಿತ ವರ್ಗದವರಿಗೂ (Managemet) ಇರುವ ಒಂದು ವಿಚಿತ್ರವಾದ ತಿಳುವಳಿಕೆ. ಈ ದೇಶದಲ್ಲಿ ಕೆಲಸಗಾರರ ಮುಷ್ಕರ ಇಲ್ಲವೇ ಇಲ್ಲ. ಕಾರಣ ಬರುವ ಲಾಭದಲ್ಲಿ ಸಾಮಾನ್ಯ ಕೆಲಸಗಾರರಿಗೂ ಮತ್ತು ಕಂಪನಿಯ ಷೇರುದಾರರಿಗೂ ಕ್ರಮವಾಗಿ ಲಾಭವನ್ನು ಹಂಚಿಕೊಳ್ಳುವ ಒಂದು ಸುವ್ಯವಸ್ಥೆ ಇಲ್ಲಿದೆ. ದಾರಿಯಲ್ಲಿ ಒಂದು ಕಡೆ ಉಪಯೋಗಿಸದ ಕಾರು ಮತ್ತು ಯಂತ್ರಗಳ ಮುದ್ದೆ(ಪಚ್ಚಿ) ಮಾಡಿ ರಾಶಿ ಒಡ್ಡಿರುವುದನ್ನು ನೋಡಿದೆ. ರಸ್ತೆಯಲ್ಲಿ ಹಾದು ಹೋಗುವಾಗ ಶಾಲೆಗೆ ಹೋಗುವ ಮಕ್ಕಳ ತಂಡವೊಂದು ಕಣ್ಣಿಗೆ ಬಿತ್ತು. ಮುದ್ದಾದ ಮಕ್ಕಳು. ಶಿಸ್ತಿನ ನಡಿಗೆ, ಆಕರ್ಷಕವಾದ ಸಮವಸ್ತ್ರ.

ಈ ನಾಡಿನ ಹೆಂಗಸರು ಶಾರೀರಿಕವಾಗಿ ಆಕರ್ಷಕವಾಗಿದ್ದಾರೆ. ಆದರೆ ಮುಖ ಗಡವನ ತರಹ. ಲೈಂಗಿಕ ವಿಷಯದಲ್ಲಿ ಜಪಾನ್ ಭಾರತದಲ್ಲಿ ತಿಳಿದುಕೊಂಡಿರುವಂತೆ ಸ್ವತಂತ್ರವಲ್ಲ. ಇದನ್ನೇ ಅಮೆರಿಕಾದ ಇಂಗ್ಲಿಷ್ ಉಪಾಧ್ಯಾಯರಾದ ಶ್ರೀ ಡೇನಿಯಲ್ ಕೂಡಾ ನಿನ್ನೆ ನಮ್ಮ ಚರ್ಚೆಯ ಸಮಯದಲ್ಲಿ ಹೇಳುತ್ತಿದ್ದರು. ಆದರೆ ಹಣಕ್ಕಾಗಿ ಮೈ ಮಾರಿಕೊಳ್ಳುವ ಹೆಣ್ಣುಗಳು ಇಲ್ಲಿಯೂ ಇದ್ದಾರೆ ಎನ್ನುವುದು ನಿಜ.

ಕಾನೂನಿನ ಬಗ್ಗೆ ಈ ಜನಗಳಿಗೆ ಅತ್ಯಂತ ಗೌರವ. ವಾಹನ ಚಾಲನೆಯಲ್ಲಿ ಅತಿಯಾದ ಶಿಸ್ತು. ಯಾವುದೇ ಸಮಯದಲ್ಲಿ ಕುಡಿದು ವಾಹನವನ್ನು ನಡೆಸುವುದಿಲ್ಲ. 'ಜಾವೋ' ಬೆಟ್ಟಗಳ ಪ್ರದೇಶವನ್ನು ನೋಡಿದಾಗ ಈ ಅಗ್ನಿಪರ್ವತ ಸುಮಾರು ೫೦೦ ವರ್ಷಗಳ ಹಿಂದೆ ಆಗಿರಬಹುದೆಂದು ಊಹಿಸುತ್ತಾರೆ. ೧, ೭೦೦ ಅಡಿ ಎತ್ತರದಲ್ಲಿರುವ ಈ ಅಗ್ನಿಪರ್ವತಕ್ಕೆ ಹೋಗುವಾಗ ಹಗ್ಗದ ಸೇತುವೆ ಅಥವಾ ತೂಗು ಸೇತುವೆಗೆ (Rope way) ಅಳವಡಿಸುವ

ಕೃತಕ ಹಕ್ಕಿಯ ಕೂಗು ಎಲ್ಲರನ್ನೂ ಆಶ್ಚರ್ಯಗೊಳಿಸುತ್ತದೆ. ಬೆಟ್ಟವನ್ನು ಇಳಿದು ಒಂದು ಊಟಕ್ಕೆ ಹೋಟೆಲ್‌ಗೆ ಹೋದಾಗ ಈ ಹೋಟೆಲ್‌ನ ಕುಂಡದಲ್ಲಿ ಇಟ್ಟಿರುವ ಸಣ್ಣ ದ್ರಾಕ್ಷಿಯ ಗಿಡದಲ್ಲಿ ದ್ರಾಕ್ಷಿಯ ಹಣ್ಣುಗಳನ್ನು ನೋಡಿದೆ. ಎತ್ತರದಲ್ಲಿ ಕಡಿಮೆ ಇರುವ ಈ ಜಪಾನ್ ಜನಕ್ಕೆ ಎಲ್ಲವನ್ನೂ ಅಂದರೆ ಸಸ್ಯಗಳನ್ನು ಕುಳ್ಳಾಗಿಸುವ ಹವ್ಯಾಸ (Miniature nature) ಸಣ್ಣ ಗಿಡಗಳಲ್ಲಿ ಹೂವು ಬೆಳೆಸುವುದು, ಹಣ್ಣು ಬೆಳೆಸುವುದು ಇವರ ಒಂದು ಹವ್ಯಾಸ. ಭವ್ಯವಾದ ಈ ಗಾಸಿನ್ ಮತ್ತು ಜಾವೋ (Zavo) ಪರ್ವತಗಳ ಸುಂದರ ಪ್ರದೇಶಗಳಿಂದ ಮುಂದೆ ಹೋದರೆ "ಸಂಘಾಯಿ" ನಗರ ಸಿಗುತ್ತದೆ. ಈ ಪ್ರದೇಶದಲ್ಲಿ ಅತ್ಯಂತ ಸುಂದರವಾದ ಹೂವಿನ ತೋಟ ಮತ್ತು ವಿಧ ವಿಧವಾದ ಗಿಡ- ಮರಗಳನ್ನು ಕಾಣಬಹುದು. ಈ ರಾಷ್ಟ್ರದ ಬೇಸಾಯ ಎಷ್ಟು ಪ್ರಗತಿ ಹೊಂದಿದೆಯೆಂದು ಇಲ್ಲಿ ನಾವು ಕಾಣಬಹುದು. ಸ್ವಲ್ಪಮಟ್ಟಿಗೆ ಇಡೀ ಪ್ರದೇಶವನ್ನು ವ್ಯವಸಾಯಕ್ಕಾಗಿ ಮೇಲು ಹೊದಿಕೆ ಹೊದಿಸಿದ್ದಾರೆ. ಜೊತೆಗೆ ಭೂಮಿಗೆ ಕೂಡ ಪ್ಲಾಸ್ಟಿಕ್‌ನಿಂದ ಮುಚ್ಚಿದ್ದಾರೆ. ಈ ದೇಶದ ಜನರ ಮತ್ತೊಂದು ಗುಣವೆಂದರೆ ರೈತನ ಮನೆಗೆ ಹೋದಾಗ ನನಗೆ ಅರಿವಾದದ್ದು ಇಲ್ಲಿ ಎಲ್ಲರೂ ಕೆಲಸ ಮಾಡುತ್ತಾರೆ. ಯಜಮಾನರು ತುಂಬಾ ಕಡಿಮೆ- ಇಲ್ಲವೇ ಇಲ್ಲ. ಬೇಸಾಯಕ್ಕೆ ಆಳುಗಳಿಲ್ಲ. ಶ್ರೀ ಸಾಥೋ (SATHO) ರವರ ಮನೆಯಲ್ಲಿ ಅವರ ತಾತ, ಅಜ್ಜಿ, ಅವರು, ಅವರ ಹೆಂಡತಿ, ಅವರ ಮಗ, ಸೊಸೆ ಎಲ್ಲರೂ ರೇಷ್ಮೆ ಹುಳ ಸಾಕುವ ಕೆಲಸ ಮಾಡುತ್ತಿದ್ದರು. ೭೦ -೮೦ ವರ್ಷದ ಮುದುಕರೂ ಕೂಡಾ ಕೆಲಸ ಮಾಡುವುದನ್ನು ನಾವು ಕಾಣಬಹುದು.

ಜಪಾನಿನಲ್ಲಿ ಆಧುನಿಕ ಕಾರುಗಳ ವಿನ್ಯಾಸ ಮತ್ತು ಅವುಗಳ ಓಡಾಟ ಮನ ಮೋಹಕವಾದುದು. ಇಲ್ಲಿ ೮ ಕಾರು ತಯಾರು ಮಾಡುವ ಕಾರ್ಖಾನೆಗಳಿವೆ. ಟೋಯೋಟೋ (TOYOTO), ನಿಸಾನ್ (NISSAN), ಹೊಂಡಾ (HONDA), ಮಜ್ದಾ (MAZDA), ಸುಜುಕಿ (SUZUKI), ಮಿಚಿಡಿಸಿ (MICHIDISIS), ಫ್ಯುಸ್‌ಜಿ (FUSJI), ಡೇಹಟ್ (DAKHAT). ನಾಳೆ ರಾಷ್ಟ್ರೀಯ ಸೈಂಕಿಯೋ (SANKIYO) ಅಂದರೆ ರಾಷ್ಟ್ರೀಯ ಚುನಾವಣೆ. ಈ ರಾಷ್ಟ್ರದಲ್ಲಿ ಹೌಸ್ ಆಫ್ ರೆಪ್ರೆಸೆಂಟೀಟಿವ್ ಮತ್ತು ಹೌಸ್ ಆಫ್ ಕೌನ್ಸಿಲ್‌ನಿಂದ ಕೂಡಿದ ಡೈಯೆಟ್ (DIET) ಎಂದು ಕರೆಯುವ ಪಾರ್ಲಿಮೆಂಟ್ ವ್ಯವಸ್ಥೆಯಿದೆ. ಈ ಎರಡು ಮನೆಗಳಿಗೂ ಏಕ ಕಾಲದಲ್ಲಿ ಚುನಾವಣೆ ನಡೆಯುತ್ತಿರುವುದು ಒಂದು ಅಪರೂಪದ ಘಟನೆಯೆಂದು ಹೇಳುತ್ತಾರೆ, ಇಲ್ಲಿನ ಜನರು. ರಾಜಕೀಯ ಕಾರಣದಿಂದಾಗಿ ಚುನಾವಣೆಯನ್ನು ನಿಗದಿತ ಕಾಲಕ್ಕಿಂತ ಮೊದಲೇ ನಡೆಸುವ ತೀರ್ಮಾನವನ್ನು ಈ ರಾಷ್ಟ್ರದ ಪ್ರಧಾನಿ ಶ್ರೀ ನಕಾಸೋನೆರವರು ಕೈಗೊಂಡಿದ್ದಾರೆ. ಚುನಾವಣೆಯ ಫಲಿತಾಂಶ ತಿಳಿದ ಮೇಲೆ ನನಗನ್ನಿಸಿತು. ಅವರ ಉದ್ದೇಶ ಸಾಧನೆಯಾಯಿತು ಎಂದು. ಚುನಾವಣೆಯ ಬಗ್ಗೆ ಈ ಜನಗಳು ಎಲ್ಲೂ ಚರ್ಚಿಸುವುದಿಲ್ಲ. ಹೆಚ್ಚಿಗೆ ಇದರ ಬಗ್ಗೆ ಚಿಂತಿಸುವುದೂ ಕಾಣಲಿಲ್ಲ. ಆದರೆ ಈ ದೇಶದ ಹಿತದ ದೃಷ್ಟಿಯಿಂದ ಯಾರನ್ನು, ಯಾವ ಪಕ್ಷವನ್ನು ಅಧಿಕಾರಕ್ಕೆ ತರಬೇಕೆನ್ನುವ ಅರಿವು ಈ ಜನತೆಯಲ್ಲಿದೆ. ರಾಜಕಾರಣ ರಾಜಕಾರಣವೇ, ರಾಜಕೀಯ ರಾಜಕೀಯವೇ; ಅದು ಜಪಾನ್ ಆದರೇನಂತೆ, ಭಾರತವಾದರೇನಂತೆ. ಅಲ್ಲೂ ಕೂಡ ಮತದಾರರ ಮನವೊಲಿಸಿಕೊಳ್ಳಲು ಹಣ ಹಂಚುವವರನ್ನು ಪೋಲಿಸಿನವರು

ಬಂಧಿಸಿದ್ದಾರೆಂಬ ಸುದ್ದಿಯನ್ನು ಇಂದು ಪತ್ರಿಕೆಗಳವರು ಪ್ರಕಟಿಸಿದ್ದಾರೆ. ಈ ರೀತಿಯ ಚಟುವಟಿಕೆಗಳನ್ನು ಮೊಟಕು ಮಾಡುವ ಎಲ್ಲಾ ಪ್ರಯತ್ನ ಮಾಡುತ್ತಿದ್ದಾರೆನ್ನುವ ಸುದ್ದಿ ಕೂಡ ಇಂದಿನ ಪತ್ರಿಕೆಗಳಲ್ಲಿದೆ. ಅಂದರೆ ಈ ಅನಿಷ್ಟ ರಾಜಕೀಯ ಪ್ರವೃತ್ತಿ ಅತ್ಯಂತ ಮುಂದುವರೆದ ಈ ರಾಷ್ಟ್ರದಲ್ಲಿ ಕೂಡಾ ಕಂಡುಬರುತ್ತದೆ.

ವಾಹನ ನಡೆಸುವವರಿಗೆ ಅನುಕೂಲವಾಗಲೆಂದು ರಸ್ತೆಯ ಎಲ್ಲ ತಿರುವುಗಳಲ್ಲೂ ಕನ್ನಡಿ (ದರ್ಪಣ)ಗಳನ್ನು ಅಳವಡಿಸಿರುವುದನ್ನು ವಿಶೇಷವಾಗಿ ಈ ದೇಶದಲ್ಲಿ ನಾವು ಕಾಣಬಹುದು. ಇಡೀ ಪ್ರವಾಸದಲ್ಲಿ ನಮ್ಮೊಡನಿದ್ದ ಶ್ರೀ ಇಸೋಬೆರವರ ಕಾರಿನ ಸಂಖ್ಯೆ ೭೦೨೭, ಎಂದೂ ಎಲ್ಲೂ ಯಾವ ತೊಂದರೆಯನ್ನೂ ಕೊಡದೇ ನಮ್ಮನ್ನು ಹೊತ್ತು ತಿರುಗಿದ ಸಂಪೂರ್ಣವಾಗಿ ಸ್ವಯಂಚಾಲಿತವಾದ ಈ ಹೊಸ ಕಾರು ಬೆಟ್ಟಗಳ ಮಧ್ಯದಲ್ಲಿ ಹಾದು ಹೋಗುವಾಗ ಮಧ್ಯದಲ್ಲಿ ಕಾಣುವ ಬಿಳಿಯ ಹಾಸು (Carpet) ಗಳೇನು? ಮಂಜುಗಡ್ಡೆಯೆ? ಬೇಸಿಗೆಯಲ್ಲ! ಹೌದು ಬೇಸಿಗೆಯಾದರೂ ಅದು ಮಂಜುಗಡ್ಡೆಯೇ! ಮಂಜುಗಡ್ಡೆಯಿಂದ ಚೆಂಡು ಮಾಡಿ, ಕೊರೆಯುತ್ತಿರುವ ಚೆಂಡನ್ನು ನನ್ನ ಕೈಗೆ ಕೊಟ್ಟರು ಶ್ರೀ ತನಾಕಾರವರು.

ತಾ. ೬-೭-೮೬ ರಂದು ನಾನು ಈ ದೇಶವನ್ನು ಬಿಟ್ಟು ಹೊರಡುವ ಸಿದ್ಧತೆಯಲ್ಲಿದ್ದೆ. ಈ ದಿನ ಈ ದೇಶದ ರಾಷ್ಟ್ರೀಯ ಚುನಾವಣೆ. ನಾನು ಜಪಾನ್‌ಗೆ ಬಂದ ದಿನದಿಂದ ಇಂದಿನವರೆಗೂ ರೇಷ್ಮೆ ಉದ್ಯಮದ ಬಗ್ಗೆ ತಿಳಿದುಕೊಳ್ಳಲು ನಗರದ ಹೊರ ದೇಶಗಳಲ್ಲಿ ಪ್ರವಾಸ ಮಾಡಿದ್ದರಿಂದ ಟೋಕಿಯೋ ನಗರವನ್ನು ಸುತ್ತಿ ಬರಲು ಆಗಿರಲಿಲ್ಲ. ಕಳೆದ ತಿಂಗಳ ತಾ. ೨೬ರಿಂದ ನನ್ನ ಜೊತೆಯಲ್ಲೇ ಅಂಟಿಕೊಂಡಂತೆ ಪ್ರವಾಸ ಮಾಡಿದ್ದ ಶ್ರೀ ಇಸೋಬೆರವರನ್ನು ಈ ದಿನ ಬಲವಂತವಾಗಿ ನಾನೇ ಮನೆಯಲ್ಲಿರುವಂತೆ ಕೇಳಿಕೊಂಡೆ. ಬೆಳಗ್ಗೆ ಅವರ ಕಂಪನಿಯಲ್ಲಿ ಕೆಲಸ ಮಾಡುವ ಮತ್ತು ನನ್ನ ಪ್ರವಾಸದ ಸಮಯದಲ್ಲಿ ಎಲ್ಲಾ ಪತ್ರ ವ್ಯವಹಾರ ಮತ್ತು ಇತರೇ ಕೆಲಸಗಳನ್ನು ನಮ್ಮೊಡನಿದ್ದು ನಡೆಸಿಕೊಳ್ಳುತಿದ್ದ ಶ್ರೀ ವೇದ ಮತ್ತು ಅವರ ಕಂಪನಿಯ ಮತ್ತೊಬ್ಬ ಕಿರಿಯ ನೌಕರರು ನನ್ನಲ್ಲಿಗೆ ಬಂದು, ಟೋಕಿಯೋ ನಗರವನ್ನು ಸುತ್ತಿಕೊಂಡು ಬರಲು ಹೊರಟೆವು. ೩೩೩ ಅಡಿಗಳ ಎತ್ತರವಿರುವ ಟೋಕಿಯೋ ಟವರ್, ರಾಜ ಮನೆತನದ ಆಳ್ವಿಕೆಯ ಕುರುಹಾಗಿ ಇಂದಿಗೂ ವಿಶಾಲವಾದ ಪ್ರದೇಶದಲ್ಲಿರುವ ಜಪಾನಿನ ರಾಜರ ಅರಮನೆ ಆಧುನಿಕ ಆಡಳಿತ ವ್ಯವಸ್ಥೆಯ ಕುರುಹಾಗಿರುವ ಜಪಾನಿನ Diet (ಪಾರ್ಲಿಮೆಂಟ್) ಕಟ್ಟಡ ಮತ್ತು ಇತರೇ ಸ್ಥಳಗಳಿಗೆ ಭೇಟಿ ಕೊಟ್ಟು ಟೋಕಿಯೋದ ವ್ಯಾಪಾರ ಸ್ಥಳದಲ್ಲಿ ತಿರುಗಾಡಿ, ನನ್ನ ಮುಂದಿನ ಪ್ರವಾಸಕ್ಕೆ ಬೇಕಾಗಿರುವ ವಸ್ತುಗಳನ್ನು ಖರೀದಿ ಮಾಡಿ ಅಲ್ಲಿಯೇ ಇರುವ ಭಾರತದ "ಅಶೋಕ" ಹೋಟೆಲಿನಲ್ಲಿ ಊಟ ಮಾಡಿ ವಾಪಸ್ ಬರುವ ವೇಳೆಗೆ ಶ್ರೀ ತನಾಕಾರವರು ಬಂದಿದ್ದರು. ನಾವೆಲ್ಲರೂ ಒಟ್ಟಿಗೆ ಟೋಕಿಯೋ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ತಲುಪುವ ವೇಳೆಗೆ ಶ್ರೀ ಇಸೋಬೆಯವರು ನಿಲ್ದಾಣದಲ್ಲಿ ಹಾಜರಿದ್ದರು. ಕೊರಿಯೋ ಪ್ರವಾಸವನ್ನು ನನ್ನ ಕಾರ್ಯಕ್ರಮದಲ್ಲಿ ಅಳವಡಿಸಿದ್ದರೂ ಕೊರಿಯಾಕ್ಕೆ ಭೇಟಿ ಕೊಡಲು ನನಗೆ ವೀಸಾ (ಪರವಾನಗಿ) ಭಾರತದಲ್ಲಿ ದೊರೆತಿರಲಿಲ್ಲ. ಟೋಕಿಯೋದಲ್ಲಿರುವ ಭಾರತದ ರಾಯಭಾರಿ

ಕಚೇರಿಯ ಸಹಾಯದಿಂದ ಜಪಾನ್‌ನಲ್ಲಿಯೇ ಪರವಾನಗಿ ಪಡೆಯಲು ತೀರ್ಮಾನಿಸಿ ನಾನು ಭಾರತದಿಂದ ಪ್ರಯಾಣ ಮಾಡಿದೆ. ಅಲ್ಲಿ ಪರವಾನಗಿಗಾಗಿ ಪ್ರಯತ್ನ ಮಾಡಿದಾಗ ಹೋಗುವ ದಾರಿಯಲ್ಲಿ ೧೨೦ ಗಂಟೆಗಳ ಕಾಲ ತಂಗಿದ್ದು ಮುಂದೆ ಪ್ರಯಾಣ ಮಾಡುವ ಭಾರತೀಯರಿಗೆ ಕೊರಿಯಾ ಭೇಟಿಗೆ ವೀಸಾ ಅವಶ್ಯಕತೆಯಿಲ್ಲವೆಂದು ಕೆಲವೇ ದಿನಗಳಲ್ಲಿ ಮಾರ್ಪಾಡಾಗಿದ್ದ ಕಾನೂನಿದೆ. ಆದ್ದರಿಂದ ನನ್ನ ಕೊರಿಯಾ ಪ್ರವಾಸಕ್ಕೆ ವೀಸಾದ ಅವಶ್ಯಕತೆಯಿಲ್ಲವೆಂದು ಕೊರಿಯಾ ರಾಯಭಾರಿ ಕಛೇರಿಯವರು ಸ್ಪಷ್ಟಪಡಿಸಿದರು. ಈ ದಿನ ವಿಮಾನ ನಿಲ್ದಾಣದಲ್ಲಿ ಈ ವಿಷಯವನ್ನು ವಿಮಾನ ನಿಲ್ದಾಣದ ಸಂಬಂಧಪಟ್ಟವರಿಗೆ ತಿಳಿಸಿ ಪ್ರಯಾಣಕ್ಕೆ ಅನುಮತಿ ಕೋರಿದಾಗ ಇಲ್ಲಿಯ ನೌಕರರು ಈ ಹೊಸ ಮಾರ್ಪಾಟಿನ ಅರಿವಿಲ್ಲದೇ ಕೊರಿಯಾ ರಾಯಭಾರಿ ಕಚೇರಿಯನ್ನು ಸಂಪರ್ಕಿಸಿ ಆಮೇಲೆ ನನಗೆ ಕೊರಿಯಾಕ್ಕೆ ಹೋಗುವ ಅನುಮತಿಯ ಕಾಗದ ಪತ್ರಗಳನ್ನು ಸಿದ್ಧ ಮಾಡಿಕೊಟ್ಟರು. ಸಂಜೆ ೬-೦೦ ಗಂಟೆಗೆ ಶ್ರೀ ತನಾಕಾ, ಶ್ರೀ ವೇದ ಮತ್ತು ನನ್ನನ್ನು ಬೀಳ್ಕೊಡಲು ಬಂದಿದ್ದ ಮಾರುಬೆನಿ ಕಂಪನಿಯ ಶ್ರೀ ತಾಯಿ ಮೋರೋ (TAYIMORA) ರವರನ್ನು ಬೀಳ್ಕೊಟ್ಟು ಜಪಾನ್ ರಾಷ್ಟ್ರಕ್ಕೆ ವಂದನೆ ಹೇಳಿ East West Oriental ವಿಮಾನದಲ್ಲಿ ಹೊರಟೆವು. ಪ್ರಯಾಣದಲ್ಲಿ ಜಪಾನ್ ಜನರ, ದೇಶದ ಬಗ್ಗೆ ನನ್ನ ಅನಿಸಿಕೆಗಳನ್ನು ಮೆಲುಕು ಹಾಕುತ್ತಾ.

## ಕೋರಿಯಾ

ಕೊರಿಯಾದ ರಾಜಧಾನಿ ಸಿಯೋಲ್ ಅನ್ನು ರಾತ್ರಿ ತಲುಪಿದಾಗ ವಿಮಾನ ನಿಲ್ದಾಣದಲ್ಲಿ ಮೊದಲೇ ನಿಗದಿ ಪಡಿಸಿದ ಹೆಣ್ಣು ಮಗಳು ವಿಮಾನ ನಿಲ್ದಾಣದ ಹಾದುಹೋಗುವ ಎಲ್ಲಾ ಸಾಂಪ್ರದಾಯಿಕ ಕೆಲಸಗಳನ್ನು ಮುಗಿಸಿ ನಮ್ಮನ್ನು ಹೊರಗೆ ಕರೆತಂದಾಗ ಕೆ. ಎಸ್. ಐ. ಸಿ. ಸಲಹೆಗಾರರಾದ (K. S. I. C. Consultant) ಶ್ರೀ ಕಿಮ್ ಮತ್ತು ಲಕ್ಕಿ ಗೋಲ್ಡ್‌ಸ್ಟಾರ್ ಕಂಪನಿಯ ಶ್ರೀ ಚುಂಗ್‌ರವರು ನಿಲ್ದಾಣದಲ್ಲಿ ನಮ್ಮನ್ನು ಸ್ವಾಗತಿಸಿ ಸಿಯೋಲ್‌ನ ಪ್ರತಿಷ್ಠಿತ ಹೋಟೆಲ್ "ಸಿಯೋಲ್ ಪ್ಲಾಜಾ"ಕ್ಕೆ ಕರೆದೊಯ್ದರು. ವಿಮಾನದಲ್ಲಿಯೇ ಊಟ ಮಾಡಿದ್ದರಿಂದ ನೇರವಾಗಿ ಹೊಟೇಲ್‌ಗೆ ಹೋಗಿ ನಿದ್ದೆ ಮಾಡಿದೆ. ಜಪಾನಿನ ಭಾಷೆಯಲ್ಲಿ 'ಯೋಸಿನ್' ಎಂದರೆ ರೇಷ್ಮೆಯೆಂದೂ, ಡೈಚಿನ್ ಎಂದರೆ ಮಂತ್ರಿ ಎಂದೂ ಅರ್ಥ. ಅಂದರೆ "ಯೋಸಿನ್ ಡೈಚಿನ್" ಅಂದರೆ ಸಿರಿಕಲ್ಚರ್ ಮಿನಿಸ್ಟರ್ ಎಂದು ಅರ್ಥ. ಆದರೆ ನಾನು ಕೊರಿಯಾಕ್ಕೆ ತಲುಪುವ ಹೊತ್ತಿಗೆ ಯೋಸನ್ ಡೈಚಿನ್ ಆಗಿರಲಿಲ್ಲ. ಆದ್ದರಿಂದ ಕೊರಿಯಾ ಪ್ರವಾಸದಲ್ಲಿ ಸಂಪೂರ್ಣವಾಗಿ ಒಬ್ಬ ಸಾಮಾನ್ಯ ಪ್ರಜೆಯಾಗಿ ಪ್ರವಾಸ ಮಾಡುವ ತೀರ್ಮಾನ ತೆಗೆದುಕೊಂಡೆ. ಹಿಂದಿನ ರಾತ್ರಿ ಒಳ್ಳೆಯ ನಿದ್ದೆಯಾಗಿದ್ದರಿಂದ ತಾ. ೭-೭-೮೮ರಂದು ಬಹಳ ಲವಲವಿಕೆಯಿಂದ ನನ್ನ ಕಾರ್ಯಕ್ರಮವನ್ನು ಕೊರಿಯಾದಲ್ಲಿ ಮೊದಲು ಮಾಡಿದೆ.

ಕೊರಿಯಾ ಚೀನಾದ 'ಪರ್ಯಾಯ ದ್ವೀಪ' ಆಗಿರುವಂತಿದ್ದರೂ ಈ ಬೃಹತ್ ರಾಷ್ಟ್ರಕ್ಕೆ ಹೊಂದಿಕೊಳ್ಳದಿರುವ ಒಂದು ಸಣ್ಣ ರಾಷ್ಟ್ರ. ಇದರಲ್ಲಿ ದಕ್ಷಿಣ ಕೊರಿಯಾ, ಉತ್ತರ ಕೊರಿಯಾ ರಾಷ್ಟ್ರ ಎಂದು ಎರಡು ರಾಷ್ಟ್ರಗಳಾಗಿವೆ. ಉತ್ತರ ಕೊರಿಯಾದಲ್ಲಿ ರಷ್ಯಾದ ರಕ್ಷಣೆ

ಆಶ್ರಯದಲ್ಲಿರುವ ಕಮ್ಯುನಿಸ್ಟ್ ಸರ್ಕಾರ ಆಡಳಿತ ನಡೆಸುತ್ತಿದೆ. ನಾನು ಪ್ರವಾಸ ಮಾಡುತ್ತಿರುವುದು ದಕ್ಷಿಣ ಕೊರಿಯಾದಲ್ಲಿ. ಇದರ ರಾಜಧಾನಿ ಸಿಯೋಲ್ ನಗರ. ಇಲ್ಲಿಯ ಜನ ಹೇಳುತ್ತಾರೆ. - ಹಿಂದೆ ನಡೆದುಹೋದುದ್ದನ್ನು ನಾವು ಮರೆತು ಉತ್ತರ ಕೊರಿಯಾದೊಂದಿಗೆ ಕೂಡಲು ಸಿದ್ಧರಿದ್ದೇವೆ. ಆದರೆ ರಷ್ಯನ್‌ರ ಚಿತಾವಣೆಯಿಂದ ಉತ್ತರ ಕೊರಿಯಾದವರು ಕೂಡುಕೊಳ್ಳಲು ಸಿದ್ಧರಿಲ್ಲ ಎಂದು. ದಕ್ಷಿಣ ಕೊರಿಯಾ ಒಂದು ಪ್ರಜಾಸತ್ತಾತ್ಮಕ ರಾಷ್ಟ್ರ. (Democratic country) ಈ ದೇಶದ ರಾಜಕೀಯ ಸಿದ್ಧಾಂತದ ಬಗ್ಗೆ ಪ್ರಶ್ನಿಸಿದಾಗ ಈ ಜನ ಹೇಳುತ್ತಾರೆ: ಕೊರಿಯಾ ಎಡವೂ ಅಲ್ಲ, ಬಲವೂ ಅಲ್ಲ. ಈ ಎರಡೂ ಕೊರಿಯಾಕ್ಕೂ ಒಂದೇ ಭಾಷೆ ಅಷ್ಟೇ ಅಲ್ಲ, ಒಂದೇ ಸಂಸ್ಕೃತಿ, ಒಂದೇ ಜನಾಂಗ. ಆದರೂ ಐತಿಹಾಸಿಕ ಕಾರಣಗಳಿಗಾಗಿ ಈ ಎರಡೂ ರಾಷ್ಟ್ರಗಳ ಮಧ್ಯೆ ನಿವಾರಿಸಲು ಸಾಧ್ಯವಾಗದಿರುವಂತಹ ವೈರತ್ವ ಅಲ್ಲದಿದ್ದರೂ ಹೊಂದಾಣಿಕೆಯಾಗದಂತಹ ವೈಮನಸ್ಯ, ಚೀನಾ, ಜಪಾನ್, ಕೊರಿಯಾ, ಇಂಡೋನೇಷಿಯಾ, ಮಲೇಷಿಯಾ, ಸಿಂಗಪೂರ್ ಈ ರಾಷ್ಟ್ರಗಳು ಸ್ವಲ್ಪ ಹೆಚ್ಚು -ಕಡಿಮೆ ಒಂದೇ ಜನಾಂಗವಿರುವ ರಾಷ್ಟ್ರಗಳು. ಕೊರಿಯಾದಲ್ಲಿ ಈಗ ಅಧ್ಯಕ್ಷ ಪದ್ಧತಿಯ ಸರ್ಕಾರವಿದೆ. (Presidential form of Goverment). ಪ್ರಧಾನಿ ಶ್ರೀ ಚುಂದೂನ್ ಹ್ವಾನ್. ಉತ್ತರ ದಕ್ಷಿಣವಾಗಿ ಸುಮಾರು ೫೦೦ ಕಿಲೋ ಮೀಟರುಗಳು, ಪೂರ್ವ- ಪಶ್ಚಿಮವಾಗಿ ೨೫೦ ಕಿಲೋ ಮೀಟರುಗಳು ಸುತ್ತಳತೆಯಿರುವ ಇದೊಂದು ಪುಟ್ಟ ರಾಷ್ಟ್ರ. ಇದರಲ್ಲಿ ಸುಮಾರು ಶೇಕಡಾ ೭೫ ಭಾಗ ಬೆಟ್ಟಗುಡ್ಡಗಳಿಂದ ಕೂಡಿದ್ದರೆ ಕೇವಲ ಶೇಕಡಾ ೨೫ ಭಾಗ ಮಾತ್ರ ಬಯಲು ಪ್ರದೇಶ. ಈ ರಾಷ್ಟ್ರದ ಜನ ಜಪಾನ್ ರಾಷ್ಟ್ರವನ್ನು ಹಿಂದೆ ಹಾಕಿ ಮುಂದೆ ಹೋಗುವ ಸತತ ಪ್ರಯತ್ನ ಪಡುತ್ತಿರುವುದನ್ನು ನಾವು ಕಾಣಬಹುದು. ಕೆಲವು ವಿಷಯಗಳಲ್ಲಿ ಈ ಜನರು ಅವರ ಈ ಪ್ರಯತ್ನದಲ್ಲಿ ಸಫಲರಾಗಿರುವುದನ್ನು ಕಾಣಬಹುದು. ಜಪಾನಿಗಿರುವಂತೆ ಕೊರಿಯಾಕ್ಕೂ ಅಮೆರಿಕಾದ ರಕ್ಷಣೆ ಮತ್ತು ಆಶ್ರಯ ಸಂಪೂರ್ಣವಾಗಿದೆ. ರಷ್ಯಾದ ಹಿಡಿತದಲ್ಲಿರುವ ಉತ್ತರ ಕೊರಿಯಾಕ್ಕಿಂತಲೂ ಅಮೆರಿಕಾದ ಹಿಡಿತದಲ್ಲಿರುವ ದಕ್ಷಿಣ ಕೊರಿಯಾವನ್ನು ಹೆಚ್ಚು ಪ್ರಗತಿಪಡಿಸಬೇಕು ಎನ್ನುವ ಅಮೆರಿಕನ್ನರ ಅಭಿಲಾಷೆ. ಈ ರಾಷ್ಟ್ರದ ಪ್ರಗತಿಗೆ ಅನುಕೂಲವಾಗಿದೆ. ಉತ್ಪಾದನಾ ಶಕ್ತಿಯಲ್ಲಿ ಕೊರಿಯಾ ಜಪಾನನ್ನು ಕೆಲವು ವಿಷಯಗಳಲ್ಲಿ ಮೀರಿಸಿದ್ದರೂ ಕೊರಿಯಾ ಇನ್ನೂ ಜಪಾನ್ ಆಗಿಲ್ಲ.

ಈ ದೇಶದ ಜನರಲ್ಲಿ ಶೇಕಡಾ ೫೫ ರಷ್ಟು ಬೌದ್ಧರು, ಶೇಕಡಾ ೪೫ ರಷ್ಟು ಕ್ರೈಸ್ತರು. ಈಗಿರುವ ಅಧ್ಯಕ್ಷರು ಬೌದ್ಧರು ಅಂದರೆ ಶೇಕಡಾ ೫೫ ರಷ್ಟಿರುವ ಜನಾಂಗಕ್ಕೆ ಸೇರಿದವರು ಎಂದಾಗ ಇಲ್ಲಿಯೂ ಮತದ ಆಧಾರದ ಮೇಲೆ ರಾಜಕಾರಣ ನಡೆಯುತ್ತಿದೆಯೇನೋ ಎನ್ನುವ ಅನುಮಾನ ನನಗೆ ಬರುತ್ತದೆ. ಆದರೆ ಈ ಮತ ವ್ಯತ್ಯಾಸ ರಾಷ್ಟ್ರದ ಪ್ರಗತಿಗೆ ತೊಂದರೆ ಮಾಡಿಲ್ಲ. "Religion is not all for koreans" ಎನ್ನುತ್ತಾರೆ ಇಲ್ಲಿಯ ಸ್ನೇಹಿತರು. ನಮ್ಮಲ್ಲಿ ಎಡಗಡೆಗೆ ವಾಹನವನ್ನು ಚಲಿಸುವ ಪದ್ಧತಿಯಿದ್ದರೆ ಈ ರಾಷ್ಟ್ರದಲ್ಲಿ ವಾಹನವನ್ನು ಬಲಗಡೆಗೆ ಚಲಿಸುವ ಪದ್ಧತಿಯಿದೆ. ಬಹುಶಃ ಈ ಪದ್ಧತಿ ಅಮೆರಿಕನ್ನರಿಂದ ಪಡೆದು

ಕೊಂಡಿದ್ದು ಎನ್ನಿಸುತ್ತದೆ. ಭಾರತದಲ್ಲಿರುವಂತೆ ಈ ಜನಾಂಗದಲ್ಲಿಯೂ ಕೂಡ "Marriage within the prohibited degree is prohibited" ಅಂದರೆ ಹತ್ತಿರದ ಸಂಬಂಧಗಳಲ್ಲಿ ಮದುವೆಯಾಗಲು ಅವಕಾಶವಿಲ್ಲ. ೪೦ ಮಿಲಿಯನ್ ಜನಸಂಖ್ಯೆ ಇರುವ ಈ ದೇಶದಲ್ಲಿ ದೇವರುಗಳೇ ಇಲ್ಲ ಮತ್ತು ದೇವತೆಗಳನ್ನು ಪೂಜಿಸುವ ಪದ್ಧತಿಯಿಲ್ಲ ಎನ್ನುತ್ತಾರೆ. ಆದರೆ ತಮ್ಮ ಹಿರಿಯರನ್ನು ಪೂಜಿಸುತ್ತಾರೆಂದು ತಿಳಿದುಬಂತು. ಗೆಳೆಯ ಶ್ರೀ ಕಿಮ್‌ರವರ ವಾಹನದಲ್ಲಿ ಈ ದಿನ ಇಡೀ ಸಿಯೋಲ್ ನಗರವನ್ನು ಸುತ್ತಿದ್ದೆವು. ಅರಮನೆ, ವಸ್ತು ಸಂಗ್ರಹಾಲಯ, ಸಿಯೋಲ್ ಟವರ್ "ನೋಹಕ್" ಬೆಟ್ಟ, ಎತ್ತರವಾದ ಈ ಜಾಗದಿಂದ ಇಡೀ ಸಿಯೋಲ್ ನಗರವನ್ನು ನೋಡಬಹುದು. ರಾಜ ಮನೆತನದ ಆಡಳಿತವಿದ್ದ ಸಮಯದಲ್ಲಿ ಸಿಯೋಲ್ ನಗರದ ಸುತ್ತಲೂ ಕೋಟೆಯನ್ನು ನಿರ್ಮಿಸಿರುವುದನ್ನು ಕಾಣಬಹುದು. ಆದರೆ ಬೆಂಗಳೂರು ನಗರವು ಕೆಂಪೇಗೌಡರ ಗೋಪುರವನ್ನೂ ಮೀರಿ ಬೆಳೆದಿರುವಂತೆ ಸಿಯೋಲ್ ನಗರ ಎಂದೋ ಕಟ್ಟಿದ್ದ ಕೋಟೆಯ ಹದ್ದುಬಸ್ತನ್ನು ಮೀರಿ ಬೆಳೆದು ನಿಂತಿದೆ. ಸಿಯೋಲ್ ನಗರದಿಂದ ೧೦೦ ಕಿ. ಮೀ. ದೂರದಲ್ಲಿ ಉತ್ತರ ಕೊರಿಯಾದ ಸರಹದ್ದು. ಆದ್ದರಿಂದಲೇ ಈ ಭಾಗದಲ್ಲಿ ಬಿಗಿಯಾದ ಸೈನಿಕ ಬಂದೋಬಸ್ತು. ದೇಶದ ಮುಖ್ಯ ಬೆಳೆ ಬತ್ತ, ರೇಷ್ಮೆ ಉತ್ಪತ್ತಿ ಜಪಾನ್‌ನಂತೆ ಈ ದೇಶದಲ್ಲಿಯೂ ಕಡಿಮೆಯಾಗುತ್ತಿದೆ. ಸರ್ಕಾರ ಆತಂಕಪಡುತ್ತಿದೆ. ೧೯೫೩ ರಲ್ಲಿ ಎರಡೂ ಕೊರಿಯಾಗಳ ಮಧ್ಯೆ ನಡೆದ ಯುದ್ಧದಿಂದಾಗಿ ಎಲ್ಲವೂ ನಾಶವಾಗಿದ್ದ ಈ ರಾಷ್ಟ್ರವನ್ನು ಮತ್ತೆ ಸಮೃದ್ಧ ರಾಷ್ಟ್ರವಾಗಿ ಕಟ್ಟಿದ್ದಾರೆ - ಈ ಜನ.

ದಕ್ಷಿಣ ಕೊರಿಯಾದ ಜನರು ಉತ್ತರ ಕೊರಿಯಾಕ್ಕೆ ಹೋಗಲು ಅವಕಾಶವಿಲ್ಲ. ವಿಶ್ವ ಸಮರಗಳ ಹಿಂದಿನ ದಿನಗಳಲ್ಲಿ ರಾಜರುಗಳಿಂದ ಕೂಡಿದ್ದ ಜಪಾನ್ ಆಳ್ವಿಕೆಯಲ್ಲಿದ್ದ ಈ ದೇಶ ೧೯೫೩ ರ ಯುದ್ಧ ಆದ ಮೇಲೆ ಎರಡು ಕೊರಿಯಾಗಳಾಗಿ ವಿಭಾಗವಾಯ್ತು. ಮೂಲತಃ ಕೊರಿಯಾದ ಸಂಸ್ಕೃತಿ ಅತ್ಯಂತ ಉತ್ತಮ ಸಂಸ್ಕೃತಿಯಾಗಿದ್ದು ಈ ಸಂಸ್ಕೃತಿಯನ್ನು ಜಪಾನೀಯರು ಪಡೆದುಕೊಂಡಿರಬಹುದು ಎನ್ನುವ ವಿಷಯವನ್ನು ಜಪಾನ್‌ನ ನನ್ನ ಸ್ನೇಹಿತರು ಒಪ್ಪಿಕೊಳ್ಳುತ್ತಾರೆ. ಈ ದೇಶದ ಪ್ರಸಿದ್ಧ ವಸ್ತು ಸಂಗ್ರಹಾಲಯವಾದ "ಕ್ಯಾಂಬೋ" ಮ್ಯೂಸಿಯಂನ್ನು ಸ್ಥಳಾಂತರ ಮಾಡಿತ್ತಿದ್ದುದರಿಂದ ನೋಡಲು ಸಾಧ್ಯವಾಗಲಿಲ್ಲ. ಎಲ್ಲಾ ಅರಮನೆಗಳಂತೆ ಹಿಂದಿನ ರಾಜರುಗಳ ವೈಭವವನ್ನು ಅವರ ವಾಸದ ವೈಖರಿಯನ್ನು ಚಿತ್ರಿಸುವ ಸಿಯೋಲ್‌ನ "ಕ್ಯುಂಗ್‌ಬಾಕ್ ಪ್ಯಾಲೇಸ್" (KYUNG BOCK PALACE) ಹೋದಾಗ ಇಲ್ಲಿಯೂ ಎಲ್ಲ ಅರಮನೆ ನೋಡಿದಾಗ ಆದ ಅನುಭವ. "ಹಾನ್" ನದಿ ಸಿಯೋಲ್ ನಗರದ ಮಧ್ಯದಲ್ಲಿ ಪೂರ್ವ- ಪಶ್ಚಿಮ ಹರಿದುಹೋಗುತ್ತದೆ. ಈ ನದಿಗೆ ೫ ಅಣೆಕಟ್ಟುಗಳನ್ನು ಕಟ್ಟಿದ್ದಾರೆ. ನದಿಯ ಎರಡು ಕಡೆಗೂ ಇರುವ ಪಟ್ಟಣವನ್ನು ಕೂಡಿಸಲು ಅತ್ಯಂತ ಆಧುನಿಕವಾದ ಅನೇಕ ಸೇತುವೆಗಳನ್ನು ಕಟ್ಟಿದ್ದಾರೆ. ಈ ದೇಶದಲ್ಲೂ ವಾಹನಗಳನ್ನು ತಯಾರು ಮಾಡುವ ಅನೇಕ ಕಾರ್ಖಾನೆಗಳಿವೆ. ಭಾರತದಂತೆ ವಾಹನವನ್ನು ಆಮದು ಮಾಡಿಕೊಳ್ಳಲು ಸಂಪೂರ್ಣ ನಿರ್ಬಂಧವಿದೆ. ಮಧ್ಯಾಹ್ನ ಪಾಕಿಸ್ತಾನಿ ಹೋಟೆಲ್ ಒಂದರಲ್ಲಿ ಲಕ್ಕಿ

ಗೋಲ್ಡ್‌ಸ್ಟಾರ್ ಕಂಪನಿಯವರು ಏರ್ಪಡಿಸಿದ್ದ ಊಟ ಮುಗಿಸಿಕೊಂಡು ನಾನು ಮತ್ತು ಇಸೋಬೆಯವರು ಮತ್ತೆ ನಗರ ಪ್ರದಕ್ಷಿಣೆಗಾಗಿ ಹೊರಟೆವು. ನಾವು ನಮಗಾಗಿ ಕಾದಿರಿಸಿದ್ದ ವಾಹನವನ್ನು ಅಷ್ಟು ಹೊತ್ತಿಗೆ ಕಳುಹಿಸಿಕೊಟ್ಟಿದ್ದೆವು. ಈಗ ೩೦ ಡಾಲರ್‌ಗಳ ವ್ಯಾಪಾರಕ್ಕಾಗಿ ೪೦ ಡಾಲರ್‌ಗಳ ಬಾಡಿಗೆ ತೆತ್ತವು. ಇಡೀ ನನ್ನ ಪ್ರವಾಸದಲ್ಲಿ ಕೊಂಚವೂ ನನ್ನ ಆರೋಗ್ಯಕ್ಕೆ ತೊಂದರೆಯಾಗಲಿಲ್ಲ. ಆದ್ದರಿಂದಲೇ ನನ್ನ ನಿಯೋಜಿತ ಕಾರ್ಯಕ್ರಮವನ್ನು ಚಾಚೂ ತಪ್ಪದಂತೆ ಮುಗಿಸಲು ಸಾಧ್ಯವಾಯಿತು. ಇದಕ್ಕೆ ಕಾರಣ ನಾನು ಪ್ರವಾಸದಲ್ಲಿ ಅಳವಡಿಸಿಕೊಂಡ ಊಟದ ಪದ್ಧತಿಯೆಂದು ಕಾಣುತ್ತದೆ. ಬೆಳಗ್ಗೆ ಎರಡು ಮೊಟ್ಟೆಗಳು ಮತ್ತು ರೊಟ್ಟಿ ಮತ್ತು ಊಟಕ್ಕಾಗಿ ಹಸಿರು ತರಕಾರಿ ಮತ್ತು ಹಣ್ಣುಗಳು. ಸಮುದ್ರದ ಆಹಾರ ಅಲ್ಲದೇ ಉಳಿದ ಮಾಂಸಾಹಾರವನ್ನು ವರ್ಜಿಸಿದ್ದೆ. ಜಪಾನ್ ಪ್ರವಾಸದಲ್ಲಿ ಅಲ್ಲಿ ದೊರೆಯುತ್ತಿದ್ದ ಗಟ್ಟಿಯಾದ ಮೊಸರು, ಹಣ್ಣು, ತರಕಾರಿ ಊಟದ ಜೊತೆಗೆ ಸ್ವಲ್ಪ ಅನ್ನ ತಿನ್ನಲು ಅನುಕೂಲವಾಗಿತ್ತು. ಈ ದಿನ ಕೊರಿಯಾದ ಪಾಕಿಸ್ತಾನಿ ಹೋಟೆಲ್‌ನಲ್ಲಿ ಕೂಡಾ ಮೊಸರನ್ನು ಒದಗಿಸಿದರು. ಜಪಾನಿನಲ್ಲಿ ಕೂಡಾ ನಾನು ಮೊಸರನ್ನು ಪಡೆಯಲು ಒಂದೆರಡು ದಿನ ಕಾಯಬೇಕಾಗಿತ್ತು. ಕೊನೆಗೆ ಅದರ ಗುಣ, ತಯಾರು ಮಾಡುವ ವಿಧಾನ, ಇರುವ ಸ್ಥಿತಿ ಎಲ್ಲವನ್ನೂ ವಿವರಿಸಿದ ಮೇಲೆ ನನ್ನ ಜಪಾನೀ ಗೆಳೆಯ "Oh it is YOUGURUTHU" ಎಂದು ಅರ್ಥಮಾಡಿಕೊಂಡು ಇಡೀ ಪ್ರವಾಸದಲ್ಲಿ ನನ್ನ ಊಟಕ್ಕೆ "YOUGURUTHU"ನ್ನು ಒದಗಿಸುವ ಏರ್ಪಾಡು ಮಾಡಿದರು. ಅನೇಕ ಸಂದರ್ಭಗಳಲ್ಲಿ ಗೆಳಯರು ನನಗಾಗಿ ಈ 'ಯೋಗುರುತ'ನ್ನು ಹೊತ್ತು ತರುತ್ತಿದ್ದರು. ಕೊರಿಯಾದ ಭಾಷೆಯಲ್ಲಿಯೂ ಕೂಡಾ ಮೊಸರಿಗೆ YOUGURUTHU ಎಂದು ಕರೆಯುತ್ತಾರೆ. ಈ ದಿನ ಸಂಜೆಯ ಊಟಕ್ಕಾಗಿ ನನಗೆ ಯೋಗುರುತು ಅನ್ನು ಪತ್ತೆ ಹಚ್ಚಲು ಶ್ರೀ ಇಸೋಬೆರವರು ಮಾಡಿದ ಪ್ರಯತ್ನ ವಿಫಲವಾಯ್ತು. ಈ ಹುಡುಕಾಟಕ್ಕಾಗಿ ಅವರು ಖರ್ಚು ಮಾಡಿದ ಹಣ ಸುಮಾರು ೫೦೦-೦೦ ರೂಪಾಯಿಗಳು. ಆಮೇಲೆ ನಮಗೆ ತಿಳಿಯಿತು, ಭಾರತ ಮತ್ತು ಜಪಾನ್‌ನಲ್ಲಿ ಸಿಗುವಂಥ ಮೊಸರು ಇಲ್ಲಿ ಸಿಗುವುದಿಲ್ಲ ಎಂದು.

ಈ "ಯೋಗುರುತಿನ" ಅಭಾವದಿಂದಲೇ ಸ್ವಲ್ಪಮಟ್ಟಿಗೆ ಕೊರಿಯಾ ಪ್ರವಾಸದಲ್ಲಿ ನನಗೆ ಊಟದ ತೊಂದರೆಯಾದದ್ದು. ಈ ದೇಶದಲ್ಲಿ ಬಟ್ಟೆ ತಯಾರಿಕೆ ಅತ್ಯಂತ ಹೆಚ್ಚಾಗಿದೆ. ಜಪಾನಿಗೆ ಇವರು ಬಟ್ಟೆಗಳನ್ನು ರಫ್ತು ಮಾಡುತ್ತಾರೆ.. ಇಲ್ಲಿ ಬಟ್ಟೆಯ ಬೆಲೆ ಶೇಕಡಾ ೩೦. ಆದರೆ ಹೊಲಿಗೆ ಶೇಕಡಾ ೭೦. ಕೊರಿಯಾ ಭಾಷೆಯಲ್ಲಿ (ಸಂಸ್ಕೃತದಲ್ಲಿ ಪೀತಾಂಬರ! "ಪೀತಾಂಗ") ಎಂದರೆ ರೇಷ್ಮೆ ಎಂದು ಅರ್ಥ. "ವಾನ್" ಈ ದೇಶದ ನಾಣ್ಯ (won is the currency of this country). ಒಂದು ಅಮೆರಿಕಾದ ಡಾಲರ್‌ಗೆ ೮೯೧ ವಾನ್ ಸಮ. ಒಂದು ಯೆನ್‌ಗೆ ೫.೩೧ ವಾನ್ ಸಮ. ಹಾನ್ ನದಿಯ ದಡದಲ್ಲಿ ೧೯೮೬ರಲ್ಲಿ ನಡೆದ ಏಷ್ಯನ್ ಕ್ರೀಡೆಗಳಿಗಾಗಿ ಕಟ್ಟಿದ ಬೃಹತ್ ಕ್ರೀಡಾಂಗಣವನ್ನು ಕಾಣಬಹುದು. ವಿಮಾನ ನಿಲ್ದಾಣದಲ್ಲಿ ಇಳಿದಾಗಲೇ "೧೯೮೮ರ ಒಲಿಂಪಿಕ್ಸ್ ಕ್ರೀಡೆಗಳಿಗೆ ಸ್ವಾಗತ" ಎಂಬ ನಾಮಫಲಕಗಳನ್ನು ನೋಡಿದೆ. ಅಂದರೆ ೧೯೮೮ರಲ್ಲಿ ನಡೆದ ಸಿಯೋಲ್‌ನಲ್ಲಿ ಪ್ರತಿಷ್ಠಿತ

ಒಲಿಂಪಿಕ್ಸ್ ಕ್ರೀಡೆ ನಡೆಯಲಿದ್ದು ಅದಕ್ಕಾಗಿ ಸಮರೋಪಾದನೆ ಸಿದ್ಧತೆಗಳು ನಡೆಯುವುದನ್ನು ಇಲ್ಲಿ ನಾವು ಕಾಣಬಹುದು. ಈ ಕ್ರೀಡೆಗಾಗಿಯೇ ವಿಶಾಲವಾದಂತಹ ಕ್ರೀಡಾಂಗಣ, ಕ್ರೀಡೆಗಳಲ್ಲಿ ಭಾಗವಹಿಸುವವರಿಗಾಗಿ ಪ್ರತ್ಯೇಕ ಒಲಿಂಪಿಕ್ ನಗರ ಸುಂದರವಾದ ವಿಶಾಲ ಉದ್ಯಾನವನಗಳ ನಿರ್ಮಾಣ ನಡೆಯುತ್ತಿರುವುದನ್ನು ನೋಡಿದೆ. ೧೯೮೮ ರಲ್ಲಿ ನಡೆಯಲಿರುವ ಒಲಿಂಪಿಕ್ ಆಟಗಳಿಗಾಗಿ ಎಲ್ಲಾ ಸಿದ್ಧತೆಗಳೂ ನಡೆಯುತ್ತಿವೆ. ಜಪಾನಿನಂತೆ ಇಲ್ಲಿಯೂ ಅನೇಕ ಸುರಂಗಗಳನ್ನೂ ದೊಡ್ಡ ದೊಡ್ಡ ಸೇತುವೆಗಳನ್ನೂ ಉತ್ತಮವಾದ ರಸ್ತೆಗಳನ್ನೂ ನಿರ್ಮಾಣ ಮಾಡಿದ್ದಾರೆ. ಸಬ್‌ವೇ ರೈಲು (subway train) ಗಳಿವೆ. ದೇಶದ ಜನತೆಗೆ ಶಿಸ್ತನ್ನು ಒದಗಿಸಿರುವ ಅತ್ಯಂತ ಮುಖ್ಯವಾದ ಕಾರಣ ೨೦ನೇ ವರ್ಷದಿಂದ ೨೩ನೇ ವರ್ಷದವರೆಗೆ ಎಲ್ಲರಿಗೂ ಈ ದೇಶದಲ್ಲಿ ಸೈನಿಕ ತರಬೇತಿ ಕಡ್ಡಾಯ. ಸಂಜೆ ಸಮುದ್ರ ನೋಡಬೇಕೆಂಬ ಆಸೆಯಿಂದ ಪಶ್ಚಿಮದ ಸಮುದ್ರದ ದಂಡೆಗೆ ಅಂದರೆ "ಇನಚಾನ್ ಬಂದಿರಿಗೆ" (INCHON PORT) ಭೇಟಿಯಿತ್ತೆವು. ಈ ದೇಶಕ್ಕಿರುವ ಭೂ ಪ್ರದೇಶ ಬಹಳ ಕಡಿಮೆ. ಇರುವ ಪ್ರದೇಶದಲ್ಲಿ ಶೇಕಡಾ ೭೫ರಷ್ಟು ಭಾಗ ಗುಡ್ಡಗಳಿಂದ ಕೂಡಿದ್ದು. ಆದ್ದರಿಂದ ಭೂಮಿಗಾಗಿ ಈ ದೇಶದ ಜನರ ಪರದಾಟ. ವಿಶಾಲವಾದ ಭಾರತದಲ್ಲಿಯೇ ಭೂಮಿಗಿರುವ ದಾಹವನ್ನು ಗಮನಿಸಿದರೆ ಅಲ್ಲಿಯ ಪರಿಸ್ಥಿತಿಯನ್ನು ಸುಲಭವಾಗಿ ಊಹಿಸಿಕೊಳ್ಳಬಹುದು. ಸಮುದ್ರಕ್ಕೆ ಮಣ್ಣನ್ನು ತುಂಬುವುದರ ಮೂಲಕ ಸಮುದ್ರವನ್ನು ತಳ್ಳಿಕೊಂಡು ಹೋಗಿ ಈ ಇಂಚಾನ್ ಬಂದರನ್ನು ಆ ಭೂಮಿಯ ಮೇಲೆ ಕಟ್ಟಿದ್ದಾರೆ. ಸಮುದ್ರದ ದಡದಲ್ಲಿ ಎತ್ತರವಾದ ಗೋಡೆ ಕಟ್ಟಿದ್ದಾರೆ. ಭಾರತದ ಸಮುದ್ರ ದಂಡೆಗಳ ರೀತಿಯಲ್ಲಿಯೇ ಸಮುದ್ರದ ದಂಡೆ ಇರಬಹುದೆಂದು ನಿರೀಕ್ಷಿಸಿ ಬಂದ ನನಗೆ ಒಂದು ವಿಧದಲ್ಲಿ ನಿರಾಶೆಯಾಯ್ತು. ವಿಶೇಷವೆಂದರೆ ಇಲ್ಲಿಯ ಹೋಟೆಲುಗಳ ಮುಂದೆ ಇರುವ ಜೀವಂತ ಮೀನುಗಳ ಪ್ರದರ್ಶನ. ಜಪಾನ್ ಮತ್ತು ಕೊರಿಯಾದಲ್ಲಿ ಬೇಯಿಸದ ಹಸೀ ಮೀನು (Raw fish) ತಿನ್ನುತ್ತಾರೆ. ಆದ್ದರಿಂದ ಜೀವಂತ ಮೀನುಗಳನ್ನು ಹೋಟೆಲ್ಲುಗಳ ಮುಂದೆ ಪ್ರದರ್ಶಿಸಿ ಗಿರಾಕಿಗಳನ್ನು ಆಕರ್ಷಿಸುತ್ತಾರೆ. ಸಿಯೋಲ್‌ನಿಂದ ೫೦ ಕಿ. ಮೀ. ಗಳ ದೂರದಲ್ಲಿರುವ ಈ ಸಮುದ್ರದ ದಂಡೆ ವಿಹಾರಕ್ಕೆ ಯೋಗ್ಯವಲ್ಲ. ಸಮುದ್ರದ ದಂಡೆಯಿಂದ ವಾಪಸ್ ಬಂದು "ಹೋಟೆಲ್ ಸಿಯೋಲ್ ಪ್ಲಾಜಾ"ದಲ್ಲಿ ಊಟ ಮಾಡಿ ನಾಳೆಗೆ ಹೆಚ್ಚಿನ ಕಾರ್ಯಕ್ರಮವಿದ್ದುದರಿಂದ ಮುಂಚಿತವಾಗಿಯೇ ಮಲಗಿದೆ.

**ಕೆ.ಎಸ್.ಎ. :** ತಾ. ೮ರಂದು ಕೊರಿಯಾದ ಸಿಲ್ಕ್ ಅಸೋಸಿಯೇಷನ್ ಇರುವ ರೇಷ್ಮೆ ಕೇಂದ್ರಕ್ಕೆ ಭೇಟಿಯಿತ್ತು. ಕೊರಿಯಾ ಸಿಲ್ಕ್ ಅಸೋಸಿಯೇಷನ್‌ನ (ಕೆ. ಎಸ್. ಎ) ಅಧ್ಯಕ್ಷರಾದ ಶ್ರೀ ಟಿ. ಎ. ಜುಂಗ್‌ರವರೊಡನೆ ಚರ್ಚಿಸಿದೆ. ಸರ್ಕಾರದಿಂದ ಮತ್ತು ಸದಸ್ಯರಿಂದ ವಂತಿಗೆಯನ್ನು ಪಡೆದು ರೇಷ್ಮೆ ಉದ್ಯಮದ ಬಗ್ಗೆ ಸರ್ಕಾರಕ್ಕೆ ಸಲಹೆ ಕೊಡುವ ಒಂದು ಸಂಸ್ಥೆಯಿದು. ಕರ್ನಾಟಕದಲ್ಲಿಯೂ ಸಂಕ್ಷಿಪ್ತವಾಗಿ ಪ್ರಸ್ತಾಪಿಸಲಾಗಿರುವ ಹೆಸರು ಕುರಿತು ನಾನು ಹೇಳುತ್ತಿದ್ದೇನೆ ಎನ್ನುವ ಭಾವನೆ ನಿಮಗೆ ಬರಬಾರದು. ಕೊರಿಯಾ ಸಿಲ್ಕ್ ಅಸೋಸಿಯೇಷನ್ ಅನ್ನೂ ಹೀಗೆಯೇ ಕರೆಯುತ್ತಾರೆ. ಸಹಜವಾಗಿಯೇ ನನ್ನ ಕುತೂಹಲ

ಇಮ್ಮಡಿಯಾಗಿತ್ತು. ಏಕೆಂದರೆ ಇಂತಹದೆ ಸಂಸ್ಥೆಯ ಅಧ್ಯಕ್ಷ ಪದವಿಯನ್ನೂ ವಹಿಸಿಕೊಂಡಿದ್ದವ ನಾನು. ಕೊರಿಯಾದಲ್ಲಿ ಈ ಸಂಸ್ಥೆಯ ಮುಖ್ಯಸ್ಥ ಶ್ರೀ ಟಿ. ಎ. ಚುಂಗ್ ಎಂಬುವರು. ಇವರೊಡನೆ ಒಟ್ಟಿಗೇ ನಗರ ಪ್ರದಕ್ಷಿಣೆ ಮಾಡಿದ್ದನ್ನು ನಿಮಗಾಗಲೇ ತಿಳಿಸಿದ್ದೇನೆ. ಆಗ ಮಾತ್ರ ಈ ಸಂಸ್ಥೆಯನ್ನು ಕುರಿತು ಏನನ್ನೂ ಕೇಳಿರಲಿಲ್ಲ. ಈಗ ಉದ್ದೇಶಪೂರ್ವಕವಾಗಿಯೇ ಈ ಸಂಸ್ಥೆಗೆ ಭೇಟಿ ಕೊಟ್ಟಿದ್ದೆನಾದ್ದರಿಂದ ಶ್ರೀ ಚುಂಗ್ ಅವರೊಡನೆ ಬೇರೆ ಇನ್ನಾವ ವಿಚಾರಗಳನ್ನು ಪ್ರಸ್ತಾಪಿಸುವ ತವಕ ತೋರಲಿಲ್ಲ. ಸಂಸ್ಥೆಯ ಕಾರ್ಯ ಚಟುವಟಿಕೆ, ಉದ್ಯಮದಲ್ಲಿ ಅದರ ವ್ಯಾಪ್ತಿ, ವಿಸ್ತಾರಗಳನ್ನು ನನಗೆ ತಿಳಿಸಿಕೊಡುವ ಪ್ರಥಮ ಯತ್ನವಾಗಿ ಅವರು ಹೇಳಿದರು -

ಮೂರು ಸಾವಿರ ವರ್ಷಗಳ ಹಿಂದೆ ಚೀನಿಯರು ಇಲ್ಲಿ ರೇಷ್ಮೆ ಉದ್ಯಮ ಬೆಳೆಯಲು ನಾಂದಿ ಹಾಡಿದರು. ಇದೋ ನೋಡಿ ಆಗ ಡೈನೆಸ್ಸಿಯಾ ರಾಣಿ ಮೊಟ್ಟಮೊದಲಿಗೆ ರೇಷ್ಮೆ ಹುಳು ಸಾಕಣೆ ಮಾಡುತ್ತಿದ್ದ ಕಟ್ಟಡದ ಪ್ರತಿ ಎಂದು ಒಂದು ವರ್ಣಚಿತ್ರ ತೋರಿಸಿದಾಗ ಉದ್ಯಮದ ಪ್ರಾಚೀನತೆಯ ಆಧಾರಗಳನ್ನು ಕಾಯ್ದಿಡುವಲ್ಲಿ ತೆಗೆದುಕೊಂಡಿರುವ ಆಸಕ್ತಿ ನನಗೆ ಮೆಚ್ಚುಗೆಯಾಯಿತು.

ಕರ್ನಾಟಕದಲ್ಲಿ ರೇಷ್ಮೆ ಉದ್ಯಮದ ಉಗಮವಾದದ್ದು ಹೇಗೆ ಎನ್ನುವುದಕ್ಕೆ ಎಲ್ಲ ಕಡೆಯಿಂದಲೂ ಪುನರುಚ್ಚಾರಗೊಳ್ಳುತ್ತಿರುವುದು ಟಿಪ್ಪು ಸುಲ್ತಾನರ ಕಾಲದಲ್ಲಿ ಎನ್ನುವ ಒಂದೇ ಮಾತು. ಕಸುಬಿನಲ್ಲಿ ಚೈತನ್ಯ ಮೂಡಿಸುವಂತಹ ಪ್ರಯತ್ನ ನಡೆದಿರಬಹುದೇ ಹೊರತು ಟಿಪ್ಪುಸುಲ್ತಾನರ ಕಾಲಕ್ಕೂ ಹಿಂದೆ ರೇಷ್ಮೆ ಉದ್ಯಮ ಇರಲೇ ಇಲ್ಲ ಎನ್ನುವುದು ತಪ್ಪಾಗುತ್ತದೆ. ಅಂದರೆ ಸಂಶೋಧನೆಯ ಪ್ರಯತ್ನ ನಡೆದಿಲ್ಲ ಎಂದು ನಂಬಿರುವ ನಾನು ಕೊರಿಯಾದಲ್ಲಿ ಕುಳಿತೇ ಕರ್ನಾಟಕಕ್ಕೆ ಹಾರಿಬಂದಿದ್ದೆ. ಮಾನಸಿಕವಾಗಿ ರೇಷ್ಮೆ ಉದ್ಯಮದ ಪ್ರಾಚೀನತೆಯ ಪ್ರಶ್ನೆ ಬಂದಾಗ "ಚೀನಾ" ದೇಶದ ಹೆಸರು ಕೇಳಿಬರುವುದೇ ಹೆಚ್ಚು. ಆದರೆ ಅದಕ್ಕೂ ಮುಂಚಿನಿಂದಲೂ ಭಾರತದಲ್ಲಿ ರೇಷ್ಮೆಯ ಪ್ರಸ್ತಾಪ ನಮ್ಮ ಪ್ರಾಚೀನ ಗ್ರಂಥಗಳಲ್ಲಿ ಕಾಣಸಿಗುತ್ತದೆ ಎನ್ನುವ ವಿಚಾರ ನೆನಪಿಗೆ ಬಂದಿತು. ಮೂಲತಃ ಭಾರತವೇ ರೇಷ್ಮೆಯ ತವರು ಎನ್ನುವ ಸಿದ್ಧಾಂತ ಸ್ಥಾಪನೆ ಸಾಧ್ಯ ಎಂದಿಟ್ಟುಕೊಳ್ಳೋಣ. ಆದರೆ ಕೊರಿಯಾದಂತಹ ದೇಶವನ್ನು ಗಣನೆಗೆ ತೆಗೆದುಕೊಂಡೇ ನಮ್ಮ ದೇಶ ಎಷ್ಟು ಹಿಂದೆ ಉಳಿದಿದೆ ಎಂಬುದರ ಕಲ್ಪನೆ ಸಹ ನಾವು ತಲೆತಗ್ಗಿಸುವಂತೆ ಮಾಡುತ್ತದೆ. ಎಂದೆಲ್ಲ ತರ್ಕ ತರಂಗಗಳು ಮನಸ್ಸಿಗೆ ಲಗ್ಗೆ ಹಾಕಿದುವು. ನಾನು ನಿರಾಶಾವಾದಿಯಲ್ಲ. ಮುಂದೊಂದು ದಿನ ಭಾರತವೂ ರೇಷ್ಮೆ ಉದ್ಯಮದಲ್ಲಿ ಕ್ರಾಂತಿಕಾರಕ ಬೆಳವಣಿಗೆಯನ್ನು ಕಾಣುತ್ತದೆ ಎಂಬ ವಿಶ್ವಾಸವನ್ನು ಹೊಂದಿ, ಚುಂಗ್ ಅವರೊಡನೆ ಮಾತು ಮುಂದುವರೆಸುತ್ತಿದ್ದೆ. ಸರ್ಕಾರಕ್ಕೆ ಸಲಹೆ ಕೊಡುವ, ಮಾರ್ಗದರ್ಶನ ಮಾಡುವ ಹೊಣೆಯ ನಿರ್ವಹಣೆ ಈ ಸಂಸ್ಥೆಯದು, ಸದಸ್ಯರು ಹಾಗೂ ಸರ್ಕಾರ ವಂತಿಗೆ ನೀಡಿ ಸಂಸ್ಥೆಯ ಬೆಳವಣಿಗೆಯಲ್ಲಿ ಆಸಕ್ತಿ ತೋರಿದೆ. ಹನ್ನೆರಡು ಅಂತಸ್ತಿನ ಬೃಹತ್ ಕಟ್ಟಡವನ್ನು ಹೊಂದಿರುವ ಇದು ಪ್ರಾರಂಭವಾಗಿ ನಲವತ್ತೆರಡು ವರ್ಷಗಳಾಗಿವೆ (೧೨.೭.೧೯೪೬). ಆಗ ಕೋಶುನ್ ಸಿರಿಕಲ್ಚರಲ್ ಅಸೋಸಿಯೇಷನ್ ಎಂದಿದ್ದ ಸಂಸ್ಥೆಯ ನಾಮಕರಣ ಎರಡು ವರ್ಷದಲ್ಲಿಯೇ ಬದಲಾಯಿತಂತೆ (೯.೬.೧೯೪೮).

ಈ ಸಂಸ್ಥೆಯ ಕಟ್ಟಡ ಎಷ್ಟು ಬೃಹತ್ ಆಗಿದೆಯೋ ಅದೇ ರೀತಿ ಅದರ ಕಾರ್ಯ ಚಟುವಟಿಕೆಗಳೂ ಮಹತ್ತರವಾಗಿದೆ ಎಂಬುದನ್ನು ತಿಳಿಯಲು ತಡವಾಗಲಿಲ್ಲ. ರೇಷ್ಮೆ ತಾಂತ್ರಿಕ ತರಬೇತಿ ಕೇಂದ್ರವನ್ನು ನಡೆಸಿಕೊಂಡು ಬರುತ್ತಿರುವುದರ ಜೊತೆಗೆ ಸಂಘದ ಸದಸ್ಯರ ಹಿತರಕ್ಷಣೆಗೆ ಯೋಜನೆಗಳನ್ನು ರೂಪಿಸುತ್ತಿದೆ. ಕೊರಿಯಾ ರಾ ಸಿಲ್ಕ್ ಎಕ್ಸ್‌ಪೋರ್ಟ್ಸ್ ಅಸೋಸಿಯೇಷನ್, ಕೊರಿಯಾ ಮಲ್ಬೆರಿ ಸ್ಯಾಪ್‌ಲಿಗ್ ಅಸೋಸಿಯೇಷನ್, ಕೊರಿಯಾ ಸಿಲ್ಕ್‌ವರ್ಮ್ ಎಗ್ಸ್ ಅಸೋಸಿಯೇಷನ್, ಕೊರಿಯಾ ಸಿಲ್ಕ್‌ವರ್ಮ ರೇರರ್ಸ್ ಅಸೋಸಿಯೇಷನ್ ಇವೆಲ್ಲವೂ ಈ ಮೂಲ ಸಂಸ್ಥೆಯ ಬೆಳವಣಿಗೆಯಲ್ಲಿ ತಮ್ಮನ್ನು ಗುರುತಿಸಿಕೊಂಡಿವೆ. ಅಥವಾ, ಈ ಎಲ್ಲ ಸಂಸ್ಥೆಗಳನ್ನೂ ಒಳಗೊಂಡಿರುವ ಸಿರಿಕಲ್ಚರಲ್ ಅಸೋಸಿಯೇಷನ್ ಕಾರ್ಯಕ್ಷೇತ್ರ ಬಹು ದೊಡ್ಡದು ಎಂದು ತಿಳಿಯಬಹುದು. ತನ್ನ ರಾಷ್ಟ್ರದಲ್ಲಿ ರೇಷ್ಮೆ ಉದ್ಯಮ ಉಳಿಯುವುದಷ್ಟೇ ಸಾಲದು, ಬೆಳೆಯುವುದಕ್ಕೂ ನೆರವಾಗಬೇಕೆಂಬ ದೃಷ್ಟಿಯಿಂದ ಸರ್ಕಾರದ ಸಹಭಾಗಿತ್ವದಲ್ಲಿ ಯೋಜನೆಗಳನ್ನು ರೂಪಿಸುವಲ್ಲಿಯೂ ಸಹ ಮುಂದಿದೆ. ರೇಷ್ಮೆ ಉದ್ಯಮದ ಅಭಿವೃದ್ಧಿಗೆಂದು ನಿಧಿಯನ್ನು ರೂಢಿಸುವುದರಲ್ಲಿಯೂ ಇದರ ಪಾತ್ರ ದೊಡ್ಡದು. ಈ ಸಂಸ್ಥೆಯ ಪ್ರಮುಖ ಉದ್ದೇಶಗಳನ್ನು ಹೀಗೆ ಪಟ್ಟಿ ಮಾಡಬಹುದು:

### ಅ. ರೇಷ್ಮೆ ಕೃಷಿಗೆ ನೆರವು ಹಾಗೂ ಪ್ರೋತ್ಸಾಹ

*ರೇಷ್ಮೆ ಉದ್ಯಮದ ಇತರ ಪ್ರಾಕಾರಗಳಾದ ಹುಳು ಸಾಕಣೆ, ಗೂಡು ಉತ್ಪಾದನೆ, ಮಾರಾಟ, ಒಬ್ಬರಿಗೊಬ್ಬರಿಗೆ ನೆರವಾಗುವುದು ಇಂತಹ ಸಾರ್ವತ್ರಿಕ ವಿಷಯಗಳನ್ನು ಉತ್ತೇಜಿಸುವುದು ಹಾಗೂ ಹೆಚ್ಚು ಮಾಡುವುದು.

* ರೇಷ್ಮೆ ಕೃಷಿ ನಿರ್ವಹಣೆ ಅಷ್ಟು ಸರಳವಲ್ಲ. ನಿರ್ದಿಷ್ಟ ಕ್ರಮದಲ್ಲಿ ವೈಜ್ಞಾನಿಕ ವಿಚಾರದಲ್ಲಿ ನಿರ್ವಹಿಸಿದ್ದೇ ಆದರೆ ಆಗ ಹೆಚ್ಚು ಲಾಭ. ಈ ನಿಟ್ಟಿನಲ್ಲಿ ಬೆಳೆಗಾರರನ್ನು ಸಿದ್ಧಪಡಿಸುವುದು.

* ನೆರೆ ರಾಷ್ಟ್ರದಲ್ಲಿ ಅಧ್ಯಯನ ಪ್ರವಾಸ ಏರ್ಪಡಿಸುವುದು.

* ವಿದ್ಯಾರ್ಥಿ ಮಟ್ಟದಲಿಯೇ ರೇಷ್ಮೆ ಕೃಷಿ ವಿಜ್ಞಾನವನ್ನು ಪರಿಚಯಿಸುವುದು.

* ಆಗಿಂದಾಗ್ಗೆ ಸಭೆ- ಸಮಾರಂಭಗಳನ್ನು ಕರೆದು ಮುಕ್ತ ಚರ್ಚೆಗೆ ಅವಕಾಶ ನೀಡಿ ರೇಷ್ಮೆ ಕೃಷಿಯ ಉತ್ತೇಜನಕ್ಕೆ ಪ್ರೋತ್ಸಾಹ ನೀಡುವುದು.

### ಆ. ಪರಿವೀಕ್ಷಣೆ, ಸಂಶೋಧನೆ ಮತ್ತು ಪ್ರಕಟಣೆ (Survey Research and publication)

"ರೇಷ್ಮೆ ಕೃಷಿ ಮಾಸಿಕ" "ರೇಷ್ಮೆ ಕೃಷಿಯ ವಾರ್ಷಿಕ ಅಂಕಿ ಅಂಶಗಳು", "ವಿದೇಶೀ ಮಾರುಕಟ್ಟೆ ವಾರ್ತೆ" ಇವು ಈ ಸಂಸ್ಥೆಯ ಪ್ರಕಟಣೆಗಳು. ಈ ಪ್ರಕಟಣೆಗಳು ನಿಲ್ಲುವುದಿಲ್ಲ. ಆಗಿಂದಾಗ್ಗೆ ರೇಷ್ಮೆ ಉದ್ಯಮದ ನಾನಾ ವಿಚಾರಗಳನ್ನು ಕುರಿತು ಕಿರು ಪ್ರಕಟಣೆಗಳು

ಆಗುವುದೂ ಉಂಟು. ಇದರ ಜೊತೆಗೆ ಸಾರ್ವಜನಿಕ ಸಂಪರ್ಕ, ರೇಷ್ಮೆ ಉದ್ಯಮದ ಪ್ರಚಾರ ಇವುಗಳನ್ನು ಕೈಗೊಳ್ಳುತ್ತದೆ. ಈ ಸಂಸ್ಥೆ ಪ್ರಕಟಿಸಿರುವ ಇನ್ನು ಹಲವು ಪುಸ್ತಕಗಳು ಮತ್ತು ನಿಯತಕಾಲಿಕ ಪತ್ರಿಕೆಗಳನ್ನು ನಾನು ಇಲ್ಲಿ ಕಂಡೆ. ಹೇಳಬೇಕೆಂದರೆ - ನಿಜವಾಗಿ ನಾನು ಸ್ಥಂಭೀಭೂತನಾದೆ. ಇದೇ ಸಂದರ್ಭದಲ್ಲಿ ನನಗೆ ನೆನಪಿಗೆ ಬಂದ ವಿಚಾರವೆಂದರೆ ಕರ್ನಾಟಕ ಸಿಲ್ಕ್ ಅಸೋಸಿಯೇಷನ್ ಅಧ್ಯಕ್ಷನಾಗಿದ್ದಾಗ ಸದರೀ ಸಂಸ್ಥೆಯು ಬಹು ಹಿಂದಿನಿಂದ ಬಹಳ ಮುತುವರ್ಜಿ ವಹಿಸಿ ಸಿದ್ಧಪಡಿಸಿ ಪ್ರಕಟಿಸಿದ್ದ ಅಪರೂಪದ ಪುಸ್ತಕ "ಸಿಲ್ಕ್ ವರ್ಮ್ ರೇರಿಂಗ್ ಅಂಡ್ ಡಿಸಿಸಸ್" ಪುಸ್ತಕದ ಬೇಡಿಕೆ ತೀವ್ರವಾಗಿತ್ತು. ಇದನ್ನು ಪರಿಷ್ಕರಿಸಿ ಪುನರ್ ಮುದ್ರಣಕ್ಕೆ ಸಿದ್ಧಗೊಳಿಸಲು ನಾನು ಅಧ್ಯಕ್ಷನಾಗಿದ್ದಾಗಲೂ ಸಾಧ್ಯವಾಗಲಿಲ್ಲ. ಒಂದೊಂದು ಪ್ರಕಟಣೆಯನ್ನು ಹೀಗೆ ಉಪೇಕ್ಷೆಗೆ ಒಳಪಡಿಸಿದ್ದೇವಲ್ಲ ಎಂಬ ಅಳುಕು ನನ್ನನ್ನು ಬಾಧಿಸಿತು. ತಾಯಿನಾಡಿಗೆ ವಾಪಸ್ಸಾದ ಬಳಿಕ ಸಂಬಂಧಪಟ್ಟವರಲ್ಲಿ ಈ ಬಗ್ಗೆ ಮಾತನಾಡಿ ಆಗಿರುವ ಲೋಪವನ್ನು ಸರಿಪಡಿಸಬೇಕೆಂದುಕೊಂಡೆ.

## ೩. ರೇಷ್ಮೆ ಉದ್ಯಮದ ಉತ್ತೇಜನಕ್ಕಾಗಿ ಅಂತರರಾಷ್ಟ್ರೀಯ ಸಹಕಾರ

ರೇಷ್ಮೆ ಉದ್ಯಮದಲ್ಲಿ ತೊಡಗಿರುವ ಇತರ ರಾಷ್ಟ್ರಗಳ ಸಂಪರ್ಕವನ್ನು ಹೊಂದಿ ಈ ರಾಷ್ಟ್ರಗಳೊಡನೆ ಅಂಕಿ - ಅಂಶ ಹಾಗೂ ವಿಚಾರ ವಿನಿಮಯ ಅಗತ್ಯವೆಂದು ಈ ಸಂಸ್ಥೆ ಭಾವಿಸುತ್ತದೆ. ಆದ್ದರಿಂದಲೇ ಅಂತರರಾಷ್ಟ್ರೀಯ ರೇಷ್ಮೆ ಸಂಸ್ಥೆಯೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡಿದೆ. ಕೊರಿಯಾ ಮತ್ತು ಜಪಾನ್ ದೇಶಗಳ ನಡುವೆ ರೇಷ್ಮೆ ಕೃಷಿ ಖಾಸಗಿಯಾಗಿ ಸಮಾವೇಶಗಳನ್ನು ಏರ್ಪಡಿಸುವುದುಂಟು.

ಬೆಳೆಗಾರರ ಬಳಿ ಇರುವ ಫಲಿತಾಂಶವನ್ನು ಅವರ ಸಾಧನೆಯನ್ನು ವಿಶ್ಲೇಷಿಸಿ ಉದ್ಯಮದ ನಿರ್ವಹಣೆಗೆ ಮಾರ್ಗದರ್ಶನ ಮಾಡುತ್ತದೆ. ಈ ದೇಶದ "ರೇಷ್ಮೆ ಕೃಷಿ ಉತ್ತೇಜನ ನಿಧಿ" (sericultural production fund) ಯ ಮೇಲೆ ಪೂರ್ಣ ಹತೋಟಿ ಹೊಂದಿದೆ. ರೇಷ್ಮೆ ಉದ್ಯಮದ ಇನ್ನು ಇತರ ಸಂಘ- ಸಂಸ್ಥೆಗಳಾದ "ಹಿಪ್ಪುನೇರಳೆ ಸಸ್ಯಾಭಿವೃದ್ಧಿ ಸಂಸ್ಥೆ", "ರೇಷ್ಮೆ ಮೊಟ್ಟೆ ಸಂಸ್ಥೆ", "ಕಚ್ಚಾ ರೇಷ್ಮೆ ರಫ್ತುದಾರರ ಸಂಸ್ಥೆ", "ರೇಷ್ಮೆ ಕೃಷಿ ಸಹಕಾರ ಸಂಘ" ಇವುಗಳ ಜೊತೆ ನಿಕಟ ಸಂಪರ್ಕವನ್ನಿಟ್ಟುಕೊಂಡು ಅವುಗಳ ಕಾರ್ಯನಿರ್ವಹಣೆಯಲ್ಲಿ ನೆರವು ನೀಡುತ್ತದೆ.. ರೇಷ್ಮೆ ಕೃಷಿಯ ಆಡಳಿತ ಉಸ್ತುವಾರಿಯನ್ನು ನೋಡಿಕೊಳ್ಳುವ ವ್ಯವಸಾಯ ಮತ್ತು ಮೀನುಗಾರಿಕೆ ಖಾತೆಯ ಜೊತೆಗೆ ಸಂಪರ್ಕವಿರಿಸಿಕೊಂಡು ಯೋಜನೆಗಳನ್ನು ರೂಪಿಸುವುದು ಇದರ ಬಹುಮುಖ್ಯ ಕೆಲಸ.

ಈ ಸಂಸ್ಥೆಯ ಬೃಹತ್ ಕಟ್ಟಡವನ್ನು ವೀಕ್ಷಿಸಲು ನನ್ನನ್ನು ಕರೆದುಕೊಂಡು ಹೋದರು. ಅಲ್ಲಿ ಒಂದು ಕಡೆ ವಿಶಾಲವಾದ ಪ್ರದರ್ಶನ ಕೊಠಡಿಯಿದೆ. ಈ ದೇಶದಲ್ಲಿ ತಯಾರಾದ ವಿವಿಧ ದರ್ಜೆಯ ರೇಷ್ಮೆ ವಸ್ತ್ರಗಳನ್ನು ಪ್ರದರ್ಶನ ಹಾಗೂ ಮಾರಾಟಕ್ಕೆ ಇಟ್ಟಿದ್ದಾರೆ. ಸುಸಜ್ಜಿತ ತರಬೇತಿ ಸಂಸ್ಥೆಯೂ ಇಲ್ಲಿಯೇ ಇದೆ. ರೇಷ್ಮೆ ಉದ್ಯಮ ಕುರಿತ ಯಾವುದೇ ನೀತಿಗಳನ್ನು ನಿರೂಪಿಸುವಲ್ಲಿ (policy master) ಈ ಸಂಸ್ಥೆಯ ಸಲಹೆಯನ್ನು ಸರ್ಕಾರವು ಸಹ

ಪಡೆದಿರುವುದಾಗಿ ಅಲ್ಲಿನ ಅಧ್ಯಕ್ಷರು ನನಗೆ ತಿಳಿಸಿದರು. ಅಂದ ಮೇಲೆ ಇಡೀ ರಾಷ್ಟ್ರದ ರೇಷ್ಮೆ ಉದ್ಯಮದ ಆಗುಹೋಗುಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಅತ್ಯಂತ ಪ್ರಭಾವಯುತ ಸಂಸ್ಥೆ ಇದು ಎನ್ನುವುದನ್ನು ತಿಳಿದೆ. ಈಗಾಗಲೇ ೬ ದಶಕಗಳನ್ನು ಸಮೀಸುತ್ತಿರುವ ಕರ್ನಾಟಕ ಸಿಲ್ಕ್ ಅಸೋಸಿಯೇಷನ್ ನನ್ನ ಜೀಪಿತದಲ್ಲಿ ಕೊರಿಯಾ ಸಿಲ್ಕ್ ಅಸೋಸಿಯೇಷನ್‌ನಷ್ಟು ಪ್ರಭಾವಯುತವಾಗಿ ಕೆಲಸ ಮಾಡಬಲ್ಲುದೆ ಎಂದೆನಿಸಿ ಹೀಗೆ ಆಗಬೇಕೆಂದು ಕನಸು ಕಾಣುತ್ತಾ ಕಟ್ಟಡದಿಂದ ಹೊರಗೆ ಬಂದೆ.

ಚಿಕ್ಕ ರಾಷ್ಟ್ರದ ದೊಡ್ಡ ಸಾಧನೆಯ ಹಾದಿ ಎಷ್ಟು ವ್ಯವಸ್ಥಿತವಾಗಿದೆ ಎಂಬುದನ್ನು ಇದುವರೆಗೆ ತಿಳಿಸಿದೆ. ಆದರೆ ಅಲ್ಲಿಯೂ ಜಪಾನಿನಂತಹದೇ ಸಮಸ್ಯೆ. ಅಂದರೆ ಕುಸಿಯುತ್ತಿರುವ ಉತ್ಪಾದನೆ. ಸಂಸ್ಥೆಯ ಅಧ್ಯಕ್ಷರು ಈ ಬಗ್ಗೆ ಪ್ರಸ್ತಾಪಿಸುತ್ತಿದ್ದಾಗ ಅವರ ಮುಖದಲ್ಲಿ "ನೋವು" ಸ್ಪಷ್ಟವಾಗಿ ಕಾಣುತ್ತಿತ್ತು. ಒಂದು ದಶಕದ ಹಿಂದೆ ೫ ಲಕ್ಷ ಬೆಳೆಗಾರರಿದ್ದಂತೆ. ಅವರ ಸಂಖ್ಯೆ ೯೦,೦೦೦ಕ್ಕೆ ಇಳಿದಿದೆ. ಜಪಾನ್ ಮತ್ತು ಕೊರಿಯಾಗಳಿಂದ ಮಾರ್ಗದರ್ಶನ ಬಯಸುವ ನಾವು ಆ ದೇಶದಲ್ಲಿ ಆಗಿರುವ ಇಳಿಮುಖದ ಬದಲಾವಣೆಯನ್ನು ಕಂಡೂ ಕಾಣದಂತೆ ಇರಬಾರದಲ್ಲವೆ ಎಂದುಕೊಂಡೆ. ಹೆಚ್ಚು ರೇಷ್ಮೆಯ ಅಂಶವಿರುವ ತಳಿಗಳ ಸಾಕಣೆಗೆ ಆದ್ಯತೆ ನೀಡಿದುದು, ಕೈಗಾರಿಕಗಳೇ ಮೈಲುಗೈ ಆಗಿ ಕೃಷಿ ಉತ್ಪನ್ನಗಳು ಲಾಭ ಮಾಡಿಕೊಡುವುದರಲ್ಲಿ ಮುಗ್ಗರಿಸಿದುದು- ರೇಷ್ಮೆ ಉದ್ಯಮವು ತೆರೆಮರೆಗೆ ಸರಿಯಲು ಆರಂಭಿಸಿತು ಎಂದು ನನಗೆ ತಿಳಿಸಲಾಯಿತು.

ರೇಷ್ಮೆ ಕೃಷಿಯು ಎಷ್ಟು ನಾಜೂಕಿನದೋ ಅದೇ ರೀತಿ ಉದ್ಯಮದ ಬೆಳವಣಿಗೆಯಲ್ಲಿ ತೆಗೆದುಕೊಳ್ಳಬೇಕಾದ ಕ್ರಮವೂ ಸೂಕ್ಷ್ಮವಾದುದು ಎಂದು ತಿಳಿದು ಹೆಜ್ಜೆ ಇಡಬೇಕೆಂದು ಈ ಪ್ರವಾಸದಿಂದ ತಿಳಿಯುವಂತಾಯಿತು.

ಸಿಯೋಲ್ ನಗರದಿಂದ "ಸುವೆಲ್" ಗೆ ಪ್ರಯಾಣ. ಇಲ್ಲಿ ಕೊರಿಯಾ ಸಿರಿಕಲ್ಚರ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ಗೆ ಭೇಟಿಯಿತ್ತು. ಅಧಿಕಾರಿಗಳೊಡನೆ ಚರ್ಚೆ ನಡೆಸಿದೆ. ಇಲ್ಲಿ choucoರವರು ಹಾಕಿರುವ ಸೈತ್ಯಾಗಾರವನ್ನು ನೋಡಿದೆ. ಇಲ್ಲಿಯ ಅಧಿಕಾರಿಗಳು ಹಿಪ್ಪು ನೇರಳೆ ತೋಟಕ್ಕೆ ಕರೆದೊಯ್ದರು. ಬಿತ್ತನೆ ಕಡ್ಡಿಗಾಗಿ ಇವರು ಬೆಳೆಸಿರುವ ದೊಡ್ಡ ದೊಡ್ಡ ಹಿಪ್ಪುನೇರಳೆ ಮರಗಳನ್ನು ನೋಡಿದೆ. ಕೃತಕ ಆಹಾರದಿಂದ ಪ್ರಾಯೋಗಿಕ ಹುಳು ಸಾಕುವ ವಿಧಾನವನ್ನು ನನಗೆ ಅಧಿಕಾರಿಗಳು ತೋರಿಸಿದರು. ಇಲ್ಲಿಂದ ಒಬ್ಬ ಬೆಳೆಗಾರನ ಮನೆಗೆ ಭೇಟಿಕೊಟ್ಟು ಕಿಮ್ ನದಿಯ ದಡದಲ್ಲಿ ಹೋಗುವ ಹೆದ್ದಾರಿಯಲ್ಲಿ "ತೇಗು" ನಗರಕ್ಕೆ ಪ್ರಯಾಣ ಮಾಡಿದೆವು. ಈ ದಿನದ ಚರ್ಚೆಯ ಸಮಯದಲ್ಲಿ ಕೊರಿಯಾದ ರೇಷ್ಮೆ ಉತ್ಪತ್ತಿ ೩೧,೧೭೮ ಮೆಟ್ರಿಕ್ ಟನ್‌ನಿಂದ (೧೯೭೪ ರಲ್ಲಿ) ೧೦,೦೦೦ ಮೆಟ್ರಿಕ್ ಟನ್ನಿಗೆ ಇಳಿದಿರುವುದು ತಿಳಿದುಬಂತು.

ಈ ದೇಶದಲ್ಲಿ ರೇಷ್ಮೆ ಇಲಾಖೆ, ಗ್ರಾಮೀಣ ಅಭಿವೃದ್ಧಿ ಇಲಾಖೆಯಡಿಯಲ್ಲಿ ಬರುತ್ತದೆ. ಇಲಾಖೆಯಲ್ಲಿ ಎರಡು ಮುಖ್ಯ ವಿಭಾಗಗಳಿವೆ. (೧) ವಿಸ್ತರಣೆ ಮತ್ತು(೨) ಸಂಶೋಧನೆ. ಸಿರಿಕಲ್ಚರ್ ಎಕ್ಸ್‌ಪೆರಿಮೆಂಟಲ್ ಸ್ಟೇಷನ್, ವಿಸ್ತರಣಾ ಮತ್ತು ಸಂಶೋಧನಾ

ಚಟುವಟಿಕೆಗಳನ್ನು ನೋಡಿಕೊಳ್ಳುತ್ತದೆ. ಈ ಸಂಸ್ಥೆಗೆ ಸೇರಿದಂತೆ ೮ ಪ್ರಾದೇಶಿಕ ಸಂಸ್ಥೆಗಳಿವೆ ಎಂದು ಸಂಸ್ಥೆಯ ಸಂಚಾಲಕರು ತಿಳಿಸಿದರು. ಅಲ್ಲಿ ರೇಷ್ಮೆ ಮೊಟ್ಟೆಗಳು, ತಳಿಗಳು ಮತ್ತು ಹಿಪ್ಪುನೇರಳೆ ಬಗ್ಗೆ ಸಂಶೋಧನೆ ನಡೆಸಲಾಗುತ್ತದೆ. ಈ ಸಂಸ್ಥೆಯಲ್ಲಿ ರೇಷ್ಮೆ ಹುಳುಗಳ ತಳಿ ವೃದ್ಧಿ ಮಾಡುವುದು, ಹುಳುಸಾಕಣೆ, ಹಿಪ್ಪುನೇರಳೆ ಬೇಸಾಯ, ನೇಯ್ಗೆ, ರೋಗಗಳು ಮತ್ತು ಕೀಟಗಳ ಬಗ್ಗೆ ಸಂಶೋಧನೆ ನಡೆಸಲಾಗುತ್ತಿದೆ. ಬೆಳೆಗಳನ್ನು ನೋಡಿಕೊಳ್ಳಲು ಸ್ಥಳೀಯ ರೇಷ್ಮೆ ವಿಸ್ತರಣಾಧಿಕಾರಿಗಳು ಇರುತ್ತಾರೆ ಎಂದು ನನಗೆ ಗೊತ್ತಾಯಿತು. ಅವರ ಮೇಲೆ ವಲಯಾಧಿಕಾರಿಗಳಿರುತ್ತಾರೆ. ರೇಷ್ಮೆ ಮೊಟ್ಟೆ ಉತ್ಪಾದನೆ ಬಗ್ಗೆ ಹೆಚ್ಚಿನ ಗಮನ ಹಾಗೂ ಶ್ರದ್ಧೆ ವಹಿಸಿದ್ದಾರೆ. ಅಧಿಕಾರಿಗಳ ಮಾಹಿತಿಯಂತೆ ಒಂದು ಚಿಟ್ಟೆ ಇಟ್ಟ ಮೊಟ್ಟೆಗಳು ಸರಾಸರಿ ೫೦೦ ಮೀರುತ್ತವೆ ಮತ್ತು ಇಂತಹ ೪೪ ಮೊಟ್ಟೆಗಳು ೪೦ ಕೆ.ಜಿ. ಗೂಡು ಉತ್ಪಾದಿಸುತ್ತದೆ. ಹುಳು ಸಾಯುವಿಕೆ ಶೇಕಡಾ ೧೦ ರಷ್ಟಿದೆ ಎಂದು ತಿಳಿಸಲಾಯಿತು. ಈ ದೇಶದವರಿಗೆ ಮೊಟ್ಟೆ ಸರಬರಾಜಿನ ಬಗ್ಗೆ ಗೊತ್ತಿಲ್ಲ. ರೈತರಿಗೆ ಹುಳುಗಳನ್ನು ಮಾತ್ರ ಸರಬರಾಜು ಮಾಡಲಾಗುತ್ತಿದೆ. ಶೇಕಡಾ ೬೦ರಷ್ಟು ಹುಳುಗಳು ಚಾಕಿ ಸಾಕಾಣಿಕೆ ಕೇಂದ್ರಗಳಿಂದ ಸರಬರಾಜಾಗುತ್ತಿದ್ದು, ಶೇಕಡಾ ೪೦ರಷ್ಟು ರೈತರಿಗೆ ಬಿತ್ತನೆ ಕೋಠಿಗಳಿಂದ ಚಾಕಿಯಾದ ಹುಳುಗಳನ್ನು ಕೊಡಲಾಗುತ್ತಿದೆ. ಚೆನ್ನಾಗಿ ಸ್ಥಾಪನೆಯಾಗಿರುವ ಖಾಸಗಿ ಸಂಸ್ಥೆಗಳು ರೈತರಿಗೆ ಬೇಕಾದ ರೇಷ್ಮೆ ಮೊಟ್ಟೆಗಳನ್ನು ಉತ್ಪಾದಿಸುತ್ತವೆ. ರೈತರಿಗೆ ಚಾಕಿ ಹುಳುಗಳನ್ನು ಸರಬರಾಜು ಮಾಡಲು ಸ್ಥಳೀಯ ಸರ್ಕಾರ ವ್ಯವಸ್ಥೆ ಮಾಡುತ್ತದೆ. ಗೂಡುಗಳನ್ನು ಮಾರುಕಟ್ಟೆಗೆ ತಂದಾಗ ಗೂಡುಗಳ ಗುಣಮಟ್ಟದ ಆಧಾರದ ಮೇಲೆ ಸರ್ಕಾರ ಬೆಲೆಯನ್ನು ನಿಗದಿಪಡಿಸುತ್ತದೆ. ಅಧಿಕೃತ ಮಾರುಕಟ್ಟೆಗಳಿಗೆ ಮಾತ್ರ ಗೂಡುಗಳನ್ನು ಒಯ್ಯಬೇಕೆಂದು ರೈತರಿಗೆ ಕಡ್ಡಾಯಪಡಿಸಲಾಗಿದೆ. ಆದರೆ ನೂಲು ಬಿಚ್ಚುವವರು ರೇಷ್ಮೆಯನ್ನು ಅವರಿಗೆ ಇಷ್ಟಬಂದಲ್ಲಿ ಮಾರಬಹುದು.

ಕೊರಿಯಾದಲ್ಲೂ ಸಹ ರೇಷ್ಮೆ ಉತ್ಪಾದನೆಯಲ್ಲಿ ಗಣನೀಯವಾಗಿ ಇಳಿಮುಖವಾಗಿದೆ ಎಂದು ಈಗಾಗಲೇ ಹೇಳಿದೆ. ಈ ಇಳಿಮುಖದ ಕಾರಣಗಳನ್ನು ತಜ್ಞರು, ಸಂಶೋಧಕರು ಮತ್ತು ಸಂಸ್ಥೆಯ ಸಂಚಾಲಕರು ವಿಶ್ಲೇಷಿಸುತ್ತಿದ್ದಾರೆ. ಅವರ ಹೇಳಿಕೆಯಂತೆ ಸರ್ಕಾರದ ಕಾರ್ಯನೀತಿ ಅಂದರೆ ಕಚ್ಚಾರೇಷ್ಮೆಯ ಆಮದು, ಕಾಯಿಗೂಡು, ಔದ್ಯಮೀಕರಣ ಕಡಿಮೆ ಪ್ರತಿಫಲದ ಬೆಲೆ, ಹೆಚ್ಚಿನ ರೇಷ್ಮೆ ಅಂಶವುಳ್ಳ ತಳಿಗಳ ಪರಿಚಯ ಮಾಡಿಸದುದು, ರೇಷ್ಮೆ ಉತ್ಪಾದನೆ ಇಳಿಮುಖದ ಕಾರಣಗಳು ಎಂದು ತಿಳಿಸಲಾಯಿತು. ರೇಷ್ಮೆ ಅಭಿವೃದ್ಧಿಗಾಗಿ ಯೋಜನೆ ಹಾಗೂ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವಾಗ ಅಭಿವೃದ್ಧಿ ಅಧಿಕಾರಿಗಳು ಈ ಅಂಶಗಳನ್ನು ಗಮನದಲ್ಲಿಡಬೇಕು. ಜಪಾನ್ ಮತ್ತು ಕೊರಿಯಾ ದೇಶಗಳಲ್ಲಿ ರೇಷ್ಮೆ ಉತ್ಪಾದನೆಯಲ್ಲಿ ಇಳಿಮುಖದ ಕಾರಣಗಳು ಹೆಚ್ಚು - ಕಡಿಮೆ ಒಂದೇ ತೆರನಾಗಿವೆ ಎಂದು ನನ್ನ ಅನಿಸಿಕೆ. ಆ ಪರಿಸ್ಥಿತಿ ನಮ್ಮ ದೇಶದಲ್ಲೂ ಬರಬಾರದೆಂದು ಆಶಿಸುತ್ತೇನೆ. (ಈ ದೇಶದಲ್ಲೂ ಸಹ ಅದೇ ಅಂಶಗಳು ರೇಷ್ಮೆ ಉದ್ಯಮದ ಮೇಲೆ ಪ್ರಭಾವ ಬೀರುತ್ತಿವೆ).

ಕೊರಿಯಾ ದೇಶದಲ್ಲಿ ರೇಷ್ಮೆಯ ಅಭಿವದ್ಧಿಗೆ ಈ ಸಂಸ್ಥೆಯ ಕಾಣಿಕೆ ಉತ್ಕೃಷ್ಟವಾದುದು. ೧೯೧೪ ರಲ್ಲಿ ಮೂಲತಃ ಈ ಸಂಸ್ಥೆ ರೇಷ್ಮೆ ಮೊಟ್ಟೆ ಬಿತ್ತನೆ ಕೇಂದ್ರವಾಗಿ ಪ್ರಾರಂಭವಾಗಿದ್ದು

೧೯೧೭ ರಲ್ಲಿ ಸಿರಿಕಲ್ಚರ್ ಎಕ್ಸ್‌ಪೆರಿಮೆಂಟ್ ಸ್ಟೇಷನ್ ಎಂದು ಮಾರ್ಪಾಟಾಯಿತು. ೧೯೧೪ ರಿಂದ ೧೯೨೪ರವರೆವಿಗೆ ಸಂಶೋಧನಾ ವಿಭಾಗ, ಗ್ರಾಮೀಣ ಸಂಶೋಧನಾ ಕೇಂದ್ರಗಳು ಎರಡು ವಿಸ್ತರಣಾ ವಿಭಾಗಗಳ ಸ್ಥಾಪನೆ ಮೂಲ ಸಂಸ್ಥೆಯ ವಿಸ್ತರಣೆಯಿಂದಾಗಿ ಉಂಟಾಯಿತು. ಈ ಸಂಸ್ಥೆಯಲ್ಲಿ ರೋಗಗಳಿಗೆ ಪ್ರತಿರೋಧಿಸುವಂಥ ರೇಷ್ಮೆ ಹುಳುಗಳ ತಳಿಯನ್ನು ವೃದ್ಧಿ ಮಾಡುವುದು, ಹುಳು ಸಾಕಣೆಯ ರೀತಿಯಲ್ಲಿ ಸುಧಾರಣೆ. ಹಿಪ್ಪುನೇರಳೆ ಬೇಸಾಯದಲ್ಲಿ ಹೊಸ ಪದ್ಧತಿ, ನೂಲು ಬಿಚ್ಚಾಣಿಕೆಯಲ್ಲಿ ಸುಧಾರಣೆ. ಹಿಪ್ಪುನೇರಳೆ ಗಿಡಕ್ಕೆ ಹಾಗೂ ರೇಷ್ಮೆ ಹುಳುಗಳಿಗೆ ರೋಗಗಳು ಮತ್ತು ಕೀಟಗಳ ಹತೋಟಿ ಬಗ್ಗೆ ಗಮನಹರಿಸಲಾಗಿದೆ.

ಪ್ರತಿಯೊಂದು ಸಂಶೋಧನ ಶಾಖೆಯ ಅಧಿಕಾರಿಗಳು ರಾಷ್ಟ್ರೀಯ ಸಂಶೋಧನಾ ಬಗ್ಗೆ ವಿಸ್ತಾರವಾಗಿ ನನಗೆ ವಿವರಿಸಿದರು.

ಈ ಸಂಶೋಧನಾ ಕೇಂದ್ರಕ್ಕೆ ಸಮೃದ್ಧವಾದ ಒಂದು ಹಿಪ್ಪುನೇರಳೆ ತೋಟವೂ ಸೇರಿದಂತೆ ಚೆನ್ನಾಗಿ ಸ್ಥಾಪಿಸಲಾಗಿರುವ ಪ್ರಯೋಗಾಲಯ, ಹವಾನಿಯಂತ್ರಿತ ಹುಳು ಸಾಕಣೆಯ ಕೊಠಡಿ ಮತ್ತು ನೂಲು ಬಿಚ್ಚುವ ಕೊಠಡಿಗಳನ್ನು ಹೊಂದಿಸಲಾಗಿದೆ. ರೇಷ್ಮೆ ಹುಳುಗಳ ತಳಿ ವೃದ್ಧಿ, ಹುಳುಗಳ ಸಾಕಣೆಯ ಪದ್ಧತಿ, ರೇಷ್ಮೆ ಹುಳುಗಳ ಮನೋವೃತ್ತಿ ಮತ್ತು ರೇಷ್ಮೆ ಹುಳು ಸಾಕಣೆಯ ಆರ್ಥಿಕ ವಿಶ್ಲೇಷಣೆ ಇವುಗಳ ಮೇಲೆ ಅವರು ನಡೆಸಿದ ಸಂಶೋಧನಾ ಕಾರ್ಯದ ಬಗ್ಗೆ ನಾನು ಬಹಳ ಪ್ರಭಾವಿತನಾದೆ. ಕಿರಿಯ ಅಧಿಕಾರಿಯ ಹೆಸರನ್ನು ನಾನು ಮರೆತರೂ ಸಹ ಕೆಲಸದಲ್ಲಿ ಆತನಿಗಿದ್ದ ಶ್ರದ್ಧಾಭಾವನೆ ನನ್ನ ಮನಸ್ಸಿನಲ್ಲಿ ಹಸಿರಾಗೇ ಉಳಿದಿದೆ. ಪಾಕಿಸ್ತಾನದಲ್ಲಿ ರೇಷ್ಮೆ ಕೃಷಿಯ ಸ್ಥಾಪನೆಗಾಗಿ ಅಲ್ಲಿನ ಅಧಿಕಾರಿಗಳಿಗೆ ಸಹಾಯ ಮಾಡಲು ಈ ಅಧಿಕಾರಿಯನ್ನು ಪಾಕಿಸ್ತಾನಕ್ಕೆ ಕಳುಹಿಸಿಕೊಡುವುದಾಗಿ ನನಗೆ ತಿಳಿಯಿತು. ಈ ಸಂಸ್ಥೆಯಲ್ಲಿ ನನ್ನ ಗಮನಕ್ಕೆ ತರಲಾದ ಇನ್ನೊಂದು ವಿಷಯವೆಂದರೆ ಕೃತಕ ಆಹಾರದಿಂದ ಹುಳು ಸಾಕಣೆ ಮಾಡುವುದು. ಹೆಚ್ಚಿನ ರೈತರನ್ನು ಆಕರ್ಷಿಸುವಂತೆ ಸುಲಭ ಪದ್ಧತಿಯ ಕೃತಕ ಆಹಾರವನ್ನು ತಯಾರಿಸುವಲ್ಲಿ ಯಶಸ್ವಿಯಾಗಿದ್ದಾರೆ. ಹಿಪ್ಪುನೇರಳೆ ಅವರು ಸಂಗ್ರಹಣೆ ಮಾಡಿರುವ ಹಿಪ್ಪುನೇರಳೆ ವನ್ಯಜಾತಿಗಳ ಮುಖ್ಯ ಗುಣಗಳನ್ನು ನನಗೆ ವಿವರಿಸಿದರು. ಹಿಪ್ಪುನೇರಳೆ ತಳಿವೃದ್ಧಿ ಬೇಸಾಯ ಪದ್ಧತಿ, ಹಿಪ್ಪುನೇರಳೆ ತೋಟದ ಮಣ್ಣು ಮತ್ತು ಅದರ ಫಲಶಕ್ತಿ ವೃದ್ಧಿಸುವುದು, ಹಿಪ್ಪುನೇರಳೆ ತಳಿಗಳ ಸ್ವಭಾವ ಸಂಶೋಧನೆಯ ಮುಖ್ಯಅಂಶಗಳಾಗಿವೆ. ಇಳಿಜಾರಿನ ಪ್ರದೇಶದ ಹಿಪ್ಪುನೇರಳೆ ಬೇಸಾಯಕ್ಕೆ ಮಣ್ಣಿನ ವಿಶ್ಲೇಷಣೆಯ ಬಗ್ಗೆ ಈ ಸಂಸ್ಥೆ ಸಹಾಯ ಮಾಡಿದೆ.

ರೇಷ್ಮೆ ನೂಲು ಬಿಚ್ಚುವ ಸಂಶೋಧನಾ ಕಾರ್ಯದಲ್ಲೂ ಸಹ ಈ ಸಂಸ್ಥೆ ಹಿಂದೆ ಬಿದ್ದಿಲ್ಲ. ಸ್ವಯಂಚಾಲಿತ ನೂಲು ಬಿಚ್ಚುವ ಯಂತ್ರಗಳಿಗೆ ಅಗತ್ಯವಾದ ಉನ್ನತ ಯಂತ್ರ ಕಲಾ ಜ್ಞಾನವನ್ನು ಸಹ ಒದಗಿಸುವಷ್ಟು ಯಶಸ್ವಿಯಾಗಿದೆ.

ನೂಲು ಬಿಚ್ಚಾಣಿಕೆಯಲ್ಲಿ ಅಂತರ್ಜಲ ಪರೀಕ್ಷೆ ನಾನು ಗಮನಿಸಿದ ಒಂದು ಅಪೂರ್ವ ಸಂಗತಿ. ಗೂಡು ಉತ್ಪಾದನೆ, ನೂಲು ಬಿಚ್ಚುವ ಪದ್ಧತಿಯಲ್ಲಿ ಸುಧಾರಣೆ, ಗೂಡುಗಳ ಸಮರ್ಥನಾ ಪ್ರಯೋಗ ಮತ್ತು ರೇಷ್ಮೆ ಎಳೆಯ ಭೌತಿಕ ಮತ್ತು ರಾಸಾಯನಿಕ ಗುಣಗಳ

ಬಗ್ಗೆ ನಡೆಸಿರುವ ಸಂಶೋಧನಾ ಕಾರ್ಯ ಗಮನಾರ್ಹವಾಗಿದೆ. ಗೂಡಿನ ಗುಣಮಟ್ಟವನ್ನು ಸಮರ್ಥಿಸುವ ಯಾವ ಪದ್ಧತಿಯನ್ನೂ ನಮ್ಮ ಭಾರತ ದೇಶದಲ್ಲಿ ರೂಪಿಸಲಾಗಲಿಲ್ಲವೆಂದು ಇಲ್ಲಿ ತಿಳಿಸಲಿಚ್ಛಿಸುತ್ತೇನೆ. ಈ ಸಂಸ್ಥೆ ಇದಕ್ಕಾಗಿಯೇ ಒಂದು ಯಂತ್ರವನ್ನು ಸೃಷ್ಟಿಸುವಲ್ಲಿ ಯಶಸ್ವಿಯಾಗಿದ್ದು, ಸಂಬಂಧಪಟ್ಟ ಕೆಲಸಗಾರರಿಗೆ ಗೂಡಿನ ಗುಣಮಟ್ಟವನ್ನು ಸಮರ್ಥಿಸಿ ಬೆಲೆಯನ್ನು ನಿಗದಿಗೊಳಿಸಲು ಸಹಾಯವಾಗಿದೆ. ರೇಷ್ಮೆ ಬಟ್ಟೆ ಮತ್ತು ಸಂಯುಕ್ತ ಬಟ್ಟೆ ತಯಾರಿಕೆಯಲ್ಲೂ ಸಂಶೋಧನೆ ನಡೆಸಿದ್ದಾರೆ.

ಈ ಸಂಶೋಧನೆಯ ಇನ್ನೊಂದು ಮುಖ್ಯ ಅಂಗವೆಂದರೆ ಹಿಪ್ಪುನೇರಳೆ ಗಿಡಕ್ಕೆ ಮತ್ತು ರೇಷ್ಮೆ ಹುಳುಗಳಿಗೆ ತಗಲುವ ರೋಗಗಳು ಮತ್ತು ಕೀಟಗಳ ಹತೋಟಿ ಗೂಡುಗಳನ್ನು ಹಾಳು ಮಾಡುವಂಥ ಕೀಟಗಳು, ತಾಯಿ ಚಿಟ್ಟೆ ಪರೀಕ್ಷೆ ಮತ್ತು ಗಂಟುರೋಗಗಳ ಬಗ್ಗೆ ನಿಗಾ ವಹಿಸಿದ್ದಾರೆ. ಈ ಸಂಸ್ಥೆಯ ಕೊಡುಗೆಯಿಂದ ರೈತರಿಗೆ (ಪ್ಲಾಚರಿ) ಸಪ್ಪೆ, ಹಾಲು (ಗ್ರಾಸರಿ) ಗಂಟು (ಪೆಬ್ರಿನ್) ಮತ್ತು ಸುಣ್ಣ ಕಟ್ಟು (ಮಸ್ಕಾರ್ಡಿನ್) ರೋಗಗಳನ್ನು ಹತೋಟಿಯಲ್ಲಿಟ್ಟುಕೊಳ್ಳಲು ಹೆಚ್ಚಿನ ಮಟ್ಟಿಗೆ ಸಹಾಯ ಮಾಡಿದೆ. ರೈತರಿಗೆ ರೋಗರಹಿತ ಮೊಟ್ಟೆಗಳು, ಹುಳುಗಳ ಸರಬರಾಜು ರೇಷ್ಮೆ ಉದ್ಯಮದ ಬಹಳ ಮುಖ್ಯವಾದ ಸಂಗತಿಯೆಂದು ನಾನು ನಂಬಿರುವವನಾದ್ದರಿಂದ ಹುಳುಗಳ ರೋಗಗಳ ಹತೋಟಿಯ ಈ ಪದ್ಧತಿ ನನ್ನ ಮನಸ್ಸಿಗೆ ಹಿಡಿಸಿತು.

"ಸುವಲ್"ನಿಂದ ತೇಗು(TEGU) ಗೆ ಹೋಗುವ ದಾರಿಯಲ್ಲಿ ನಮ್ಮ ಪ್ರವಾಸದಲ್ಲಿ ಮೊದಲ ಬಾರಿಗೆ ಕಾರಿನ ಚಕ್ರ ಪಂಕ್ಚರ್ ಆಯಿತು. ಅತ್ಯಂತ ಹಳ್ಳಿಗಾಡಿನ ಪ್ರದೇಶವನ್ನು ನೋಡುವ ಉದ್ದೇಶದಿಂದ ಉತ್ತಮವಾಗಿಲ್ಲದ ರಸ್ತೆಯಲ್ಲಿ ಪ್ರಯಾಣ ಮಾಡಿದ್ದರಿಂದ ಇದು ನಡೆಯಿತೆಂದು ಕಾಣುತ್ತದೆ. ಬೇರೆ ಚಕ್ರವನ್ನು ಅಳವಡಿಸುವವರೆಗೆ ಪಕ್ಕದಲ್ಲಿದ್ದ ಒಬ್ಬ ರೈತನ ಮನೆಯ ಹತ್ತಿರ ನಾನು ಸಮಯ ಕಳೆದೆ. ಆ ಮನೆಯ ಮಕ್ಕಳು ಮರದ ಮೇಲೆ ಕುಳಿತು ಆ ಮರಕ್ಕೆ ಒಂದು ರೇಡಿಯೋ ನೇತು ಹಾಕಿಕೊಂಡು ಅದರಿಂದ ಹೊರಡುವ ಹಾಡಿನ ಜೊತೆ ಈ ಮಕ್ಕಳೂ ಹಾಡುತ್ತಿದ್ದರು. ದಾರಿಯಲ್ಲಿ ಹೋಗುವಾಗ ಇದ್ದಕ್ಕಿದ್ದಂತೆ ಕನ್ನಡದ ಹಾಡೊಂದು ನನ್ನ ಕಿವಿಗೆ ಬಿತ್ತು! ಕೊರಿಯಾ ರಾಷ್ಟ್ರದ ಈ ಹಳ್ಳಿಗಾಡು ಪ್ರದೇಶದಲ್ಲಿ ಕನ್ನಡದ ಹಾಡನ್ನು ಕೇಳಿ ನನಗೆ ಅಚ್ಚರಿಯಾಯ್ತು.

*"ಕೊಡು ಕೊಡು ಬೇರೇನೂ ಕಾಣೆ*
*ಪ್ರೀತಿಯಿಲ್ಲದೆ ಕಾಣದ ಅನುಭವ*
*ಪಡೆದೆನಿಂದು ನಿನ್ನಿಂದ."*

- ಎನ್ನುವ ಈ ಹಾಡನ್ನು ಕೇಳಿ ಪೆಚ್ಚಾಗಿ ಸುತ್ತಲೂ ನಾನು ನೋಡುತ್ತಿರುವಾಗ ವಾಹನ ಚಾಲಕರೂ ಆಗಿದ್ದ ಶ್ರೀ ಗೆಳೆಯ ಶ್ರೀ ಚುಂಗ್‌ರವರು ಹೇಳಿದರು, ಈ ಹಾಡು ಕಾರಿನಲ್ಲಿ ಹಾಕಿರುವ ಕ್ಯಾಸೆಟ್ಟಿನಿಂದ ಬರುತ್ತಿದೆಯೆಂದು ಕೆ. ಎಸ್. ಐ. ಸಿ. ಕನ್ಸಲ್ಟೆಂಟ್ ಆಗಿ ಅವರು ಬೆಂಗಳೂರಿನಲ್ಲಿ ಕೆಲಸ ಮಾಡುವಾಗ ಈ ಕನ್ನಡ ಹಾಡಿನ ಕ್ಯಾಸೆಟ್ಟುಗಳನ್ನು ತಂದಿದ್ದರಂತೆ. ನನಗೆ ಆಶ್ಚರ್ಯವಾಗಲೆಂದು ನನಗೆ ತಿಳಿಸದೆಯೇ ಈ ಹಾಡನ್ನು ಹಾಕಿದ್ದರು.

ಕೊರಿಯಾದಲ್ಲಿಯೂ ಕನ್ನಡದ ಹಾಡನ್ನು ಕೇಳಲು ಸಾಧ್ಯವಾಯಿತು. ಆದರೆ "ಉಪ್ಪಿನ ಸಾರು ಮತ್ತು ಮುದ್ದೆಯನ್ನು" ಯಾರೂ ಒದಗಿಸಲಾರರು ಎನ್ನಿಸಿತ್ತು ನನ್ನ ಮನಸ್ಸಿನಲ್ಲಿ. ಅತ್ಯಂತ ದೂರ ಪ್ರವಾಸ ಮಾಡಬೇಕಾದ್ದರಿಂದ ಒಬ್ಬ ಚಾಲಕನನ್ನು ಶ್ರೀ ಚುಂಗ್‌ರವರು ಕರೆ ತಂದಿದ್ದರು. ಆದರೆ ಆ ಕಾರು ಚಾಲಕನಿಂದ ಓಡಿಸಿಕೊಳ್ಳಲು ತಿರಸ್ಕರಿಸಿತು. ಕೊನೆಗೆ ಚುಂಗ್‌ರವರೇ ಚಾಲಕರಾದರು. ಜಪಾನ್ ಮತ್ತು ಕೊರಿಯಾ ಎರಡೂ ರಾಷ್ಟ್ರಗಳಲ್ಲಿಯೂ ರಸ್ತೆಗಳಲ್ಲಿ ಹಾದು ಹೋಗುವಾಗ ಅತ್ಯಂತ ಹೆಚ್ಚು ಹಣವನ್ನು ಸರ್ಕಾರಕ್ಕೆ ಕೊಡಬೇಕಾಗಿದೆ. ಬಹುಶಃ ಇದರಿಂದಲೇ ಈ ದೇಶದಲ್ಲಿ ರಸ್ತೆಗಳನ್ನು ಉತ್ತಮವಾಗಿ ಮಾಡಲು ಹಣ ಖರ್ಚು ಮಾಡಲು ಸಾಧ್ಯವಾಗಿದೆ. ಜಪಾನಿನಲ್ಲಿ ಒಂದು ವರ್ಷಕ್ಕೆ ಒಂದು ಕಾರಿಗೆ ೨೦೦ ಡಾಲರ್ ತೆರಿಗೆ ಕೊಡಬೇಕಾದರೆ, ಕೊರಿಯಾದಲ್ಲಿ ೧,೩೦೦ ಡಾಲರ್ ತೆರಿಗೆ ಕೊಡಬೇಕಾಗಿದೆ. ಕೊರಿಯಾ ಸರ್ಕಾರ ಕಾರಿನ ಸಂಖ್ಯೆಗಳನ್ನು ಹೆಚ್ಚಿಸಲು ಇಚ್ಛೆಪಡುವುದಿಲ್ಲ. ಈ ರಾಷ್ಟ್ರದಲ್ಲಿ ಸಾರ್ವಜನಿಕ ಸವಲತ್ತುಗಳು ಬಹಳ ಅಗ್ಗ. ಕೊರಿಯಾ ರಾಷ್ಟ್ರದ ರಸ್ತೆಗಳಲ್ಲಿ ಪ್ರಯಾಣ ಮಾಡುವಾಗ ೧-೨ ಅಡಿ ಎತ್ತರದಲ್ಲಿ ಇಡೀ ಜಮೀನಿಗೆ ಹುಲ್ಲು ಹೊದಿಕೆಗಳಿಂದ ಹೊದಿಸಿರುವ ವಿಚಿತ್ರವಾದ ವ್ಯವಸಾಯದ ಪದ್ಧತಿಯನ್ನು ಕಾಣಬಹುದು. ಇಲ್ಲಿ "ಜೀನ್‌ಸೆಂಗ್" ಎನ್ನುವ ಬೇರನ್ನು ಈ ರೀತಿಯಲ್ಲಿ ಬೆಳೆಯುತ್ತಾರೆ. ಅದಕ್ಕೆ ಹುಲ್ಲಿನಿಂದ ಈ ಚಂದವಾದ ನೆರಳನ್ನು ಮಾಡಿದ್ದಾರೆ. ಸ್ವಲ್ಪಮಟ್ಟಿಗೆ ಜಪಾನಿನಲ್ಲಿಯೂ ಇದನ್ನು ಬೆಳೆಯುತ್ತಾರೆ. ಈ ಜೀನ್‌ಸೆಂಗ್ ಬೇರಿನಿಂದ ಅನೇಕ ವಿಧವಾದ ಪಾನೀಯಗಳನ್ನು ತಯಾರು ಮಾಡುತ್ತಾರೆ ಮತ್ತು ಬಹಳ ಜನ ಇದನ್ನು ಉಪಯೋಗಿಸುತ್ತಾರೆಂದು ನನ್ನ ಪ್ರವಾಸದಲ್ಲಿ ತಿಳಿದುಬಂತು. ಅಂಗಡಿಗಳಲ್ಲಿ, ವಿಮಾನ ನಿಲ್ದಾಣದಲ್ಲಿ ಈ ಬೇರುಗಳನ್ನು ಪ್ರದರ್ಶಿಸಿರುವುದನ್ನು ನಾನು ನೋಡಿದೆ. ನನ್ನ ಜೊತೆಯಲ್ಲಿದ್ದ ಶ್ರೀ ಚುಂಗ್‌ರವರು ತಿಳಿಸಿದರು, ಕೆ. ಎಸ್.ಐ. ಸಿ. ಯಲ್ಲಿ ಮ್ಯಾನೇಜಿಂಗ್ ಡೈರೆಕ್ಟರ್ ಆಗಿದ್ದ ದಿವಂಗತ ಶ್ರೀ ದೇವಶ್ರೀರವರು ಈ ಜೀನ್‌ಸೆಂಗ್‌ನಿಂದ ಮಾಡಿದ ಪಾನೀಯಗಳನ್ನು ಅತಿಯಾಗಿ ಮೆಚ್ಚುತ್ತಿದ್ದರು ಮತ್ತು ಉಪಯೋಗಿಸುತ್ತಿದ್ದರು ಎಂದು.

### ಶಿಸ್ತು - ಸ್ವಚ್ಛತೆ - ರಾಷ್ಟ್ರಾಭಿಮಾನ

ಇಲ್ಲಿಯೂ ಬಡವರಿದ್ದಾರೆ. ವಿಶೇಷವೆಂದರೆ ಈ ದೇಶದಲ್ಲಿಯೂ ಬೇರೆಯವರಿಗೆ ಹೋಲಿಸಿಕೊಂಡರೆ ರೈತನೇ ಬಡವ. ರಾಷ್ಟ್ರೀಯ ರೇಷ್ಮೆ ಸಂಶೋಧನಾ ಕೇಂದ್ರವಿರುವ ಸುವಲ್ ಪಟ್ಟಣದಿಂದ ಓಸೆನ್ ಹತ್ತಿರ ತ್ಯಾಗೂಡ್ ಹೆದ್ದಾರಿ ಸೇರಿದೆವು. ಖರಾಬಾಗಿದ್ದ (ಕೆಟ್ಟಿದ್ದ) ಚಕ್ರಕ್ಕೆ ಗಾಳಿ ತುಂಬಿಸಿಕೊಂಡು ಮುಂದೆ ಪ್ರಯಾಣ ಮಾಡಿದೆವು. ಆ ಚಕ್ರವನ್ನು ದುರಸ್ಥಿ ಮಾಡಿದ ವ್ಯಕ್ತಿ ಭಾವಚಿತ್ರ (ಛಾಯಾಚಿತ್ರ) ವನ್ನು ನಾನು ತೆಗೆಯಲು ಪ್ರಯತ್ನ ಪಟ್ಟಾಗ ಅದನ್ನು ತಡೆಯಲು ಪ್ರಯತ್ನಿಸಿದ ಒಬ್ಬ ಕೊರಿಯನ್. ಅಂದರೆ ಕೊರಿಯಾದಲ್ಲಿ ಬಡವರಿದ್ದಾರೆ ಎನ್ನುವುದನ್ನು ತೋರಿಸಿಕೊಳ್ಳಲು ಇವರಿಗೆ ಇಚ್ಛೆಯಿಲ್ಲ. ಜಪಾನಿನ ಹೆದ್ದಾರಿಗಳಂತೆ "ತ್ಯಾಗೂಡ್" ಹೆದ್ದಾರಿ ಹಸಿರು ಕಾಡು, ಎತ್ತರವಾದ ಬೆಟ್ಟ, ಹುಲುಸಾದ ಬೆಳೆ ಬೆಳೆದಿರುವ ಹೊಲಗಳ ಮಧ್ಯೆ ಹಾದು ಹೋಗುತ್ತದೆ. ಜೋಳ, ಆಲೂಗಡ್ಡೆ,

ಹಿಪ್ಪುನೇರಳೆ, ಜೀನ್‌ಸೆಂಗ್ ಬೇರು, ಕುಂಬಳಕಾಯಿ, ಹುರುಳಿಕಾಯಿ, ಬತ್ತದ ಬೆಳೆಗಳನ್ನು ದಾರಿಯಲ್ಲಿ ಕಾಣಬಹುದು. KEUM ನದಿಯ ದಡದಲ್ಲಿ ತ್ಯಾಗೂಡ್ ಹೆದ್ದಾರಿಯಲ್ಲಿ ಪ್ರಯಾಣ ಮಾಡುವಾಗ ಅತ್ಯಂತ ಆನಂದದಾಯಕವಾಗಿರುತ್ತದೆ. ರಸ್ತೆಯ ಬಲಬದಿಯಲ್ಲಿ ನದಿಗೆ ಹೊಂದಿಕೊಂಡಂತಿರುವ ಎತ್ತರವಾದ ಹೋಟೆಲ್ ಒಂದರಲ್ಲಿ ತಿಂಡಿ ತಿನ್ನಲು ಕಾರನ್ನು ನಿಲ್ಲಿಸಿದೆವು. ಹೋಟೆಲ್‌ನಿಂದ ಕುಳಿತು ನೋಡಿದಾಗ ಅಲ್ಲಿ ನಮಗೆ ಕಾಣುವುದು ಯಮ (YAMSA), ಕಿ ಮಿಡೋಡಿ (KI MIDODI), ಮಿಜೋರ್ (MIZOR)- ಅಂದರೆ ಬೆಟ್ಟಗಳು, ಮರದ ಹಸಿರು ಮತ್ತು ನೀರು . ಇಡೀ ದಿನದ ಪ್ರವಾಸದ ಆಯಾಸದಲ್ಲಿಯೇ ಕೊರಿಯಾದ ದಕ್ಷಿಣ ಪ್ರದೇಶದಲ್ಲಿರುವ ಅತ್ಯಂತ ದೊಡ್ಡ ನಗರವಾದ 'ತೇಗು' ನಗರವನ್ನು ರಾತ್ರಿ ಸುಮಾರು ೯-೦೦ ಗಂಟೆಗೆ ತಲುಪಿದೆವು. ನಗರದ ಪ್ರತಿಷ್ಠಿತ ಹೋಟೆಲ್ ಕುಮಾಹೋ ಹೋಟೆಲ್‌ನ ೧೪೧೨ ನೇ ಕೊಠಡಿಯಲ್ಲಿ ತಂಗಿದೆ. ಶ್ರೀ ಇಸೋಬೆ ಮತ್ತು ಕಿಮ್‌ರೊಡನೆ ಈ ದಿನ ಹಸೀ ತರಕಾರಿ ಮತ್ತು ಹಣ್ಣುಗಳನ್ನು ತಿನ್ನುವುದರಲ್ಲಿ ರಾತ್ರಿಯ ಊಟವನ್ನು ಮುಗಿಸಿದೆ.

ತಾರೀಖು ೯-೭-೮೬ ರಂದು "ತೇಗೂ" ನಗರದಿಂದ ಸಿಯೋಲ್‌ಗೆ ಪ್ರಯಾಣ ಹೊರಡುವ ಮೊದಲು ಈ ನಗರದಲ್ಲಿರುವ "Korea Eggs Producers Association" ನ ಅಧ್ಯಕ್ಷರಾದ ಶ್ರೀ ಕಿಮ್‌ರವರ ಜೊತೆ ಅವರ ಮನೆ ಹಾಗೂ ಮೊಟ್ಟೆಗಳ ಕೇಂದ್ರಕ್ಕೆ ಭೇಟಿಯಿತ್ತೆವು. ಮನೆ ಮಂದಿಯ ಜೊತೆ ಹಾಗೂ ಅಲ್ಲಿಯ ಕೆಲಸ ಮಾಡುವವರೊಡನೆ ಹಾರ್ದಿಕವಾಗಿ ಚರ್ಚಿಸಿ ಅಲ್ಲಿಂದ ಕಿಮ್‌ಚೂನ್‌ಗೆ ಪ್ರಯಾಣ ಮಾಡಿದೆವು. "ತೇಗು" ನಗರದ ಮೊಟ್ಟೆಗಳ ಕೇಂದ್ರದಲ್ಲಿ ಅಟ್ಟದ ಮೇಲೆ ಮಂಜುಗಡ್ಡೆಯನ್ನು ಶೇಖರಿಸಿ ಶೈತ್ಯಾಗಾರವನ್ನು (cold storage) ಮಾಡಿರುವುದನ್ನು ಗಮನಿಸಿದ್ದೆ. KIMCHUN ನಲ್ಲಿ ರೇಷ್ಮೆ ದಾರ ಹುರಿ ಮಾಡುವುದು, ಬಟ್ಟೆ ನೇಯುವುದು, ಹೀಗೆ ಪರಿಪೂರ್ಣ ವ್ಯವಸ್ಥೆಯಿರುವ HAN NEUUNG (ಹಾನ್ ನೀಯುಂಗ್) ಕಂಪನಿಗೆ ಭೇಟಿ ನೀಡಿದೆ. ಈ ಸಂಸ್ಥೆಯ ಅಧಿಕಾರಿಗಳೊಡನೆ ಚರ್ಚೆ ಮಾಡಿದೆವು. ೧೯೬೯ ರಲ್ಲಿ ಸ್ಥಾಪಿತವಾದ ಈ ಸಂಸ್ಥೆ ಕೊರಿಯಾದ ರೇಷ್ಮೆ ಉದ್ಯಮದಲ್ಲಿ ಅತ್ಯಂತ ಉತ್ತಮ ಸ್ಥಾನವನ್ನು ಪಡೆದಿದೆ. ೨೭೦ ಕೆಲಸಗಾರರಿಂದ ಕೂಡಿರುವ ಈ ಸಂಸ್ಥೆ ಕೊರಿಯಾದಲ್ಲೇ ಅತ್ಯಂತ ಉತ್ತಮ ರೇಷ್ಮೆ ಉತ್ಪಾದನೆ ಮಾಡುವ ಸಂಸ್ಥೆಯಾಗಿದೆ. ಶ್ರೀ ಬ. ಲೀ. ಅವರು ಈ ಸಂಸ್ಥೆಯ ಅಧ್ಯಕ್ಷರಾಗಿದ್ದಾರೆ.. ಈ ರಾಷ್ಟ್ರದ ಎಲ್ಲಾ ಕಚೇರಿಗಳಲ್ಲೂ, ರಾಷ್ಟ್ರಾಧ್ಯಕ್ಷರಾದ "ಚುನ್ ಡೂ ತಂಗ್" ರವರ ಭಾವಚಿತ್ರವನ್ನು ಕಾಣಬಹುದು. ನಾನು ಅನೇಕ ಸಾರಿ ಅಭಿಪ್ರಾಯಪಟ್ಟಂತೆ ಈ ರಾಷ್ಟ್ರಗಳಲ್ಲಿ ಏನಾದರೂ ಕಲಿತುಕೊಳ್ಳುವುದಿದ್ದರೆ ಶಿಸ್ತು ಸ್ವಚ್ಛತೆ ಮತ್ತು ರಾಷ್ಟ್ರಾಭಿಮಾನ.

ಈ ಕಾರ್ಖಾನೆಯಲ್ಲಿ ಎಂತಹ ಸ್ವಚ್ಛತೆ. ಇಡೀ ಪ್ರದೇಶದಲ್ಲಿ ಎಲ್ಲೂ ಒಂದು ಚೂರು ಕಸಕಡ್ಡಿಯಾಗಲೀ, ಗಲೀಜಾಗಲೀ ಕಾಣುವುದಿಲ್ಲ. ಗೂಡುಗಳು ಕಲ್ಲಿನಂತಿವೆ. ಮತ್ತೊಂದು ವಿಶೇಷವೆಂದರೆ "ಕಿಮಾನೋ" ಉಡುಪಿಗಾಗಿಯೇ ಸಿದ್ಧಮಾಡಿದ ರೇಷ್ಮೆಯನ್ನು ವಾಟರ್ ಟ್ವಿಸ್ಟಿಂಗ್ ಮಾಡುವುದನ್ನು ಕಾಣಬಹುದು. ೨೭ ಡೀನಿಯರ್ (Dinier) ಸಿಲ್ಕನ್ನು ಇಲ್ಲಿ

ತೆಗೆಯುತ್ತಾರೆ. ಈ ಸಂಸ್ಥೆಯ ಅಧಿಕಾರಗಳ ಪ್ರಕಾರ ಡ್ರೈ (Dry) ಮಾಡಿದ ಗೂಡನ್ನು ೩ ವರ್ಷಗಳವರೆಗೂ ಇಡಬಹುದು. ಇದೇ ಸಂಸ್ಥೆಯವರು ಇಲ್ಲಿ ಒಂದು Chaky Rearing Centre (C.R.C) ಕೂಡಾ ನಡೆಸುತ್ತಿದ್ದಾರೆ. ಈ ಸಂಸ್ಥೆಗೆ ಭೇಟಿ ನೀಡಿ ಹೊರಗೆ ಬಂದ ಮೇಲೆ ಚನ್ನಪಟ್ಟಣದಲ್ಲಿರುವ ನಮ್ಮ ಸ್ಪನ್ ಸಿಲ್ಕ್ ಮಿಲ್ಲಿನ ಸ್ವಚ್ಛತೆಗಾಗಿ ನಾನು ಪಟ್ಟಶ್ರಮ, ಅಲ್ಲಿರುವ ಕ್ಯಾಂಟೀನ್‌ನ ಗಲೀಜನ್ನು ನೋಡಿ ನಾನು ಅನುಭವಿಸಿದ್ದ ಯಾತನೆ ಜ್ಞಾಪಕಕ್ಕೆ ಬಂತು. ಈ ದೇಶದಲ್ಲಿ ಇಷ್ಟೊಂದು ಶಿಸ್ತು, ಸ್ವಚ್ಛತೆ ಕಾಪಾಡಿಕೊಳ್ಳಲು ಸಾಧ್ಯವಿದ್ದರೆ ನಮ್ಮ ಜನತೆಗೆ ಏನಾಗಿದೆ? ಎನ್ನುವ ಗುಂಗಿನಲ್ಲಿಯೇ ಹೊರಗೆ ಬಂದೆ. KIMCHUN ನಿಂದ ಸಿಯೋಲ್‌ಗೆ ಪ್ರಯಾಣ ಮಾಡುವ ದಾರಿಯಲ್ಲಿ ನದಿಯ ದಡದ ಹೋಟೆಲಿನಲ್ಲಿ ಊಟ ಮಾಡಿದೆವು. ತಟ್ಟೆಯ ತುಂಬಾ ಕಲಾತ್ಮಕವಾಗಿ ಜೋಡಿಸಿಕೊಟ್ಟಿದ್ದ ಹುರಿದ ಸಣ್ಣ ಮೀನುಗಳ ರುಚಿ ಇಂದಿಗೂ ಮರೆಯಲಾಗಲಿಲ್ಲ. ದಾರಿಯಲ್ಲಿ ಧಾರಾಕಾರಾವಾಗಿ ಮಳೆ ಸುರಿಯುತ್ತಿತ್ತು. ಸ್ನೇಹಿತರಾದ ಶ್ರೀ ಚುಂಗ್ ಮತ್ತು ಇಸೋಬೆರವರು ಈ ಮಳೆಯಲ್ಲಿ ರಸ್ತೆಯ ಪ್ರಯಾಣ ಮಾಡುವುದರ ಬದಲು KIMCHUN ನಿಂದ ರೈಲಿನಲ್ಲಿ ಸಿಯೋಲ್‌ಗೆ ಪ್ರಯಾಣ ಮಾಡುವ ಅಭಿಪ್ರಾಯಪಟ್ಟರು. ಆದರೆ ಸುರಿಯುವ ಮಳೆಯಲ್ಲಿ ಸುಂದರವಾದ ಕಾಡಿನ ಮಧ್ಯೆ ಸ್ವಚ್ಛವೂ, ವಿಶಾಲವೂ ಆದ ಈ ಹೆದ್ದಾರಿಯಲ್ಲಿ ನೋಡುತ್ತಿದ್ದ ದೃಶ್ಯಗಳನ್ನು ಕಳೆದುಕೊಳ್ಳಲು ಮನಸ್ಸಾಗಲಿಲ್ಲ. ಆದ್ದರಿಂದ ಕಾರಿನಲ್ಲಿಯೇ ಪ್ರಯಾಣವನ್ನು ಮುಂದುವರೆಸಿದೆವು. ಸಿಯೋಲ್ ತಲುಪುವ ವೇಳೆಗೆ ಮಳೆ ಕಡಿಮೆಯಾಗಿತ್ತು. ನಗರ ತಲುಪಿದ ಮೇಲೆ ಸ್ವಲ್ಪ ಹೊತ್ತು ಪೇಟೆಯಲ್ಲಿ ತಿರುಗಾಡಿ ಹೋಟೆಲ್ ಸೇರಿದೆವು.

ನಾವು ಈ ಎರಡು ರಾಷ್ಟ್ರಗಳಿಗೂ ಭೇಟಿ ಕೊಡುವ ಸಮಯದಲ್ಲಿಯೇ ಕರ್ನಾಟಕ ರೇಷ್ಮೆ ಯೋಜನೆಯ ಒಂದು ಅಂಗವಾಗಿ ಹತ್ತು ಕೋಟಿ ರೂಪಾಯಿ ವೈಚ್ಚದ ಶೈತ್ಯಾಗಾರದ ಕೆಲಸಕ್ಕೆ ವಿಶ್ವಬ್ಯಾಂಕ್ ಟೆಂಡರುಗಳನ್ನು ಕರೆದು, ಈ ಕೆಲಸಕ್ಕೆ ೩ ಸಂಸ್ಥೆಗಳು ಅರ್ಜಿ ಹಾಕಿಕೊಂಡಿದ್ದವು. ಭಾರತದ ಸಂಸ್ಥೆಯೊಂದು ಪರಿಗಣನೆಗೆ ಅರ್ಹವಲ್ಲವಾದ್ದರಿಂದ ಜಪಾನ್‌ನ ಮಾರುಬೆನಿ ಕಂಪನಿ ಮತ್ತು ಕೊರಿಯಾದ ಲಕ್ಕಿ ಗೋಲ್ಡ್‌ಸ್ಟಾರ್ ಕಂಪನಿಯವರ ಮಧ್ಯದಲ್ಲಿ ಯಾರಿಗೆ ಕೆಲಸ ಕೊಡಬೇಕೆಂದು ತೀರ್ಮಾನ ಮಾಡಬೇಕಾಗಿತ್ತು. ನನ್ನ ಪ್ರವಾಸದ ಸಮಯದಲ್ಲಿ ಈ ಎರಡೂ ಕಂಪನಿಯವರು ಅವರುಗಳು ನಿರ್ಮಿಸಿರುವ ಎಲ್ಲಾ ಶೈತ್ಯಾಗಾರಗಳನ್ನು ನನಗೆ ತೋರಿಸಿದರು. ಜಪಾನಿನಲ್ಲಿ ಮಾರುಬೆನಿಯವರ ಕಾಟವಾದರೆ ಕೊರಿಯಾದಲ್ಲಿ Lucky Gold Star Company ಯವರ ಕಾಟ. ಈ ಎರಡು ಕಂಪನಿಯವರ ಮಧ್ಯೆ ನಾನು ತೀರ್ಮಾನ ತೆಗೆದುಕೊಳ್ಳುವಾಗ ನಡೆದ ವ್ಯವಹಾರವನ್ನು, ಮೇಲೆ ನಡೆದ ಒಡಂಬಡಿಕೆಯನ್ನು ಶ್ರೀ ಲಂಕೇಶ್ ತಮ್ಮ ಪತ್ರಿಕೆಯಲ್ಲಿ ಸ್ವಾರಸ್ಯವಾಗಿ ವಿವರಿಸಿದ್ದಾರೆ. ಆದ್ದರಿಂದ ಅವರ ವಿವರ ಇಲ್ಲಿ ಸಾಕು. ಈ ದಿನ ಅವರ ಆತಿಥ್ಯ. ಇಂದಿಗೆ ನನ್ನ ಕೊರಿಯಾ ಪ್ರವಾಸ ಮುಗಿಯುತ್ತಿದೆ. ನಾಳೆ ಹಾಂಕಾಂಗ್‌ಗೆ ಹೊರಡಲು ಸಿದ್ಧತೆ ಮಾಡಿಕೊಳ್ಳಲು ನಿದ್ದೆ ಹೋದೆ.

ತಾ. ೧೦ ರಂದು ನಗರದ ಹೊರ ವಲಯದಲ್ಲಿರುವ ವಿಮಾನ ನಿಲ್ದಾಣದಲ್ಲಿ ಮೂರು ದಿನಗಳಿಂದ ಸತತವಾಗಿ ಜೊತೆಯಲ್ಲಿದ್ದ K.S.I.C. Consultatn ಶ್ರೀ ಚುಂಗ್ ಮತ್ತು

Lucky Gold Star Company ಯ ಅಧಿಕಾರಿಗಳು ವಿಮಾನ ನಿಲ್ದಾಣದಲ್ಲಿ ಬೀಳ್ಕೊಟ್ಟರು. ಕೊರಿಯಾ ಇತ್ತೀಚಿನ ದಿನಗಳಲ್ಲಿ ಸಾಧಿಸಿರುವ ಅಭಿವೃದ್ಧಿ ಅದ್ಭುತವಾದದ್ದು. ಚಿಕ್ಕದಾದ ಈ ರಾಷ್ಟ್ರವನ್ನು ದೊಡ್ಡದಾಗಿ ಕಟ್ಟಲು ಈ ಜನ ಸರ್ವ ಪ್ರಯತ್ನ ಮಾಡುತ್ತಿದ್ದಾರೆ. "I think they may succeed because of their determined effort" ಒಟ್ಟಾರೆ ಹೇಳಬೇಕೆಂದರೆ ಇಲ್ಲಿಯ ಜನ ಜಪಾನೀಯರ ನಾಗರೀಕತೆಯ ಮಟ್ಟವನ್ನು ತಲುಪಲಾಗಿಲ್ಲ. ಈ ರಾಷ್ಟ್ರದ ಹೆಂಗಸರು ಜಪಾನೀಯರಷ್ಟು ಸುಂದರಿಯರಲ್ಲ. ಸಿಯೋಲ್‌ನ ಈಗಿರುವ ವಿಮಾನ ನಿಲ್ದಾಣ ಸಾಲದೆಂದು ಹೊಸ ನಿಲ್ದಾಣವೊಂದನ್ನು ಕಟ್ಟುತ್ತಿದ್ದಾರೆ.

## ಹಾಂಕಾಂಗ್

ಬೆಳಿಗ್ಗೆ ೧೧.೦೦ ಗಂಟೆಗೆ ಕೊರಿಯಾ ನೆಲದಿಂದ "ಕ್ಯಾಥೆ ಫೆಸಿಫಿಕ್" ವಿಮಾನದಲ್ಲಿ ಹಾಂಕಾಂಗ್ ದ್ವೀಪಕ್ಕೆ ಹಾರಿದೆವು. ಶ್ರೀ ಇಸೋಬೆರವರು ಕೂಡ ನನ್ನೊಡನೆ ಹಾಂಕಾಂಗ್‌ಗೆ ಪ್ರಯಾಣ ಮಾಡಿದರು. ವಿಮಾನ ೨ ಗಂಟೆಗೆ 'ತೈವಾನ್' ವಿಮಾನ ನಿಲ್ದಾಣ ತಲುಪಿತು. ತೈವಾನ್ ಅಭಿವೃದ್ಧಿಯ ಪಥದಲ್ಲಿ ಸಾಗುತ್ತಿರುವ ಒಂದು ಪುಟ್ಟ ರಾಷ್ಟ್ರ. ಈ ರಾಷ್ಟ್ರಕ್ಕೆ U.N.O (United Nations Organisation) ದಲ್ಲಿ ಇನ್ನೂ ಸದಸ್ಯತ್ವ ನೀಡಿಲ್ಲವೆಂದು ಶ್ರೀ ಇಸೋಬೆಯವರು ನನಗೆ ತಿಳಿಸಿದರು. ಆದರೂ ತನ್ನದೇ ಆದ ಧ್ವಜ, ತನ್ನದೇ ಆದ ಸಾರ್ವಭೌಮತ್ವ ಹೊಂದಿರುವ ಈ ಭೂಮಿ, ಒಂದು ರಾಷ್ಟ್ರ ಎನ್ನುವುದನ್ನು ಯಾರೂ ಅಲ್ಲಗಳೆಯಲಾಗುವುದಿಲ್ಲ. ಒಂದು ಗಂಟೆಯ ತಂಗಣೆಯಾದ ಮೇಲೆ ೨. ೫೦ ಕ್ಕೆ ವಿಮಾನ ಹಾಂಕಾಂಗ್ ತಲುಪಿತು. ಸಮುದ್ರದ ಮಧ್ಯದಲ್ಲಿರುವ ಈ ವಿಮಾನ ನಿಲ್ದಾಣದಲ್ಲಿ ವಿಮಾನ ಇಳಿಯುವಾಗ ಮತ್ತು ಹತ್ತುವಾಗ (ಹಾರುವಾಗ)ಎರಡು ಕಡೆಯಲ್ಲಿಯೂ ಸಮುದ್ರದ ನೀರು ಚಾಚಿಕೊಂಡಿರುವ ದೃಶ್ಯ ಆಶ್ಚರ್ಯಕರವೂ, ಹೊಸಬರಿಗೆ ಭಯವನ್ನೂ ತರುವಂತಿದೆ. ಜಪಾನ್‌ಗೂ ಮತ್ತು ಹಾಂಕಾಂಗ್‌ಗೂ ೧.೦೦ ಗಂಟೆಯ ವ್ಯತ್ಯಾಸವಾದರೆ ಭಾರತ ಮತ್ತು ಹಾಂಕಾಂಗ್‌ಗಳ ಕಾಲಮಾನಕ್ಕೆ ಎರಡೂವರೆ ಗಂಟೆಗಳ ವ್ಯತ್ಯಾಸ. ಹಾಂಕಾಂಗ್‌ನ ನನ್ನ ಪ್ರವಾಸ ಕೇವಲ ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ ಕೊಡುವ ಉದ್ದೇಶವಾಗಿದ್ದರಿಂದ Cathay Pacific ವಿಮಾನದವರೇ ಹಾಂಕಾಂಗ್‌ನ ಪ್ರವಾಸಕ್ಕೆ ಏರ್ಪಾಡು ಮಾಡಿದ್ದರು. ನಿಲ್ದಾಣ ತಲುಪುತ್ತಿದ್ದಂತೆಯೇ ಕ್ಯಾಥೆ ಫೆಸಿಫಿಕ್‌ನ ಸಮವಸ್ತ್ರ ಧರಿಸಿದ ಹೆಣ್ಣು ಮಗಳು ನನ್ನ ಹೆಸರಿರುವ ಪಟ್ಟಿಯನ್ನು ಹಿಡಿದು ಸ್ವಾಗತಿಸಿ ನಿಲ್ದಾಣದ ಎಲ್ಲಾ ನಿಯಮಗಳನ್ನು (Formalities) ಮುಗಿಸಿ ಹೊರಗೆ ಕರೆತಂದಾಗ ನಮಗಾಗಿ ಹೋಟೆಲಿನವರು ಕಳುಹಿಸಿದ ಕಾರು ಮತ್ತು ಇಸೋಬೆರವರ ಸ್ನೇಹಿತರ ಕಾರು ಎರಡೂ ಸಿದ್ಧವಾಗಿದ್ದವು. ಹಾಂಕಾಂಗ್‌ನಲ್ಲಿ ಹೋಟೆಲ್ ಪೆನ್ಸುಲಾ ಒಂದು ಪ್ರತಿಷ್ಠಿತ ಹೋಟೆಲ್, ಈ ಪ್ರತಿಷ್ಠಿತ ಹೋಟೆಲ್‌ಗೆ ಹೊಂದಿಕೊಂಡಂತೆ ಹೊಸದಾಗಿ ಅತ್ಯಂತ ಆಧುನಿಕವಾಗಿ ಕಟ್ಟಿರುವ ಕೌಲೂನ್ ಹೋಟೆಲ್ ತಲುಪಿ, ಈ ಸುಂದರ ಕಟ್ಟಡದಲ್ಲಿ ಕಾದಿರಿಸಿದ್ದ ೫೧೯ ನೆಯ ಕೊಠಡಿಯಲ್ಲಿ ತಂಗಿದೆ.

**ಟೈಫೂನ್!**

ತೈವಾನ್ ವಿಮಾನ ನಿಲ್ದಾಣದಿಂದ ಹೊರಡುವಾಗಲೇ ಪತ್ರಿಕೆಯೊಂದರ ಮುಖಪುಟದಲ್ಲಿ ಎದ್ದು ಕಾಣುವ ರೀತಿ ಮುದ್ರಿಸಿರುವ ಸುದ್ದಿಯೊಂದನ್ನು ಓದಿದೆ. ಅದೇನೆಂದರೆ ತಾರೀಕು ೧೦- ೧೧ ರಂದು "ಟೈಫೂನ್" ಹಾಂಕಾಂಗ್ ದ್ವೀಪವನ್ನು ಹಾದು ಹೋಗುತ್ತದೆಂದು ಆ ಸುದ್ದಿಯ ಸಾರಾಂಶವಾಗಿತ್ತು. ಮೊದಲಿಗೆ ಇದು ನನಗರ್ಥವಾಗಲಿಲ್ಲ. ಗೆಳೆಯ ಶ್ರೀ ಇಸೋಬೆರವರು ಹೇಳಿದರು , ಮಳೆಯಿಂದ ಕೂಡಿದ ಅತ್ಯಂತ ಭೀಕರವಾದ ಬಿರುಗಾಳಿಗೆ "ಟೈಫೂನ್" ಎಂದು ಕರೆಯುತ್ತಾರೆ. ಅಮೆರಿಕಾದಲ್ಲಿ ಇದಕ್ಕೆ "ಹರ್ರಿಕೇನ್" (Hurricane) ಎನ್ನುತ್ತಾರೆ. ಭಾರತದಲ್ಲಿ ನಾವು ಅದನ್ನು ಸೈಕ್ಲೋನ್ ಎನ್ನುತ್ತೇವೆ. ತಮಾಷೆಯೆಂದರೆ ನಾನು ಜಪಾನ್‌ನನ್ನು ತಲುಪಿದ ದಿನವೇ ಅಲ್ಲಿ ಭೂಕಂಪವಾಯಿತು. ನಾನು ಹಾಂಕಾಂಗ್‌ನಲ್ಲಿ ಬಂದ ದಿನವೇ ಇಲ್ಲಿ 'ಟೈಫೂನ್' ಇಡೀ ಹಾಂಕಾಂಗ್‌ನಲ್ಲಿ ಟೈಫೂನ್‌ದೇ ಸುದ್ದಿ. ನಿಲ್ದಾಣದಿಂದ ಹೋಟೆಲಿಗೆ ಹೋಗುವ ದಾರಿಯಲ್ಲಿ ಚಾಲಕ ಹೇಳುತ್ತಾನೆ " The weather and the women are same in Honkong". ಏಕೆಂದರೆ ಇಲ್ಲಿಯ ಹವಾಮಾನ ಮತ್ತು ಹೆಣ್ಣು ಯಾವಾಗ ಮುನಿಯುತ್ತದೆ ಮತ್ತು ಯಾವಾಗ ಪ್ರಶಾಂತವಾಗಿರುತ್ತವೆಯೆಂದು ಹೇಳುವುದೇ ಕಷ್ಟ ಮತ್ತು ಅರ್ಥ ಮಾಡಿಕೊಳ್ಳುವುದೂ ಕಷ್ಟ. ಅತ್ಯಂತ ಕಿಲಾಡಿ ಚಾಲಕ. ನಮ್ಮ ಕಾರ್ಯಕ್ರಮದ ಬಗ್ಗೆ ಆತ ವಿಚಾರಿಸಿದಾಗ ಇಲ್ಲಿಯ ಪ್ರೇಕ್ಷಣೀಯ ಸ್ಥಳಗಳನ್ನು ನೋಡುವುದೇ ನಮ್ಮ ಪ್ರಮುಖ ಕಾರ್ಯಕ್ರಮವೆಂದು ತಿಳಿಸಿದೆವು. ಕೇವಲ ನೀರು, ಮರ, ತೋಟ, ಗುಡ್ಡಗಳನ್ನು ನೋಡಿದರೆ ಏನು ಪ್ರಯೋಜನ ಸಾರ್? ಹಾಸಿಗೆಯಲ್ಲಿ ಮಜಾ ಮಾಡದಿದ್ದರೆ ಎನ್ನುತ್ತಾರೆ. ಈತ ಹಾಂಕಾಂಗ್ ಇಂದಿಗೂ ಬ್ರಿಟಿಷರ ಆಳ್ವಿಕೆಯಲ್ಲಿರುವ ಒಂದು ದ್ವೀಪ. KOWLOON, HONKONG ಮತ್ತು NEW TERRITTORY ಎಂದು ಈ ಪುಟ್ಟ ದೇಶವನ್ನು ವಿಂಗಡಿಸಿದ್ದಾರೆ. ಕೌಲೂನ್‌ನಿಂದ ಹಾಂಕಾಂಗ್ ಪ್ರದೇಶಕ್ಕೆ ಸುಮಾರು ಮೂರುವರೆ ಕಿ. ಮೀ. ಗಳ ಉದ್ದ. ಸಮುದ್ರದ ಕೆಳಗೆ ರಸ್ತೆಯನ್ನು ನಿರ್ಮಾಣ ಮಾಡಿದ್ದಾರೆ. ಇದರ ಜೊತೆಗೆ ನೀರಿನ ಮೇಲೆ ಹಾದು ಹೋಗುವ ವ್ಯವಸ್ಥೆ ಮತ್ತು ರೈಲಿನ ಪ್ರಯಾಣ ಕೂಡಾ ಇದೆ. ವಿಮಾನ ನಿಲ್ದಾಣವಿರುವುದು ಕೌಲೂನ್ ಪ್ರದೇಶದಲ್ಲಿ. ಇನ್ನು ೭ ವರ್ಷಗಳಲ್ಲಿ ಬ್ರಿಟಿಷರು ಈ ಪ್ರದೇಶವನ್ನು ಚೈನಾಕ್ಕೆ ಒಪ್ಪಿಸಿ ಹೊರಗೆ ಹೋಗಬೇಕೆನ್ನುವ ಒಪ್ಪಂದವೊಂದು ಆಗಿದೆಯಂತೆ. ಕಾರಿನ ಚಾಲಕನಿಂದ ಹಿಡಿದು ಅನೇಕರೊಡನೆ ಚರ್ಚಿಸಿದಾಗ ಈ ಜನಗಳಿಗೆ ಚೈನಾದ ಜೊತೆ ಸೇರಲು ಇಷ್ಟವಿಲ್ಲ. ಇವರ ಅಭಿಪ್ರಾಯದಂತೆ ಚೈನಾ ನಂಬಿಕೆಗೆ ಅರ್ಹವಲ್ಲ ಎನ್ನುತ್ತಾರೆ. ಸಂಜೆ ೫.೦೦ ಗಂಟೆಗೆ ಹೊರಟು ನಗರದ ಅನೇಕ ಆಕರ್ಷಕ ಸ್ಥಳಗಳನ್ನು ನೋಡಿಕೊಂಡು ಮಳೆಯಲ್ಲಿಯೇ ವಾಪಸ್ ಬಂದೆವು. ಎಲ್ಲಾ ಕಡೆಯೂ, ಎಲ್ಲರೂ ನಾಳೆ ಬರುವ ಟೈಫೂನ್ ಬಗ್ಗೆಯೇ ಮಾತನಾಡುತ್ತಾರೆ. ತಾ. ೧೧ರಂದು ಧಾರಾಕಾರವಾಗಿ ಮಳೆ ಸುರಿಯುತ್ತಿದೆ. ಆದರೂ ನಿರ್ಧರಿಸಿದ ಕಾರ್ಯಕ್ರಮದಂತೆ ಪ್ರೇಕ್ಷಣೀಯ ಸ್ಥಳಗಳಿಗೆ ಹೊರಟೆವು. ಹೊರಡುವ ಮೊದಲು ೧೨ನೇ ತಾರೀಖಿನ ದಿನವೇ ನಾನು ಭಾರತವನ್ನು ತಲುಪಲು ವಿಮಾನ ಸಂಸ್ಥೆಯವರನ್ನು ಸಂಪರ್ಕಿಸಿ ತನ್ನ ಏರ್ಪಾಡುಗಳನ್ನು ಮಾಡಲಾಯಿತು.

ನನ್ನ ನಿಯೋಜಿತ ಕಾರ್ಯಕ್ರಮದ ಪ್ರಕಾರ ತಾ. ೧೨ ರಂದು ಹಾಂಕಾಂಗ್‌ನಿಂದ ಹೊರಟು ಸಿಂಗಪುರದಲ್ಲಿ ಒಂದು ದಿನದ ತಂಗಣೆಯ ನಂತರ ೧೩ನೇ ತಾರೀಖಿನಂದು ಭಾರತಕ್ಕೆ ಪ್ರಯಾಣ ಮಾಡಬೇಕಾಗಿತ್ತು.

ಆದರೆ ಕಳೆದ ವರ್ಷ ತಾನೇ ನಾನು ಸಿಂಗಪುರಕ್ಕೆ ಭೇಟಿಯಿತ್ತು ನಾಲ್ಕಾರು ದಿನಗಳು ಇದ್ದು ಹೋಗಿದ್ದರಿಂದ ಈಗ ಮತ್ತೆ ಸಿಂಗಪುರಕ್ಕೆ ಹೋಗುವ ಅವಶ್ಯಕತೆಯಾಗಲೀ, ಆಸೆಯಾಗಲೀ ಇರಲಿಲ್ಲವಾದ್ದರಿಂದ ಸಿಂಗಪುರದ ಪ್ರವಾಸವನ್ನು ಮೊಟಕು ಮಾಡಿ ಒಂದು ದಿನ ಮುಂಚಿತವಾಗಿ ಭಾರತವನ್ನು ತಲುಪಲು ನಿರ್ಧರಿಸಬೇಕಾಯಿತು. ಆದರೆ ಟೈಫೂನ್‌ನಿಂದ ಈ ರಾತ್ರಿ ಏನಾಗುವುದೋ ಎನ್ನುವ ಭೀತಿ . ಈ ಮಳೆ, ಬಿರುಗಾಳಿಯಿಂದಾಗಿ ತಾ. ೧೧ ರಂದು ಅನೇಕ ವಿಮಾನಯಾನ ರದ್ದಾಯಿತು. ಆದ್ದರಿಂದ ನಾಳೆ ಬೆಳಗ್ಗೆ ನಮ್ಮ ವಿಮಾನ ಹೊರಡುವುದೋ, ಇಲ್ಲವೋ ಎನ್ನುವ ಅನುಮಾನ ಭಾರತವನ್ನು ಬೇಗ ತಲುಪಬೇಕೆನ್ನುವ ನನ್ನ ಆಶೆಗೆ ಕಡಿವಾಣ ಹಾಕುತ್ತಿತ್ತು. ಇಡೀ ದಿನ ಧಾರಾಕಾರವಾದ ಮಳೆ, ಎಲ್ಲೆಲ್ಲೂ ಟೈಫೂನ್‌ನ ಭಯ. ಆದರೂ ಧೃತಿಗೆಡದೆ ಇಡೀ ದ್ವೀಪದಲ್ಲಿ ತಿರುಗಾಡಿದೆವು. ಎರಡು ದಿಕ್ಕುಗಳಲ್ಲಿ ಚೈನಾದ ಗಡಿಯವರೆಗೂ ಪ್ರಯಾಣ ಮಾಡಿದೆವು. KOWLOON, HONKONG ಮತ್ತುNEW TERRITORY ಎಲ್ಲವನ್ನೂ ನೋಡಿ ಬಂದಾಯ್ತು. ದಾರಿಯಲ್ಲಿ ಬರುವಾಗ "ಹಾಂಕಾಂಗ್ ಅಟ್ ನೈಟ್" (Honkong at night) ಮತ್ತು ಇಲ್ಲಿಯ ರಾತ್ರಿಯ ಕುಣಿತಗಳು ಪ್ರಸಿದ್ಧಿಯೆಂದು ಚಾಲಕ ಹೇಳುತ್ತಿದ್ದ. ನಮಗೆ ಯಾವುದರ ಗೊಡವೆಯೂ ಇರಲಿಲ್ಲ. ನನ್ನ ಮನಸ್ಸೆಲ್ಲಾ ರಾತ್ರಿ ಬರಬೇಕಾಗಿರುವ ಟೈಫೂನ್ ಮತ್ತು ಅದರಿಂದಾಗುವ ಪರಿಣಾಮದ ಬಗ್ಗೆ ಚಿಂತಿಸುತ್ತಿದೆ.

"ಹಾಂಕಾಂಗ್ ಓಷನ್ ಪಾರ್ಕ್", ರೋಪ್‌ವೇ ಬೀಚ್‌ಗೆ ಹೋಗಿ ಬಂದೆವು. ಸಾವಿರಾರು ಬಿಳೀ ಚರ್ಮದ ಹೆಣ್ಣು - ಗಂಡುಗಳು ನಗ್ನರಾಗಿ ಮತ್ತೆ ಕೆಲವರು ಅರೆನಗ್ನರಾಗಿ ಈಜಾಡುವ ಈ ಕೊಳ ಊಹಿಸಿಕೊಳ್ಳಲಾಗದಂತಹುದು. ನೂರಾರು ಜನರು ಮೋಜಿಗಾಗಿ ಮತ್ತು ಹೆಣ್ಣಿನ ಮೈಮಾಟದ ನೋಟಕ್ಕಾಗಿ ಈ Occean Park ನಲ್ಲಿ ಕುಡಿದು, ತಿಂದು, ಲಲ್ಲೆ ಹೊಡೆಯುವ, ಉರಿಯುವಂತೆ ಕಾಣುವ ನೀರಿನ ಮಧ್ಯದಲ್ಲಿ ಕಟ್ಟಿರುವ "ಸೀ, ಪ್ಯಾಲೇಸ್" ದೃಶ್ಯ ಅತ್ಯಂತ ಸುಂದರವಾಗಿದೆ. ದೋಣಿಗಳಲ್ಲಿ ಈ ಅರಮನೆಯನ್ನು ತಲುಪಬೇಕಾಗಿದೆ. ಇಂತಹ ಸುಂದರ ಸ್ಥಳದಲ್ಲಿ ಸ್ವಚ್ಛತೆಯನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದ್ದಾರೆ. ಈ ದೇಶದಲ್ಲಿ ಪ್ರವಾಸ ಮಾಡುವಾಗ ಎತ್ತರವಾದ ಕಟ್ಟಡಗಳನ್ನು ಬಿಟ್ಟರೆ ಉಳಿದ ಎಲ್ಲದರಲ್ಲಿಯೂ ಈ ದೇಶ ಭಾರತದಂತೆಯೇ ಇದೆ. ಜಪಾನ್ ದೇಶದಲ್ಲಿ ಕಾಣುವ ಸ್ವಚ್ಛತೆಯಾಗಲಿ, ಶಿಸ್ತಾಗಲೀ ಊಹಾತೀತ. ಆ ಜನರ ನಾಗರೀಕ ನಡವಳಿಕೆಯಾಗಲೀ ಇಲ್ಲಿ ಕಾಣುವುದಿಲ್ಲ. ಆದರೂ ಪ್ರಕೃತಿಯ ಕೃಪೆಯಿಂದಾಗಿ ಎತ್ತರ ಪ್ರದೇಶಗಳಿಂದ ಸಂಜೆ ನಿಂತು ನೋಡಿದರೆ ಹಾಂಕಾಂಗ್ ನೋಡಲು ಬಲು ಚಂದ. "ನ್ಯೂ, ಟೆರ್ರಿಟರಿ" ಯಿಂದ ವಾಪಸ್ ಬಂದಾಗ ಸುರಿಯುವ ಈ ಮಳೆಯಲ್ಲಿ ವಾಹನಗಳ ಸಂಚಾರ ಸ್ಥಗಿತವಾಗಿ ಒಂದು ಗಂಟೆಯ ಕಾಲ ನಿದಾನವಾಯ್ತು. ಟೈಫೂನ್‌ನ ಬಗ್ಗೆ ದೂರದರ್ಶನ (Television) ರೇಡಿಯೋ ಮತ್ತು ಇತರೇ ಪ್ರಸಾರ

ಸಾಧನಗಳ ಮುಖಾಂತರ ಸಂದೇಶಗಳು ಬಿತ್ತರಿಸಲ್ಪಡುತ್ತಿದ್ದುವು. ಎಲ್ಲೆಲ್ಲಿಯೂ ಎಲ್ಲರೂ ಮನೆ ಸೇರುವ ಕಾತುರ ಕಾಣುತ್ತಿತ್ತು. ಶಾಲೆಗೆ ರಜೆ ಘೋಷಿಸಿದ್ದರಿಂದ ಗುಂಪು ಗುಂಪಾಗಿ ಮಕ್ಕಳು ಮನೆ ಸೇರುವ ಕಾತುರತೆಯಲ್ಲಿದ್ದರು. ಹೋಟೆಲ್ ಸೇರಿ ಊಟ ಮಾಡುವ ಸಮಯದಲ್ಲಿ "೮ಎ" ಎನ್ನುವ ಸಂದೇಶ ಬಿತ್ತರಿಸಿದರು. ಅಂದರೆ ಟೈಫೂನ್‌ಸಿಂದ ತೊಂದರೆಯಾಗುವ ನಿರೀಕ್ಷೆಯಿದೆಯೆಂದು ಅದರ ಅರ್ಥ. ಇಲ್ಲಿಯ ಜನ ಹೇಳುತ್ತಾರೆ. ಈ ಟೈಫೂನ್‌ನಿಂದ ಏನೂ ತೊಂದರೆಯಾಗುವುದಿಲ್ಲ. ಇದು ಸರ್ವೇ ಸಾಮಾನ್ಯವೆಂದು. ಆದರೆ ಅದರ ಅರಿವಿಲ್ಲದ ನಮಗೆ ಅದರ ಕಾತುರತೆ ಮತ್ತು ಭಯ. ಹವಾಮಾನ ವರದಿಗಾರರು ಬಿರುಗಾಳಿಯ ಬಗ್ಗೆ ಮತ್ತು ಅದರ ಚಲನೆಯ ಬಗ್ಗೆ ಮುನ್ಸೂಚನೆ ಕೊಡುತ್ತಿದ್ದಂತೆಯೇ ಇಲ್ಲಿನ ಜನ ಆ ಬಿರುಗಾಳಿಗೆ ಇಲ್ಲಿಯ ಯಾವುದೋ ಒಂದು ದೇವರ ಹೆಸರನ್ನಿಡುತ್ತಾರೆ ಮತ್ತು ಆ ದೇವರನ್ನು ಬಿರುಗಾಳಿಯಿಂದ ಕಾಪಾಡುವಂತೆ ಪ್ರಾರ್ಥಿಸುತ್ತಾರೆ. ಈ ಬಿರುಗಾಳಿಗೂ ಜನ ದೇವರ ಹೆಸರಿಟ್ಟು ಪ್ರಾರ್ಥಿಸುತ್ತಿರುವುದು ನನ್ನ ಗಮನಕ್ಕೆ ಬಂತು. ಕಾಲಮಾನದ ವ್ಯತ್ಯಾಸದಿಂದಾಗಿ ಬಹಳ ಹೊತ್ತಿನವರೆಗೆ ಗಾಜಿನ ಕಿಟಕಿಗಳ ಮುಖಾಂತರ ಬರಬೇಕಾಗಿರುವ ಭೀಕರ ಬಿರುಗಾಳಿಗಾಗಿ ಕಾದು ಕುಳಿತೆ. ಕೊನೆಗೆ ನಿದ್ದೆ ತಡೆಯಲಾರದೇ ಬಿರುಗಾಳಿಯಿಂದ ಈ ಕಟ್ಟಡ ಕುಸಿದರೆ ಎಲ್ಲರ ಜೊತೆ ನಾನೂ ಕುಸಿಯುತ್ತೇನೆ. ಬದುಕಿದರೆ ನಾಳೆ ಭಾರತವನ್ನು ಸೇರುತ್ತೇನೆಂದು ನಿರ್ಧರಿಸಿ ನಿದ್ದೆ ಹೋದೆ. ಆಗಲೂ ಕೊಠಡಿಯ ಟಿ. ವಿ. ಯಲ್ಲಿ "೮ಎ" ಎನ್ನುವ ಮುನ್ಸೂಚನೆಯೇ ಕಾಣುತ್ತಿತ್ತು. ಬೆಳಗ್ಗೆ ಎದ್ದು ನೋಡಿದರೆ ಎಲ್ಲವೂ ಮಾಮೂಲಿ, ಟಿ.ವಿ. ಯ ಗುಂಡಿಯೊತ್ತಿದರೆ, "೨ಎ" ಎನ್ನುವ ಸಂಕೇತ. ಗೋಚರಿಸಿತ್ತು. ಈ ಸಂಕೇತದ ಅರ್ಥ ತಿಳಿಯದ ನಾನು ಹೋಟೆಲ್‌ನ "ಹವಾಮಾನ ವರದಿಯ" ಕೌಂಟರನ್ನು ಸಂಪರ್ಕಿಸಿದಾಗ ಆ ಮಧುರ ಧ್ವನಿ ನನಗೆ ತಿಳಿಸಿತು. "೨ಎ" ಎಂದರೆ "ಅಪಾಯವಿಲ್ಲ" (NO DANGER) ಎಂದು ಮತ್ತೆ ತಿಳಿಯಿತು. ಹಾಂಕಾಂಗ್‌ನ್ನು ಅಪ್ಪಳಿಸಿ ಹಾದು ಹೋಗಬೇಕಾಗಿದ್ದ ಟೈಫೂನ್ ಚೈನಾ ಮೈನ್‌ಲ್ಯಾಂಡ್‌ನ ಕಡೆಗೆ ತಿರುವಿಕೊಂಡಿದ್ದರಿಂದ ಹಾಂಕಾಂಗ್‌ಗೆ ಯಾವ ತೊಂದರೆಯೂ ಆಗಲಿಲ್ಲ. ಆದರೆ ಚೈನಾ ಮೈನ್‌ಲ್ಯಾಂಡ್‌ನ ಪ್ರದೇಶ ಮತ್ತು ಫಿಲಿಫೈನ್ಸ್ ಪ್ರದೇಶಗಳಲ್ಲಿ ಹಾನಿಯುಂಟು ಮಾಡಿತೆಂದು ತಿಳಿಯಿತು. ಅಂದರೆ ನಾನು ನೋಡಬೇಕೆಂದಿದ್ದ ಟೈಫೂನ್ ನೋಡಲಾಗಲಿಲ್ಲ. ಆದರೂ ರಭಸವಾದ ಗಾಳಿ ಬೀಸುತ್ತಿತ್ತು. ಮಳೆ ಸುರಿಯುತ್ತಿತ್ತು. ಆದ್ದರಿಂದ ವಿಮಾನ ಹೊರಡುವುದೋ, ಇಲ್ಲವೋ ಎನ್ನುವ ಅನುಮಾನದಿಂದ ಕೂಡಲೇ ವಿಮಾನ ಸಂಸ್ಥೆಯನ್ನು ಸಂಪರ್ಕಿಸಿದಾಗ ಯಾವ ಬದಲಾವಣೆಯೂ ಇಲ್ಲದೇ ವಿಮಾನ ಹೊರಡುವುದೆಂದು ತಿಳಿದು ಸಂತೋಷಗೊಂಡೆ.

೧೨ ರಂದು ಬೆಳಗ್ಗೆ ೮- ೦೦ ಗಂಟೆಗೆ ಕೌಲೂನ್ ಹೋಟೆಲ್ಲಿನಿಂದ ನಾನು ಮತ್ತು ಇಸೋಬೆಯವರು ಹೊರಟು ೯-೦೦ ಗಂಟೆ ಹತ್ತು ನಿಮಿಷಕ್ಕೆ ವಿಮಾನ ನಿಲ್ದಾಣಕ್ಕೆ ಬಂದೆವು. ಸುರಿಯುವ ಮಳೆ, ಬಿರುಗಾಳಿಯಿಲ್ಲದಿದ್ದರೂ ರಭಸವಾಗಿ ಬೀಸುತ್ತಿರುವ ಗಾಳಿ ಇದರ ಮಧ್ಯದಲ್ಲಿ ನಿಲ್ದಾಣವನ್ನು ಸೇರಿದೆವು. ಅದೇ ದಿನ ೧೦- ಗಂಟೆಯ ವಿಮಾನಕ್ಕೆ ಭಾರತಕ್ಕೆ ನನ್ನ ಪ್ರಯಾಣ ನಿರ್ಧಾರವಾಗಿತ್ತು. ೧೧.೦೦ ಗಂಟೆಗೆ ಶ್ರೀ ಇಸೋಬೆರವರ ಪ್ರಯಾಣ

ಟೋಕಿಯೋಗೆ ನಿರ್ಧಾರಿತವಾಗಿತ್ತು. ನಿಲ್ದಾಣದಲ್ಲಿ ನನ್ನ ಎಲ್ಲಾ ಕೆಲಸಗಳನ್ನು ಮುಗಿಸಿ ಕ್ಯಾಥೆ ಫೆಸಿಫಿಕ್ ನವರ ಸ್ಪೆಷಲ್ ಲೌಂಜ್ ತಲುಪಿದಾಗ ನನಗೆ ಜ್ಞಾಪಕಕ್ಕೆ ಬಂತು. ನಾನು ಈಗಾಗಲೇ ವಿಮಾನಕ್ಕೆ ಕಳುಹಿಸಿದ್ದ ನನ್ನ ಪೆಟ್ಟಿಗೆಗೆ ಬೀಗ ಹಾಕಿಲ್ಲವೆಂದು, ವಿ.ಐ. ಪಿ. ಪಟ್ಟಿಯಲ್ಲಿರುವ ಪ್ರಯಾಣಿಕನಾದ್ದರಿಂದ ಎಲ್ಲಾ ವಿಮಾನ ನಿಲ್ದಾಣಗಳಲ್ಲಿಯೂ ನನ್ನನ್ನು ಸ್ವಾಗತಿಸಿ,ಸಹಕರಿಸಿ ಬೀಳ್ಕೊಡುವ ಏರ್ಪಾಡನ್ನು ವಿಮಾನ ಸಂಸ್ಥೆಯವರು ಅತ್ಯಂತ ನಿಖರವಾಗಿ ಏರ್ಪಡಿಸಿದ್ದರು. special loungeನಲ್ಲಿ ನನ್ನ ಜೊತೆಯಲ್ಲಿದ್ದ ಹೆಣ್ಣುಮಗಳಿಗೆ ನನ್ನ suit caseಗೆ ಬೀಗ ಹಾಕದಿರುವ ವಿಷಯವನ್ನು ತಿಳಿಸಿದೆ. ವುಮಾನ ಹೊರಡಲು ಕೇವಲ ಇನ್ನು ೧೫ ನಿಮಿಷಗಳು ಮಾತ್ರ ಉಳಿದಿದೆ. ವಿಷಯವನ್ನು ತಿಳಿದ ವಿಮಾನ ಸಂಸ್ಥೆಯ ನಿಲ್ದಾಣದ ನೌಕರಳಾದ (Ground Staff) ಈ ಹೆಣ್ಣು ಅನೇಕ ಕಡೆ ಸಂಪರ್ಕಿಸಿ ಎರಡು ಕಾಲುಗಳನ್ನು ಒಂದು ಕಡೆಯಿಡದೆ ವಿಮಾನದಿಂದ ಮತ್ತೆ ನನ್ನ ಸೂಟ್‌ಕೇಸನ್ನು ಕೆಳಗಿಳಿಸಿ ಲಗ್ಗೇಜನ್ನು ಹಾಕುವ ತಿರುಗು ಮೇಜಿನ ಮೇಲೆ ಹಾಕಿಸಿ ನನ್ನನ್ನು ನಿಲ್ದಾಣದ ಕೆಳ ಅಂತಸ್ತಿನ ಪ್ರದೇಶಕ್ಕೆ ಕರೆದೊಯ್ದು "Please lock it now" ಎಂದು ನಗುನಗುತ್ತಲೇ ಹೇಳಿದಾಗ ನನಗೆ ಇವರ ಕಾರ್ಯಶ್ರದ್ಧೆಯ ಬಗ್ಗೆ ಆಶ್ಚರ್ಯವಾಗಿ ಅಭಿಮಾನದಿಂದ ವಂದನೆಗಳು ಎಂದಾಗ "ಇದು ನನ್ನ ಕರ್ತವ್ಯ" ಎಂದಳು ಆ ಹುಡುಗಿ. ತಮಾಷೆಯೆಂದರೆ ನಮ್ಮ ವಿಮಾನ ತಲುಪುವ ಮೊದಲೇ ನನ್ನ ಸೂಟ್‌ಕೇಸು ಸಿಂಗಪುರ ತಲುಪಿತ್ತು. ಹೇಗೆ ಎನ್ನುವುದು ನನಗೆ ಗೊತ್ತಿಲ್ಲ. ಇದೆಲ್ಲವನ್ನೂ ಮುಗಿಸಿಕೊಂಡು ವಿಮಾನ ಹತ್ತಲು ಇರುವ 'ಬೇ' (BAY) ನವರೆಗೂ ಮಿತ್ರ ಶ್ರೀ ಇಸೋಬೆಯವರು ನನ್ನ ಜೊತೆ ಬಂದರು. ಇಡೀ ಪ್ರವಾಸದಲ್ಲಿ ಜೊತೆಯಲ್ಲಿದ್ದು, ಪ್ರವಾಸದ ಯಶಸ್ಸಿಗೆ ಸಹಕರಿಸಿದ, ಸಹಾಯ ಮಾಡಿದ ಇವರನ್ನು ಕೊನೆಯದಾಗಿ ನನ್ನಿಂದ ಬೀಳ್ಕೊಡುವಾಗ ಮನಸ್ಸಿನಲ್ಲಿ ಗಲಿಬಿಲಿ ಎನ್ನಿಸಿತು. BAY ನಲ್ಲಿ ನನಗೆ ಕಾಣುವವರೆಗೂ ನಾನು ಅವರನ್ನು ಹಿಂತಿರುಗಿ ನೋಡುತ್ತಿದ್ದೆ. ಅವರೂ ನನ್ನನ್ನು ಹಿಂದಿರುಗಿ ನೋಡುತ್ತಿದ್ದರು. ಈ ನನ್ನ ಹೊರದೇಶದ ಪ್ರವಾಸಕ್ಕೆ ಕಾರಣರಾಗಿ ಕರ್ತೃವಾಗಿ ಸಹಕರಿಸಿದ ಗೆಳೆಯ ಇಸೋಬೆಯವರನ್ನು ಜೀವನದಲ್ಲಿ ನಾನು ಮರೆಯಲಾರೆ. ವಿಮಾನ ಹೊರಡಲು ಕೇವಲ ಎರಡು ನಿಮಿಷಗಳಿದ್ದಾಗ ನಾನು ನನ್ನ ಆಸನವನ್ನು ತಲುಪಿದೆ. ಇನ್ನೇನು ಹೊರಡಬೇಕೆನ್ನುವಾಗ ವಿಮಾನದ ಬಾಗಿಲೊಂದು ಹಾಕಿಕೊಳ್ಳದೇ ತಕರಾರು ಮಾಡಿತು. ಇದರಿಂದಾಗಿ ಸುಮಾರು ೩ ಗಂಟೆಗಳ ಕಾಲ ವಿಮಾನದಲ್ಲಿಯೇ ನಾವೆಲ್ಲರೂ ಕುಳಿತುಕೊಳ್ಳಬೇಕಾಯಿತು. ಇಡೀ ನನ್ನ ಪ್ರವಾಸದಲ್ಲಿ ವಿಮಾನದಲ್ಲಿ ಬೇಸರ ತಂದ ಸಮಯವೆಂದರೆ ಇದು. ೩ ಗಂಟೆಗಳ ಕಾಲ ನಂತರ ಬಾಗಿಲು ಸರಿಹೋಯಿತು. ದಟ್ಟವಾಗಿ ಕವಿದಿದ್ದ ಮೋಡವೂ ಸ್ವಲ್ಪ ಸ್ವಚ್ಛವಾಗಿ, ವಿಮಾನ ಹೊರಟಿತು. ಸಂಜೆ ೫.೦೦ ಗಂಟೆಗೆ ಕ್ಯಾಥೆ ಫೆಸಿಫಿಕ್ ವಿಮಾನ ಸಿಂಗಪೂರ್ ವಿಮಾನ ನಿಲ್ದಾಣದಲ್ಲಿ ಬಂದಿಳಿದಾಗ ಇಲ್ಲಿ ಲಗ್ಗೇಜನ್ನು ವಿಮಾನದವರೇ ಏರ್ ಇಂಡಿಯಾ ವಿಮಾನಕ್ಕೆ ಬದಲಾಯಿಸುವುದರಿಂದ ತೊಂದರೆಯಿರಲಿಲ್ಲ. ಇಲ್ಲಿಯೂ ಏರ್ ಇಂಡಿಯಾದ ಹೆಣ್ಣು ಮಗಳು ವಿಮಾನ ಇಳಿಯುತ್ತಿದ್ದಂತೆ ಸ್ವಾಗತಿಸಿ Air India Loungeಗೆ ಕರೆದೊಯ್ದು ಕಾಫಿ ಕುಡಿಸಿ ೭.೩೦ ಗಂಟೆಗೆ ವಿಮಾನ ಹೊರಡುವುದೆಂದೂ ಸುಮಾರು ೨ ಗಂಟೆಗಳ ಕಾಲ

ನಾನು ವಿಮಾನ ಹೊರಡುವುದೆಂದೂ ಸುಮಾರು ೨ ಗಂಟೆಗಳ ಕಾಲ ನಾನು ವಿಮಾನ ನಿಲ್ದಾಣದಲ್ಲಿರಬಹುದೆಂದು ತಿಳಿಸಿಹೋದಳು. ಸಣ್ಣಪುಟ್ಟ ವಸ್ತುಗಳನ್ನು ವ್ಯಾಪಾರ ಮಾಡಿಕೊಂಡು ನೂತನವಾಗಿ ಕಟ್ಟಿರುವ ಈ ಸುಂದರ ವಿಮಾನ ನಿಲ್ದಾಣದಲ್ಲಿ ೨ ಗಂಟೆ ಸುತ್ತಾಡಿ ಲೌಂಜ್‌ಗೆ ವಾಪಸ್ ಬರುವ ವೇಳೆಗೆ ಏರ್ ಇಂಡಿಯಾದ ಹೆಣ್ಣು ಮಗಳು ನನ್ನನ್ನು ಕರೆದೊಯ್ಯಲು ಹಾಜರಿದ್ದಳು. ಮತ್ತೊಮ್ಮೆ ಕಾಫಿ ಕುಡಿದು ಏರ್ ಇಂಡಿಯಾ ವಿಮಾನದಿಂದ ಇನ್ನೂ ಬೆಳಕಿರುವಾಗಲೇ ಹೊರಟೆವು. ವಿಮಾನ ಮೇಲಕ್ಕೇರಿದ ಮೇಲೆ ಇಡೀ ಸಿಂಗಪುರನ್ನು ಕಾಣಲು ಸಾಧ್ಯ. ಈ ಒಂದು ಪುಟ್ಟ ಪಟ್ಟಣವೇ ಒಂದು ರಾಷ್ಟ್ರ. ಬಹಳ ಜನ ಭಾರತೀಯರು ಇಲ್ಲಿ ವಾಸಿಸುತ್ತಿದ್ದಾರೆ. ಸಿಂಗಪುರದ ನಗರದಲ್ಲಿ ಹೋಗುವಾಗ ನಮಗೆ ಕಾಣಿಸುತ್ತದೆ ಇದು ತಮಿಳುನಾಡಿನ ಒಂದು ಭಾಗವೇನೋ ಎಂದು. ಅಷ್ಟೊಂದು ಜನ ಭಾರತೀಯರು ವಾಸವಾಗಿದ್ದಾರೆ ಇಲ್ಲಿ. ಕಳೆದ ಸಾರಿ ನಾನು ಹೋಗಿದ್ದಾಗ ತಿಳಿದುಬಂದಂತೆ ಇಲ್ಲಿಯ ಅಧ್ಯಕ್ಷರು ಹಾಗೂ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಭಾರತೀಯರು. ಸಿಂಗಪುರದ ವಿಮಾನ ನಿಲ್ದಾಣದಲ್ಲಿ ಕಾಣುವ ಹೆಣ್ಣುಗಳಲ್ಲಿ ಸುಮಾರು ನೂರಕ್ಕೆ ಐವತ್ತರಷ್ಟು ಸೀರೆಯುಟ್ಟ ಹೆಣ್ಣುಗಳು.

ಸುಮಾರು ೨೦ ದಿವಸಗಳ ಪ್ರವಾಸವನ್ನು ಮುಗಿಸಿ ತಾ. ೧೨ ರಂದು ರಾತ್ರಿ ೧೦. ೦೦ ಗಂಟೆಗೆ ಮದ್ರಾಸ್ ವಿಮಾನ ನಿಲ್ದಾಣದಲ್ಲಿಳಿದು ಭಾರತವನ್ನು ತಲುಪಿದೆ. ವಿಮಾನದಲ್ಲಿ ಏರ್ ಇಂಡಿಯಾದ ಮಿಸ್ಟರ್ ರಾವ್ ಎನ್ನುವ ಅಧಿಕಾರಿ ನಾನೂ ಉಡುಪಿಯವನು ಸಾರ್ ಎಂದು ಮಾತನಾಡಿಸಿ ಪರಿಚಯ ಮಾಡಿಕೊಂಡರು. ಈ ವಿಮಾನ ನಿಲ್ದಾಣದಲ್ಲಿಯೂ ಏರ್ ಇಂಡಿಯಾದ ಅಧಿಕಾರಿಗಳು ಸ್ವಾಗತಿಸಿ, Air port formalities ಗಳನ್ನು ಮುಗಿಸಿಕೊಂಡು ಹೊರಗೆ ಕರೆ ತಂದರು. ಹೊರಗಡೆ ಶ್ರೀ ಕೆ. ಎನ್. ಕೃಷ್ಣಮೂರ್ತಿ, ಶ್ರೀ ಶೆಲ್ವರಾಜ್, ಕೆ. ಎನ್. ಜೈ ರಾಂ ಮತ್ತು ಶ್ರೀ ಕೆ. ಸೂರ್ಯನಾರಾಯಣ ಗೌಡರವರು ಹಾಜರಿದ್ದು, ಸ್ವಾಗತಿಸಿ ಅಲ್ಲಿಂದ ಮದರಾಸಿನ ಕನೆಮಾರ ಹೋಟೆಲ್‌ಗೆ ಕರೆತಂದರು. ಭಾರತಕ್ಕೆ ಬಂದರೂ ವೇಳೆಯಾಗಿದ್ದರಿಂದ ಒಳ್ಳೆಯ ಊಟ ಸಿಗಲಿಲ್ಲ. ಇದ್ದುದನ್ನು ತಿಂದು ಮಲಗಿದೆ. ಬೆಳಗ್ಗೆ ೬.೩೦ಕ್ಕೆ ಬೆಂಗಳೂರಿಗೆ ಹೊರಡುವ ವಿಮಾನದಲ್ಲಿ ನಾನು ಹೊರಟೆ. ಸಾಮಾನುಗಳನ್ನು ಹಾಕಿಕೊಂಡು ಕಾರಿನಲ್ಲಿ ಇವರೆಲ್ಲರೂ ಹೊರಟರು. ಅನೇಕ ಗಂಟೆಗಳ ಕಾಲ ವಿಮಾನದಲ್ಲಿ ಪ್ರಯಾಣ ಮಾಡಿ ಅಭ್ಯಾಸವಾಗಿದ್ದ ನನಗೆ ಮದರಾಸಿನಿಂದ ಬೆಂಗಳೂರಿಗೆ ಹಾರುವ ಸುಮಾರು ೨೫-೩೦ ನಿಮಿಷಗಳ ಪ್ರಯಾಣ ತಿಳಿಯಲೇ ಇಲ್ಲ. ತಾ. ೧೩-೭-೮೬ರಂದು ಬೆಳಗ್ಗೆ ೭. ೩೦ ಗಂಟೆಗೆ ಬೆಂಗಳೂರು ವಿಮಾನ ನಿಲ್ದಾಣದಲ್ಲಿ ಇಳಿದಾಗ ನೂರಾರು ಜನ ಅಭಿಮಾನಿಗಳು ಸ್ವಾಗತಿಸಿದರು. ನಿಯೋಜಿತ ತಾರೀಖಿಗಿಂತ ಒಂದು ದಿನ ಮೊದಲೇ ಬಂದಿದ್ದರಿಂದ ಬಹಳ ಜನ ಅಭಿಮಾನಿಗಳಿಗೆ ಈ ದಿನ ನಿಲ್ದಾಣಕ್ಕೆ ಬರಲಾಗಲಿಲ್ಲವೆಂದು ತಿಳಿದುಬಂತು. ನಿಲ್ದಾಣದಿಂದ ಎಲ್ಲರೊಡನೆ ಮನೆ ತಲುಪಿದೆ.

□□



# ೩. ರೇಷ್ಮೆ ಕಸುಬಿನ ಬಗೆಗಿನ ಭಾಷಣಗಳು

ಕರ್ನಾಟಕದ ದಕ್ಷಿಣ ಭಾಗದಲ್ಲಿ ಜನಸಾಮಾನ್ಯರ ಜೀವನಾಧಾರವೆನಿಸಿರುವ ರೇಷ್ಮೆ ಕಸುಬು ನನ್ನ ಬದುಕು ರೂಪಿಸಲು ಸಹಕಾರಿಯಾಯಿತಲ್ಲದೆ ನನ್ನನ್ನು ಸಾಮಾಜಿಕವಾಗಿಯೂ ಮುನ್ನಡೆಸಿತು. ರಾಜಕೀಯವಾಗಿಯೂ ಪ್ರವರ್ಧಮಾನಕ್ಕೆ ಬರಲು ನೆರವಾಯಿತು. ಶಾಸಕನಾದೆ, ಮಂತ್ರಿಯೂ ಆದೆ. ಅನುಕೂಲವೆಂಬಂತೆ ನನ್ನನ್ನು ಬೆಳೆಸಿದ ರೇಷ್ಮೆ ಖಾತೆಯೇ ನನಗೆ ಸಿಕ್ಕಿತು. ಮಂತ್ರಿಯಾಗಿದ್ದ ಕಾಲಾವಧಿಯಲ್ಲಿ ಹಲವು ಸಭೆ- ಸಮಾರಂಭಗಳಲ್ಲಿ ಭಾಗವಹಿಸಿದ್ದೆ, ಆಗ ನಾನು ಮಾಡಿದ ಭಾಷಣಗಳನ್ನು ನಾಡಿನ ದಿನಪತ್ರಿಕೆಗಳು, ರೇಷ್ಮೆ ಇಲಾಖೆಯ ಮಾಸಪತ್ರಿಕೆ ವರದಿ ಮಾಡಿದ್ದವು. ಅವುಗಳನ್ನೆಲ್ಲಾ ಕ್ರೋಢಿಕರಿಸಿ ಪ್ರತ್ಯೇಕವಾಗಿ ಇಲ್ಲಿ ಸೇರ್ಪಡೆ ಮಾಡಲಾಗಿದೆ. ನಾನು ಕನ್ನಡ ನಾಡಿನ ರೇಷ್ಮೆ ಉದ್ಯಮ ಕುರಿತು ವಿಚಾರ ಮಾಡಿರುವ ಕೆಲವು ಚಿಂತನೆಗಳು ಈ ಭಾಷಣಗಳಲ್ಲಿ ಅಭಿವ್ಯಕ್ತಗೊಂಡಿವೆ.

## ಮೇ ೧೯೮೫

*ಸಂದರ್ಭ: ಕುಣಿಗಲ್ ರೇಷ್ಮೆ ಗೂಡಿನ ಮಾರುಕಟ್ಟೆಗೆ*
*'ಶಿಲಾನ್ಯಾಸ' ಮಾಡಿದಾಗ ಮಾಡಿದ ಭಾಷಣ*

ರೇಷ್ಮೆ ಕಸುಬು ಗಳಿಸಿಕೊಟ್ಟ ಹಣವನ್ನೇ ಬಳಸಿಕೊಂಡು ವಿದ್ಯಾಭ್ಯಾಸ ಪೂರೈಸಿ ಸಾರ್ವಜನಿಕ ಸೇವಾಕ್ಷೇತ್ರವನ್ನು ಆಯ್ಕೆ ಮಾಡಿಕೊಂಡಿರುವ ನಾನು ರೈತರ ದುಃಖ ದುಮ್ಮಾನಗಳನ್ನು ಅರ್ಥ ಮಾಡಿಕೊಂಡಿದ್ದೇನೆ. ನಿಮ್ಮಿಂದಲೇ ವಿಧಾನಸಭೆಗೆ ಆಯ್ಕೆಯಾಗಿ ನಿಮ್ಮ ಬಹುಮುಖ್ಯ ಕೃಷಿಯಾದ "ರೇಷ್ಮೆ" ಖಾತೆಗೂ ಸಚಿವನಾಗಿ ಈ ಕಟ್ಟಡದ ಆಸ್ತಿಭಾರ ಶಿಲೆಯನ್ನು ನೆಲೆಗೊಳಿಸುವಂತಾದುದು ನಿಮ್ಮ ಪ್ರೀತಿ ಮತ್ತು ಬೆಂಬಲದ ಬಲದಿಂದಲೇ ಎಂದು ತಿಳಿದಿದ್ದೇನೆ. ನೀವು ತೋರಿಸಿರುವ ವಿಶ್ವಾಸದ ಋಣಭಾರದಿಂದ ಕುಗ್ಗಿಹೋಗಿದ್ದಾನೆ. ಕೈಗಾರಿಕೆಯ ಉನ್ನತಿಗಾಗಿ ಸಾಧ್ಯವಿರುವ ಎಲ್ಲ ಕೆಲಸಗಳನ್ನು ನನ್ನ ಶಕ್ತಿಮೀರಿ ಪೂರೈಸುವನೆಂಬ ನಂಬಿಕೆ ನನಗಿದೆ. ಇಡೀ ಕೈಗಾರಿಕೆಯ ಜೀವನಾಡಿಯೆನಿಸಿದ ರೇಷ್ಮೆ ಬಿತ್ತನೆ ವಲಯದಲ್ಲಿ ಅಪೇಕ್ಷಿತ ರೀತಿಯಲ್ಲಿ ಅನುಕೂಲ ಮಾಡಿಕೊಟ್ಟಿರಲಿಲ್ಲವೆಂಬುದನ್ನು ಪ್ರಸ್ತಾಪಿಸದೆ ವಿಧಿಯಿಲ್ಲ. ಸೂಕ್ತ ಅನುಕೂಲಗಳಿಂದ ವಂಚಿತವಾಗಿದ್ದು, ಬಾಡಿಗೆ ಕಟ್ಟಡಗಳಲ್ಲಿ ಗೂಡು ಮಾರಾಟ ನಡೆಯುತ್ತಿದ್ದುದು ಇನ್ನು ಮುಂದೆ ತಪ್ಪುತ್ತದೆ. ಎಲ್ಲ ಅನುಕೂಲಗಳನ್ನು ಹೊಂದಲಿರುವ ಕಟ್ಟಡದ ನಿರ್ಮಾಣ ಕಾರ್ಯ ಅಲ್ಪ ಕಾಲಾವಧಿಯಲ್ಲಿಯೇ ಮುಗಿಯುತ್ತದೆ. ಈ ವಲಯದಲ್ಲಿ ಎಂಟು ಸ್ವಂತ ಕಟ್ಟಡಗಳು ತಲೆ ಎತ್ತುತ್ತವೆ. ಬಿತ್ತನೆ ಮೊಟ್ಟೆಯನ್ನು ಸದಾಕಾಲವು ಪೂರೈಸಬಲ್ಲ "ಬೃಹತ್ ಗ್ರೈನೈಜ್ ಕಟ್ಟಡ"ಗಳು ಸಹ ಪ್ರಾರಂಭವಾಗುತ್ತದೆ. ಕಟ್ಟಡ ಒಂದರಿಂದಲೇ ಎಲ್ಲ ಪ್ರಗತಿಯನ್ನು ಸಾಧಿಸಿಬಿಡಬಹುದೆಂದು ಅರ್ಥವಲ್ಲ - ವೈಜ್ಞಾನಿಕ ವಿಚಾರಗಳನ್ನು ಅರಿತುಕೊಂಡು ಅಳವಡಿಸುವುದರಲ್ಲಿಯೂ ಉತ್ಸಾಹ ತೋರಿದರೆ ಕಸುಬು ಬೆಳೆಯುತ್ತದೆ.

ಸುಡು ಬಿಸಿಲಿನಿಂದ ಕಂಗಾಲಾಗಿದ್ದ ವಾತಾವರಣದಲ್ಲಿ ಈ ಸಮಾರಂಭ ಪ್ರಾರಂಭವಾಯಿತು. ಆದರೆ ಈಗ 'ಧೋ' ಎಂದು ಮಳೆ ಸುರಿಯುತ್ತಿದೆ. ಈ ಸಭೆ-ಸಮಾರಂಭಗಳು ಅರ್ಧದಲ್ಲಿಯೇ ನಿಂತುಹೋದರೂ ಸರಿಯೇ ರೈತನ ನಗುಮೊಗಕ್ಕೆ ಆಧಾರವಾದ ಮಳೆಯು ಹೀಗೆಯೇ ಸಮೃದ್ಧಿಯಾಗಲೆಂದು ಹಾರೈಸುತ್ತೇನೆ.

## ಜೂನ್ ೧೯೮೫

*ಸಂದರ್ಭ: ಚಾಮರಾಜನಗರದ 'ಮಾದರಿ ರೇಷ್ಮೆ ಬಿತ್ತನೆ ಕೋಠಿ ಕಟ್ಟಡ' ದ ಉದ್ಘಾಟನಾ ಸಮಾರಂಭದಲ್ಲಿ ಮಾಡಿದ ಉದ್ಘಾಟನಾ ಭಾಷಣ.*

ನಾಡಿನ ಬೆನ್ನೆಲುಬು ಎಂದು ಪ್ರಶಂಸಿಸಲ್ಪಡುತ್ತಿರುವ ರೈತನ ಬೆನ್ನು ಬಗ್ಗಿ ಹೋಗಿ ಅವನ ಆರ್ಥಿಕಸ್ಥಿತಿ ಚಿಂತಾಜನಕವಾಗುವುದಾದರೆ ಅಂತಹ ಯೋಜನೆಗಳ ಫಲ ಶೃತಿಯನ್ನು ವ್ಯಗ್ರವಾಗಿ ಪ್ರಶ್ನಿಸಿ ಸಂಬಂಧಿಸಿದವರೆಲ್ಲರನ್ನೂ ಇಂದು ತರಾಟೆಗೆ ತೆಗೆದುಕೊಳ್ಳುವ ಸನ್ನಿವೇಶ ಉಂಟಾಗಿದೆ. ಸಾರ್ವಜನಿಕ ಸೇವಾ ಕ್ಷೇತ್ರದಲ್ಲಿ ಸಾಮಾನ್ಯ ರೈತರ ಅದರಲ್ಲೂ ರೇಷ್ಮೆ

ಬೆಳೆಗಾರರ ಸುಖದುಃಖಗಳನ್ನು ದುಗುಡದುಮ್ಮಾನಗಳನ್ನು ಬಹು ಹತ್ತಿರದಿಂದ ಕಂಡವನು ನಾನು. ರೇಷ್ಮೆ ಬೆಳೆಗಾರನ ಮಗನಾಗಿರುವುದೇ ನನಗೆ ನೋವು. ಏಕೆಂದರೆ ಉದ್ಯಮದ ಕಷ್ಟ - ಕಾರ್ಪಣ್ಯಗಳ ಅರಿವು ನನಗಿದೆ. ನನ್ನ ಆತುರದ ಮನೋಭಾವ ಹಲವರಿಗೆ ಕಿರಿಕಿರಿಯನ್ನುಂಟುಮಾಡಬಹುದು. ಆದರೆ ನಾನು ನನ್ನ ಅಭಿಪ್ರಾಯ ವ್ಯಕ್ತಪಡಿಸದೆ ಅನ್ಯ ಮಾರ್ಗವಿಲ್ಲ.

ಅಧಿಕಾರಿಗಳಲ್ಲಿ ಅಶ್ರದ್ಧೆ ಬಂದುದಾದರೆ ಇಡೀ ಬೆಳೆಗಾರರ ಆರ್ಥಿಕ ಸ್ಥಿತಿಯೇ ದುರ್ಬಲಗೊಳ್ಳುತ್ತದೆಂಬುದನ್ನು ಮರೆಯಬಾರದು. ಬೆಳೆ ಕಳೆದುಕೊಂಡ ರೇಷ್ಮೆ ಬೆಳೆಗಾರನ ಮನೆಯ ಸ್ಥಿತಿ, ಮಾನಸಿಕ ಕ್ಲೇಶದ ಚಿತ್ರ, ಇಲಾಖೆಯ ಅಧಿಕಾರಿಗಳ ಕಣ್ಮುಂದೆ ಸುಳಿಯಬೇಕು. ಸರ್ಕಾರಿ ಅಧಿಕಾರಿಗಳಲ್ಲಿ ಹಿಂದೆ ಇದ್ದ ಕರ್ತವ್ಯಪ್ರಜ್ಞೆ ಇತ್ತೀಚಿನ ವರ್ಷಗಳಲ್ಲಿ ಕಾಣುತ್ತಿಲ್ಲ. ರೇಷ್ಮೆ ಗೂಡಿನ ಇಳುವರಿ ಅಧಿಕಗೊಂಡು ರೈತನ ಶ್ರಮಕ್ಕೆ ಲಾಭ ಸಿಕ್ಕಬೇಕು, ಅತ್ಯುತ್ತಮ ಗುಣಮಟ್ಟದ ಗೂಡು ಉತ್ಪಾದನೆಯಾಗಿ ಕಚ್ಚಾರೇಷ್ಮೆಯ ಉತ್ಪಾದನೆಯಲ್ಲಿ ಕರ್ನಾಟಕ ಮುಂದೆ ಬರಬೇಕು ಎನ್ನುವುದೇ ಇಲಾಖೆಯ ಉದ್ದೇಶ. ಇದನ್ನು ಕಾರ್ಯಗತಗೊಳಿಸಬೇಕಾದರೆ ಅದರ ಹೊಣೆಹೊತ್ತ ಅಧಿಕಾರಿಗಳು ಮತ್ತು ಸಿಬ್ಬಂದಿ ಅರ್ಪಣಾ ಮನೋಭಾವದಿಂದ ಕೆಲಸ ಮಾಡಬೇಕು.

"ರೋಗ ರಹಿತ ಬಿತ್ತನೆಯನ್ನು ಪಡೆಯುವುದು ಉತ್ಪಾದಿಸಿದ ಗೂಡುಗಳಿಗೆ ಸರಿಯಾದ ಬೆಲೆ ನಿರೀಕ್ಷಿಸುವುದು " ರೈತನ ಸಹಜ ಬಯಕೆ. "ಬೆಲೆ ಸಿಕ್ಕುವ ಬೆಳೆ"ಯನ್ನು ರೈತ ಎದುರು ನೋಡುತ್ತಾನೆ. ಉತ್ತಮ ಗುಣಮಟ್ಟದ ರೇಷ್ಮೆ ಮೊಟ್ಟೆ ಸಕಾಲಕ್ಕೆ ಬೆಳೆಗಾರನ ಕೈ ಸೇರಬೇಕು. ಅದಕ್ಕಾಗಿ ಇಂತಹ ಸುಸಜ್ಜಿತ ಬೃಹತ್ ಕಟ್ಟಡಗಳನ್ನು ನಿರ್ಮಿಸಿ ಮುನ್ನಡಿಯಿಡಲಾಗಿದೆ. ವಿತರಣೆಯಾಗಲಿರುವ ರೇಷ್ಮೆ ಮೊಟ್ಟೆಗಳು ಪ್ರಮಾಣದಲ್ಲಿ ಹೆಚ್ಚಾದರೆ ಸಾಲದು ಗುಣಮಟ್ಟದಲ್ಲಿಯೂ ಉತ್ತಮಗೊಳ್ಳಬೇಕು. ಈಗ ನಿರ್ಮಾಣದ ವಿವಿಧ ಹಂತಗಳಲ್ಲಿರುವ ಹತ್ತು ಬಿತ್ತನೆ ಕೋಠಿಯ ಕಟ್ಟಡಗಳೂ ಕಾರ್ಯಾರಂಭ ಮಾಡಿದ ಮೇಲೆ ಶೇಕಡಾ ೮೦ ಭಾಗದಷ್ಟು ಮೊಟ್ಟೆಗಳ ಪೂರೈಕೆ ಇವುಗಳಿಂದ ಸಾಧ್ಯ. ಉತ್ತಮ ಗುಣಮಟ್ಟದ ಮೊಟ್ಟೆಯ ಉತ್ಪಾದನೆಗೆ ಅತ್ಯುತ್ತಮವಾಗಿ ಬೆಳದ ಗೂಡು ಬೇಕು. ಇದನ್ನು ಪೂರೈಸಬೇಕಾದ ಬೆಳೆಗಾರ ಸುಧಾರಿತ ಕ್ರಮದಲ್ಲಿ ಹುಳು ಸಾಕಾಣಿಕೆಗೆ ಗಮನ ಕೊಡಬೇಕು. ಸುಧಾರಿತ ತಾಂತ್ರಿಕ ವಿಧಾನಗಳನ್ನು ಪ್ರಚುರಪಡಿಸಲಾಗುತ್ತಿದೆ. 'ಸಂಪ್ರದಾಯಶರಣ' ಸ್ವಭಾವವನ್ನು ಬದಿಗಿಟ್ಟು ಮುಂದುವರಿದ ಕ್ರಮಗಳನ್ನು ರೂಢಿಗೆ ತರುವುದರಲ್ಲಿ ರೈತ ಹಿಂದೆ ಬೀಳಬಾರದು.

ರೇಷ್ಮೆ ಉದ್ಯಮದ ಸಮಸ್ಯೆಗಳು ರೇಷ್ಮೆಯಷ್ಟೇ ನಾಜೂಕಿನವು. ಕರ್ನಾಟಕದ ಒಂದೊಂದು ಪ್ರದೇಶಕ್ಕೂ ತನ್ನದೇ ಆದ ಸಮಸ್ಯೆಗಳಿವೆ. ಹವಾಮಾನ, ಭೂಗುಣ, ನೀರು ಇತ್ಯಾದಿಗಳು. ಕರ್ನಾಟಕದ ರೈತನು ವಾಸಿಸುತ್ತಿರುವ ಪರಿಸರ ಮತ್ತು ಪರಿಸ್ಥಿತಿಯನ್ನು ಆಧಾರವಾಗಿಟ್ಟುಕೊಂಡು ಅನುಕೂಲಕರ 'ತಳಿ' ಗಳನ್ನು ಒದಗಿಸಿಕೊಡುವುದರಲ್ಲಿ ಸಂಶೋಧಕರು ಮುಂದಾಗಬೇಕು. ನಮ್ಮ ರಾಜ್ಯದ ಮೂರು ವಿಶ್ವವಿದ್ಯಾಲಯಗಳಿಗೆ ಸಂಶೋಧನೆಗಳನ್ನು ನಡೆಸಲು ಅಪಾರ ಹಣ ನೀಡಲಾಗಿದೆ. ಆದರೆ ಅವರಿಂದ ಪರಿಣಾಮಕಾರಿ

ಸಂಶೋಧನೆಗಳು ಇನ್ನೂ ಹೊರ ಬೀಳಬೇಕಾಗಿದೆ. ಮೈಸೂರಿನಲ್ಲಿರುವ ಕೇಂದ್ರ ಸಂಶೋಧನಾಲಯದಿಂದ ರಾಜ್ಯ ಬಹಳಷ್ಟು ನಿರೀಕ್ಷಿಸುತ್ತಿದೆ. ರೇಷ್ಮೆ ಹುಳುಗಳನ್ನು ಕಾಡುತ್ತಿರುವ ಅನೇಕ ರೋಗಗಳನ್ನು ನಿಯಂತ್ರಿಸುವಲ್ಲಿ ಮತ್ತು ರೋಗನಿರೋಧಕ ಕ್ರಮಗಳನ್ನು ರೈತರಿಗೆ ಮುಟ್ಟಿಸುವಲ್ಲಿ ಇಲಾಖೆಯು ಕೆಲಸ ಮಾಡಿಲ್ಲವೆಂದು ಹೇಳಲಾರೆ. ವೈಜ್ಞಾನಿಕ ವಿಚಾರಗಳನ್ನು ಬೆಳೆಗಾರನಿಗೆ ತಲುಪಿಸುವಲ್ಲಿ ಕೆಲಸ ನಡೆದಿದೆ. ಇದರ ಪರಿಣಾಮವೇ ಗೂಡಿನ ಇಳುವರಿಯಲ್ಲಿ ಸುಧಾರಣೆ. ಆದರೆ ಇದು ಇನ್ನೂ ಹೆಚ್ಚಿನ ರೀತಿಯಲ್ಲಿ ವ್ಯಾಪಕವಾಗಿ ಆಗಬೇಕು. ರೈತರೂ ಈ ಬಗ್ಗೆ ಜಾಗೃತರಾಗಬೇಕು.

### ವಿದೇಶೀ ರೇಷ್ಮೆ ಆಮದು ಬೇಡ

ಇಲ್ಲಿನ ಕಚ್ಚಾ ರೇಷ್ಮೆಯ ಮಾರಾಟದ ಬೆಲೆ ಹೆಚ್ಚಿದೆ ಎಂಬ ಕಾರಣಕ್ಕಾಗಿ ೫೦೦ ಟನ್ ವಿದೇಶೀ ರೇಷ್ಮೆಯನ್ನು ಆಮದು ಮಾಡಿಕೊಳ್ಳಲು ಕೇಂದ್ರ ಸರ್ಕಾರ ಉದ್ದೇಶಿಸಿರುವುದನ್ನು ಕರ್ನಾಟಕದ ಜನತೆ ಸಂಘಟಿತರಾಗಿ ಪ್ರತಿಭಟಿಸಬೇಕು. ರಾಜ್ಯದ ರೇಷ್ಮೆ ಉದ್ಯಮಕ್ಕೆ ಕೆಡಕನ್ನುಂಟು ಮಾಡುವ ಈ "ಆಮದು" ವಿರುದ್ಧ ಕೇಂದ್ರ ಸರ್ಕಾರದ ಗಮನ ಸೆಳೆಯಲು ಪಕ್ಷಾತೀತ ಪ್ರಯತ್ನವಾಗಬೇಕು. ಉದ್ಯಮದ ಸಮಗ್ರ ಅಭಿವೃದ್ಧಿಯ ದೃಷ್ಟಿಯಿಂದ ಈಗಿರುವ ಸಾಕಣೆ ಪದ್ಧತಿಯನ್ನು ಹಿಂದೆ ತಳ್ಳಿ, ಶ್ವೇತಕ್ರಾಂತಿಯ ಕಡೆ ಗಮನಹರಿಸಬೇಕು. ಈ ಪ್ರದೇಶದಲ್ಲಿ ರೂಢಿಯಲ್ಲಿರುವ ಸೀನಿಚಿ ಸಂಸ್ಕರಣದ ತಳಿ ಸಾಕಣೆ ನಿಲ್ಲಲೇಬೇಕು, ಮಂತ್ರಿಯಾಗಿ ಆದೇಶ ನೀಡುತ್ತಿದ್ದಾನೆಂದು ಭಾವಿಸಬೇಡಿ. ಸಾಮಾನ್ಯ ರೈತನಾಗಿ ಕೈ ಮುಗಿದು ಕೇಳಿಕೊಳ್ಳುತ್ತೇನೆ. ಹಳೆಯ ತೋಟಗಳನ್ನು ತೆಗೆದು ಎಂ - ೫ ತಳಿಯನ್ನು ನಾಟಿ ಮಾಡುವುದು, ಸುಧಾರಿತ ಬೈವೋಲ್ಟಿನ್ ತಳಿಯಸಾಕಣೆ ಮಾಡುವುದು ಅಗತ್ಯ. ರಾಜ್ಯದ ಇನ್ನಿತರ ಪ್ರದೇಶಗಳ ಬೆಳೆಗಾರರು ಸುಧಾರಿತ ಮಿಶ್ರತಳಿ ಮತ್ತು ಬೈವೋಲ್ಟಿನ್ ತಳಿಯ ಸಾಕಣೆ ಮಾಡುವುದು ಅಗತ್ಯ. ರಾಜ್ಯದ ಇನ್ನಿತರ ಪ್ರದೇಶಗಳ ಬೆಳೆಗಾರರು ಸುಧಾರಿತ ಮಿಶ್ರತಳಿ ಮತ್ತು ಬೈವೋಲ್ಟಿನ್ ತಳಿಗಳನ್ನು ಸಾಕಿ ಹಣ ಸಂಪಾದನೆ ಮಾಡುತ್ತಿರುವಾಗ ಈ ಪ್ರದೇಶದ ರೈತರು ಇತರ ಕಾರಣಗಳನ್ನು ಮುಂದು ಮಾಡಿ ಸಂಪಾದನೆಯಲ್ಲಿ ಹಿಂದುಳಿಯಬಾರದು.

## ಜುಲೈ ೧೯೮೫

*ಸಂದರ್ಭ: ಬರಗಾಲ ಪೀಡಿತ ಪ್ರದೇಶಗಳ ಅಭಿವೃದ್ಧಿ ಯೋಜನೆಯ ಅಡಿಯಲ್ಲಿ ಕೊರಟಗೆರೆ ತಾಲ್ಲೂಕು ಅರಸಾಪುರದಲ್ಲಿ ಚಾಕಿ ಸಾಕಣೆ ಕೇಂದ್ರವನ್ನು ಉದ್ಘಾಟಿಸಿದಾಗ ಮಾತನಾಡಿದ್ದು*

ರೇಷ್ಮೆ ಹುಳುಗಳನ್ನು ಪ್ರಾಥಮಿಕ ಹಂತದಲ್ಲಿ ಅತ್ಯಂತ ಎಚ್ಚರದಿಂದ ಸಾಕಣೆ ಮಾಡಿದರೆ ಅವುಗಳಿಗೆ ರೋಗನಿರೋಧಕ ಶಕ್ತಿ ಇರುವುದಲ್ಲದೆ ಗೂಡಿನ ಇಳುವರಿ ಉತ್ತಮಗೊಳ್ಳುವುದು ಎಂಬ ಮೂಲತತ್ವವನ್ನು ಬಹುಮಂದಿ ಬೆಳೆಗಾರರು ಅಲಕ್ಷ್ಯ ಮಾಡಿದ್ದಾರೆ ಅಥವಾ ಪೂರ್ಣ ವೈಜ್ಞಾನಿಕ ಕ್ರಮದಲ್ಲಿ ಸಾಕಣೆ ಕೈಗೊಳ್ಳಲು ಅವರ ಸಾಕಣೆ ಮನೆಗಳಲ್ಲಿ ಸೌಲಭ್ಯಗಳಿಲ್ಲ. ಬಹುಪಾಲು ರೈತರು ವಾಸದ ಮನೆಯಲ್ಲಿಯೇ ಸಾಕಣೆ ಮಾಡುತ್ತಿರುವ ಅನಿವಾರ್ಯ

ಪರಿಸ್ಥಿತಿಯೂ ಇದೆ. ಸರ್ಕಾರವು ಈ ನಿಟ್ಟಿನಲ್ಲಿ ಬೆಳೆಗಾರರಿಗೆ ಕಲ್ಪಿಸಲು ಚಾಕಿ ಸಾಕಣೆ ಕೇಂದ್ರಗಳನ್ನು ತೆರೆದಿದೆ. ಈ ಸೌಲಭ್ಯದ ಸದುಪಯೋಗ ಮಾಡಿಕೊಳ್ಳಲು ಬೆಳೆಗಾರರು ಮುಂದೆ ಬರಬೇಕು.

## ಆಗಸ್ಟ್ ೧೯೮೫

*ಸಂದರ್ಭ: ಮೈಸೂರಿನಲ್ಲಿರುವ ಕೇಂದ್ರ ರೇಷ್ಮೆ ಸಂಶೋಧನೆ ಮತ್ತು ಶಿಕ್ಷಣ ಸಂಸ್ಥೆಯವರು ಹೊಸದಾಗಿ ರೂಪಿಸಿದ "ಸುಧಾರಿತ ಚರಕಾ" ಗಳನ್ನು ಉದ್ಯಮಿಗಳಿಗೆ ಪರಿಚಯಿಸಿ ಬಿಡುಗಡೆ ಮಾಡಲು ಕುಣಿಗಲ್‌ನಲ್ಲಿ ಏರ್ಪಡಿಸಲಾಗಿದ್ದ ಸಮಾರಂಭದಲ್ಲಿ ರೇಷ್ಮೆ ಸಚಿವನಾಗಿ ಸುಧಾರಿತ ಚರಕಾವನ್ನು ಬಿಡುಗಡೆ ಮಾಡಿದಾಗ*

ಭಾರತದ ರೇಷ್ಮೆ ಉದ್ಯಮ ಪ್ರಗತಿಪಥದಲ್ಲಿ ಮುಂದುವರಿಯುತ್ತಿರುವ ಸಂದರ್ಭದಲ್ಲಿ ಉದ್ಯಮದ ನಾನಾ ಪ್ರಕಾರಗಳಲ್ಲಿ ದುಡಿಯುತ್ತಿರುವವರಿಗೆ ನಷ್ಟವಾಗದ ರೀತಿಯಲ್ಲಿ ಸಂಶೋಧನೆ ನಡೆಯುತ್ತಿರುವುದು ಯೋಗ್ಯವಾದದು. ರೇಷ್ಮೆ ಬೆಳೆಗಾರನಿಗಿರುವ ಕಷ್ಟ-ನಿಷ್ಟುರಗಳನ್ನು ಬಗೆಹರಿಸಲು ಸಂಶೋಧನಾ ಸಂಸ್ಥೆಯು ಸೂಕ್ತ ರೀತಿಯಲ್ಲಿ ನೆಲವಾಗಿಲ್ಲವೆಂಬ ಅತೃಪ್ತಿ ನನ್ನದಾಗಿದ್ದರೂ ಏನೇನೋ ಕೆಲಸಗಳೇ ಆಗಿಲ್ಲವೆಂದು ನಿಷ್ಟುರವಾಗಿ ದೂರುವುದು ನನ್ನ ಉದ್ದೇಶವಲ್ಲ. ಈ ಸಂಸ್ಥೆಯು ಉತ್ತಮವಾದ ಮಿಶ್ರತಳಿ ಮೊಟ್ಟೆಗಳನ್ನು ರೈತರಿಗೆ ಒದಗಿಸುವುದರಲ್ಲಿ ಗಮನಾರ್ಹ ಕೆಲಸವನ್ನೇನೋ ಮಾಡಿದೆ. ಆದರೆ ರೈತ ಬೆಳೆ ಕಳೆದುಕೊಳ್ಳುವ ಶೇಕಡವಾರು ಪ್ರಮಾಣ ಕಡಿಮೆಯಾಗಬೇಕು ಎಂಬ ಕಳಕಳಿ ನನ್ನದು.

ರೇಷ್ಮೆ ನೂಲು ಬಿಚ್ಚಾಣಿಕೆಯಲ್ಲಿ ಕೆಲವು ಮೂಲಭೂತ ಬದಲಾವಣೆಗಳಾಗಬೇಕೆಂದು ನಿರೀಕ್ಷಿಸುವುದು ವಾಸ್ತವ. ನಮ್ಮ ನಾಡಿನ ರೇಷ್ಮೆ ಉದ್ಯಮಕ್ಕೆ ಈ ಸುಧಾರಿತ ಚರಕಾದಿಂದ ಹೆಚ್ಚು ಅನುಕೂಲವಾಗಲಿ. ಮೈಸೂರು ರೇಷ್ಮೆ ಬಿತ್ತನೆ ವಲಯದ ಬೆಳೆಗಾರರು ಇತರ ಕಡೆಯವರೊಂದಿಗೆ ಹೋಲಿಸಿದಾಗ ಆರ್ಥಿಕವಾಗಿ ಹಿಂದುಳಿದಿದ್ದಾರೆ. ಇವರು ಬೆಳೆದ ಬಹುಪಾಲು ಗೂಡು ಬಿತ್ತನೆಗೆ ಮಾರಾಟವಾಗುತ್ತಿಲ್ಲ. ಆಗ ರೈತನಿಗೆ ಎಷ್ಟು ನಷ್ಟವಾಗುತ್ತದೆಂಬುದನ್ನು ಯೋಚಿಸಿದಾಗ ಗಾಬರಿಯಾಗುತ್ತದೆ. ಇಲ್ಲಿ ಬೆಳೆದ ಎಲ್ಲ ಗೂಡುಗಳನ್ನು ಸರ್ಕಾರವೇ ಖರೀದಿ ಮಾಡುವ ವಿಚಾರ ಸರ್ಕಾರದ ತೀವ್ರ ಪರಿಶೀಲನೆಯಲ್ಲಿದೆ. ಈ ಸಂದರ್ಭದಲ್ಲಿ ಒಟ್ಟು ೬ ಸಹಸ್ರ ರೂಪಾಯಿ ಬೆಲೆಬಾಳುವ ನಾಲ್ಕು ಚರಾಕಗಳನ್ನು ಮುಫತ್ತಾಗಿ ವಿತರಣೆ ಮಾಡಿರುವುದು ನನಗೆ ತುಂಬಾ ಸಂತೋಷವಾಗಿದೆ.

## ಸೆಪ್ಟೆಂಬರ್ ೧೯೮೫

*ಸಂದರ್ಭ: "ರೇಷ್ಮೆ ಉದ್ಯಮದ ಅಭಿವೃದ್ಧಿಗಾಗಿ ರಾಷ್ಟ್ರೀಯ ಮಟ್ಟದ ಕಾರ್ಯಾಗಾರ" ವನ್ನು ಕೇಂದ್ರ ರೇಷ್ಮೆ ಮಂಡಳಿಯು ರಾಜಧಾನಿ ಬೆಂಗಳೂರಿನಲ್ಲಿ ಏರ್ಪಡಿಸಿದ್ದಾಗ ಮಾಡಿದ ಪ್ರಾಸ್ತಾವಿಕ ಭಾಷಣ.*

**ಬೆಳೆ ಆಗಬೇಕು, ಬೆಲೆ ಸಿಕ್ಕಬೇಕು**

ರೇಷ್ಮೆ ಉದ್ಯಮದಲ್ಲಿ ನಾನು ಸಂಶೋಧಕನಲ್ಲ,ವಿಜ್ಞಾನಿಯಲ್ಲ, ಆದರೆ ಒಬ್ಬ ರೇಷ್ಮೆ ಬೆಳೆಗಾರನ ಅದರ ಕಷ್ಟ- ಕಾರ್ಪಣ್ಯಗಳ ಅರಿವು ಇರುವವ. ನಮ್ಮ ನಾಡಿನ ರೈತರ ಜೀವನದಲ್ಲಿ ಹಾಸುಹೊಕ್ಕಾಗಿರುವ ಈ ಕಸುಬು ರೈತನ ಆರ್ಥಿಕ ಸ್ಥಿತಿಯನ್ನು ಮತ್ತಷ್ಟು ಉತ್ತಮಪಡಿಸಬೇಕೆಂಬ ಕಳಕಳಿ ನನ್ನದು. ನನ್ನ ಗ್ರಾಮದಲ್ಲಿ ವಾಸಿಸುವ ಜನ ಸಿರಿವಂತರಲ್ಲ. ಜೋಪಡಿಗಳಲ್ಲಿಯೇ ಬದುಕುಳಿಯುತ್ತಿರುವವರು. ಅವರಿಗಿರುವ ತುಂಡು ನೆಲವನ್ನೇ ನಂಬಿ ಕುಳಿತವರು. ನಿತ್ಯದ ಖರ್ಚಿಗೆ ಹಣ ಕೊಡುವ ಬೆಳೆಯಾಗಿ ರೇಷ್ಮೆಯನ್ನು ಅವಲಂಬಿಸಿರುವವರು. ಅವರಿಗೆ ಬೆಳೆ ತಾಪತ್ರಯವಿಲ್ಲದೆ ಆಗಬೇಕು. ರೋಗಗಳಿಂದ ಬೆಳೆ ಮುಕ್ತವಾಗಬೇಕು. ಬೆಳೆ ಕಳೆದುಕೊಳ್ಳುವ ಪ್ರಮಾಣ ತೀರಾ ಕಡಿಮೆ ಆಗಬೇಕು. ಬೆಳೆದ ಬೆಳೆಗೆ ಲಾಭಕರ ಬೆಲೆ ಸಿಗಬೇಕು. ಅದಕ್ಕಾಗಿ ನೀವೆಲ್ಲ ಕಾರ್ಯಕ್ರಮ ರೂಪಿಸಬೇಕು. ಬೈವೋಲ್ಟಿನ್ ತಳಿ ಬೆಳೆಯುವ ಪ್ರಯತ್ನ ನಾವು ಮಾಡಿದೆವು. ಆದರೆ ಅದ್ಭುತ ವಿಜಯ ನಮ್ಮದಾಗಲಿಲ್ಲ. ಈ ನಿಷ್ಠುರ ಸತ್ಯವನ್ನು ಪ್ರಸ್ತಾಪಿಸಿದ ಮಾತ್ರಕ್ಕೆ ನನಗೆ ಬೈವೋಲ್ಟಿನ್ ಅಭಿವೃದ್ಧಿಯಲ್ಲಿ ಆಸೆ ಇಲ್ಲವೆಂದು ಭಾವಿಸಬೇಡಿ. ಆದರೆ ನಾವು ಅಂತಹ ಪ್ರಯತ್ನ ನಡೆಸಿದಾಗಲೆಲ್ಲ - ಬೈವೋಲ್ಟಿನ್ ಬೆಳೆಯುವಲ್ಲಿ - ಸೋಲಿನ ಹಾದಿಯಲ್ಲಿಯೇ ಸಾಗಿದವೇಕೆ? ನಮ್ಮಲ್ಲಿರುವ ಅನುಕೂಲಗಳಿಗಿಂತ ಹೆಚ್ಚಿನ ಅವಕಾಶಗಳನ್ನು ನಿರೀಕ್ಷಿಸುವ ಆ ತಳಿಯನ್ನು ನಂಬಿ ಪದೇ ಪದೇ ತಪ್ಪೆಸಗಿ ನಷ್ಟಕ್ಕೆ ಒಳಗಾಗುವುದನ್ನು ತಪ್ಪಿಸಿರಿ. ನಮ್ಮ ವಾತಾವರಣಕ್ಕೆ ಹೊಂದಿಕೊಳ್ಳುವಂತಹ ರೋಗನಿರೋಧಕ ಶಕ್ತಿಯನ್ನು ಒಳಗೊಂಡಂತಹ "ಬೈವೋಲ್ಟಿನ್" ತಳಿಯನ್ನು ಪತ್ತೆಮಾಡಿಕೊಡಿ. ಇಲ್ಲದಿದ್ದರೆ ನಮ್ಮ ನಾಡಿನ ರೈತ ತಾನು ವಹಿಸಿದ ಶ್ರಮಕ್ಕೆ ತಕ್ಕಂತಹ ರೀತಿಯಲ್ಲಿ ಹಣ ಗಳಿಸುವುದಿಲ್ಲ. ಅದಕ್ಕೆ ಬದಲಾಗಿ ಸಾಲಗಾರನಾಗುತ್ತಾನೆ. ಈ ನಿಟ್ಟಿನಲ್ಲಿ ನಮಗೆ ಮಾರ್ಗದರ್ಶನ ಮಾಡಿ. ಮಳೆಗಾಗಿ ಮುಗಿಲು ನೋಡುತ್ತಾ ದಿನಗಳಲ್ಲಿ ಕಳೆಯುತ್ತಿದ್ದೇವೆ. ನೀರಾವರಿ ಸೌಲಭ್ಯದ ತೋಟಗಳು ತುಂಬಾ ಕಡಿಮೆ. ಮಳೆಯನ್ನೇ ಆಶ್ರಯಿಸಿರುವ ಹಿಪ್ಪುನೇರಳೆಯನ್ನಿಟ್ಟುಕೊಂಡಿರುವ ಬೆಳೆಗಾರನ ನೆರವಿಗೆ ಸಂಶೋಧಕರು ಬರಬೇಕು. ಹೊಸ ಹೊಸ ವಿಧಾನಗಳಲ್ಲಿ ಹಿಪ್ಪುನೇರಳೆ ತೋಟವನ್ನು ನಿರ್ವಹಿಸುವ ರೀತಿ-ನೀತಿಗಳು ರೂಪಿಸಲ್ಪಡಬೇಕು. ಆಗ ನಿಜವಾದ ಅರ್ಥದಲ್ಲಿ ದುರ್ಬಲರನ್ನು ಸಬಲರನ್ನಾಗಿಸುವ ಕಸುಬು ಇದು ಎನ್ನುವ ಸಾರ್ಥಕತೆ ಬರುತ್ತದೆ.

14360

ದೇಶದಲ್ಲಿ ಆಗುತ್ತಿರುವ ಉತ್ಪಾದನೆಯಲ್ಲಿ ಬಹುಪಾಲನ್ನು ಕರ್ನಾಟಕವೇ ಕೊಡುತ್ತದೆಯೆಂದ ಮೇಲೆ ಕರ್ನಾಟಕದ ರೇಷ್ಮೆ ಉದ್ಯಮದ ಕತ್ತು ಹಿಸುಕುವಂತಹ ಪ್ರಯತ್ನಗಳು ಆಗಬಾರದು. ಇದರಲ್ಲಿ ಲಕ್ಷಾಂತರ ರೈತರ, ಉದ್ಯಮಿಗಳ, ಕುಟೀರ ಕೈಗಾರಿಕೆಯವರ 'ಅನ್ನ'ದ ಪ್ರಶ್ನೆ ಅಡಗಿದೆ. ಬೆರಳೆಣಿಕೆಯಲ್ಲಿರುವ ಪ್ರಭಾವಶಾಲಿ ವಣಿಕರು ತಮ್ಮ ಕಿಸೆ ತುಂಬಿಕೊಳ್ಳಲು ಲಕ್ಷ-ಲಕ್ಷ ಕುಟುಂಬಗಳ ಬದುಕನ್ನೇ ಹಾಳುಗೆಡುವಂತಹ "ಕಚ್ಚಾ ರೇಷ್ಮೆ" ಆಮದಿಗೆ ಕೇಂದ್ರ ಸರ್ಕಾರವನ್ನು ಒತ್ತಾಯಿಸಿ ಸಫಲರಾಗುತ್ತಿರುವುದು ಸಮಂಜಸವಲ್ಲ. ಕಚ್ಚಾ ರೇಷ್ಮೆ ಆಮದಿಗೆ ಕೇಂದ್ರ ಸರ್ಕಾರ ಹೇಳುತ್ತಿರುವ ಕಾರಣಗಳು

ಸಮರ್ಥನೀಯವಲ್ಲ. ರಫ್ತುಮಾಡುವ ವಸ್ತ್ರ ತಯಾರಿಕೆಗೆ ಆಮದು ರೇಷ್ಮೆಯು ಬಳಕೆಯಾಗುತ್ತಿದೆ ಎನ್ನುತ್ತಾರೆ. ಇದರಂತಹ ಅಪ್ಪಟ ಸುಳ್ಳು ಬೇರೊಂದಿಲ್ಲ. ಇಲ್ಲಿನ ಕಚ್ಚಾ ರೇಷ್ಮೆಯ ಬೆಲೆ ಏರುತ್ತಿದ್ದೆಯೆಂದೂ ಅದಕ್ಕಾಗಿ 'ಆಮದು' ಪ್ರೋತ್ಸಾಹಿಸಲ್ಪಡುತ್ತಿದೆ ಎಂದೂ ಹೇಳುತ್ತಾರೆ. ಇದೊಂದು ವಿಚಿತ್ರ ತರ್ಕ. ಬೇರೆಲ್ಲ ಕೃಷಿ ಪದಾರ್ಥ ಹಾಗೂ ಆಹಾರ ಧಾನ್ಯ, ಇತ್ಯಾದಿಗಳ ಬೆಲೆಗೆ ಹೋಲಿಸಿದರೆ ಕಚ್ಚಾ ರೇಷ್ಮೆಯ ಬೆಲೆ ಏರುತ್ತಿದೆಯೆಂಬುದಕ್ಕೆ ಆಧಾರ ಕಾಣದು. ಕಚ್ಚಾ ರೇಷ್ಮೆಯು ಆಮದು ಆಗಲೇಕೂಡದು. ಆಮದು ಅನಿವಾರ್ಯವೆನ್ನುವುದಾದರೆ ಅದರ ಸಮರ್ಪಕ ವಿತರಣೆಯಾಗಬೇಕು. ಅಲ್ಲದೆ ಸಮರ್ಥ ಉಸ್ತುವಾರಿಯೂ ಇರಬೇಕು.

ತಮಗೆ ಆಗುತ್ತಿರುವ ಉತ್ಪಾದನಾ ವೆಚ್ಚಕ್ಕಿಂತ ಅತಿ ಕಡಿಮೆ ಬೆಲೆಗೆ ಚೀನಾ ದೇಶ ನಮ್ಮ ರಾಷ್ಟ್ರಗಳಿಗೆ ಕಚ್ಚಾ ರೇಷ್ಮೆಯನ್ನು ಕಳುಹಿಸಿಕೊಡಲು ಮುಂದಾಗಿರುವುದಕ್ಕೆ ಕಾರಣ ಪತ್ತೆ ಮಾಡಲು ವಿಶೇಷ ಜಾಣತನವೇನೂ ಬೇಕಾಗಿಲ್ಲ; ಮುಂದೆ ಎಂದಾದರೊಂದು ದಿನ ತನಗೆ ಸವಾಲು ಎಸೆಯಬಲ್ಲ ದೇಶವೆಂದರೆ ಭಾರತವೇ ಎಂಬುದು ಚೀನಾಕ್ಕೆ ಗೊತ್ತಿದೆ. ಭಾರತದಲ್ಲಿ ರೇಷ್ಮೆ ಉದ್ಯಮ ಬೆಳೆಯದೆ ಹೋದರೆ ಅದಕ್ಕೆ ಲಾಭ; ಅದಕ್ಕಾಗಿಯೇ ಕಡಿಮೆ ದರದಲ್ಲಿ ರಫ್ತು ಮಾಡಲು ಒಪ್ಪಿರುವುದು.

ಈ ಎಲ್ಲ ಸಮಸ್ಯೆಗಳಿಗೆ ನಿರ್ಭೀತಿಯಿಂದ ಪರಿಹಾರ ಸೂಚಿಸುವ ಪ್ರಯತ್ನವನ್ನು ಈ "ಕಾರ್ಯಗಾರ" ಕೈಗೊಳ್ಳಲಿ.

## ಅಕ್ಟೋಬರ್ ೧೯೮೫

*ಸಂದರ್ಭ : ಸೂಲಿಬೆಲೆಯಲ್ಲಿ "ಮಾದರಿ ರೇಷ್ಮೆ ಬಿತ್ತನೆ ಕೋಠಿ" ಕಟ್ಟಡದ ಉದ್ಘಾಟನಾ ಸಮಾರಂಭದಲ್ಲಿ ರೇಷ್ಮೆ ಸಚಿವರಾಗಿ ಮಾಡಿದ ವಾಸ್ತವಿಕ ಭಾಷಣ.*

'ಪರಿಪೂರ್ಣ ಕಲೆ' ಯ ಆಗರವಾಗಿರುವ ರೇಷ್ಮೆ ಕಸುಬು ವೈಜ್ಞಾನಿಕತೆಯನ್ನು ಅಳವಡಿಸಿಕೊಂಡು ಹೊಸ ಹುಟ್ಟು ಪಡೆಯಬೇಕು. ಭಾರತೀಯ ರೇಷ್ಮೆ ಉದ್ಯಮ ಉಚ್ಛ್ರಾಯ ಸ್ಥಿತಿಗೆ ಬರಬೇಕೆಂದು ಬಯಸುವವರು ಕರ್ನಾಟಕದಲ್ಲಿ ಇದನ್ನು ಅತ್ಯುತ್ತಮ ನೆಲೆಗಟ್ಟಿನ ಮೇಲೆ ಬೆಳೆಸಬೇಕು. ಹಿಪ್ಪುನೇರಳೆ ಮೂಲಕ ಕಚ್ಚಾ ರೇಷ್ಮೆಯ ಉತ್ಪಾದನೆಯಲ್ಲಿ ಕರ್ನಾಟಕವೇ ಬಹುಪಾಲನ್ನು ಪೂರೈಸುತ್ತಿರುವುದು ಇಂದು ನಿನ್ನೆಯದಲ್ಲ. ಶತಮಾನಗಳಿಂದ ಎಂದು ನೆನಪು ಮಾಡಿಕೊಡಬಯಸುವೆ. ನಾನು ಅಧಿಕಾರ ವಹಿಸಿಕೊಂಡ ನಂತರ ರೇಷ್ಮೆ ಮೊಟ್ಟೆಯ ಉತ್ಪಾದನೆಯಲ್ಲಿ, ಗುಣಮಟ್ಟದಲ್ಲಿ ಉತ್ತಮಗೊಂಡಿರುವುದನ್ನು ಅಂಕಿ-ಅಂಶಗಳಿಂದ ಕಾಣಬಹುದು. ಇದನ್ನು ಕಾರ್ಯ ಸಾಧ್ಯವಾಗುವಂತೆ ಮಾಡಿದ ಇಲಾಖಾಧಿಕಾರಿಗಳ ಕರ್ತವ್ಯದ ಬಗ್ಗೆ ನನ್ನ ಮೆಚ್ಚುಗೆ ಇದೆ. ಅದಕ್ಷತೆ, ಭ್ರಷ್ಟತೆ, ತಾಂತ್ರಿಕ ವಿಚಾರದಲ್ಲಿನ ಅಸಡ್ಡೆ ಹೇಗೆ ಲಕ್ಷಾಂತರ ಬಡ ಕುಟುಂಬಗಳ 'ಅನ್ನ' ಕ್ಕೆ ಮಾರಕವಾಗುತ್ತದೆಂಬುದನ್ನು ಇಲಾಖೆಯಲ್ಲಿ ಕೆಲಸ ಮಾಡುವ ಸಿಬ್ಬಂದಿ ಅರ್ಥ ಮಾಡಿಕೊಳ್ಳಬೇಕು.

ಉತ್ತಮ ಬಿತ್ತನೆಯನ್ನು ತೆಗೆದುಕೊಂಡು ಹೋದ ರೈತ ತನ್ನ ಬೆಳೆ 'ಗ್ಯಾರಂಟಿ' ಎಂದು ತನ್ನ ಕೆಲಸದಲ್ಲಿ ಉಪೇಕ್ಷೆ ಮಾಡಬಾರದು. ಸಾಕಣೆಯಲ್ಲಿ ಲೋಪವಾಗಬಾರದು, ಸುಧಾರಿತ ಕ್ರಮದ ಅನುಷ್ಠಾನ ಮರೆಯಬಾರದು. ಬೆಲೆ ಕಡಿಮೆಯಾದರೆ ರೈತ ಸಹಿಸಿಕೊಂಡಾನು, ಬೆಳೆ ಹೋದರೆ ತಡೆದುಕೊಳ್ಳಲಾರ. ಬೆಳೆ ಆಗುವಂತೆ ನೋಡಿಕೊಳ್ಳಲು ರೈತ ತನ್ನನ್ನು ತಾನು ಒಳಗಾಗಿಸಿಕೊಂಡು ಬೆಳೆ ಮಾಡುವುದರ ಕಡೆ ಗಮನ ಕೊಡುವುದು ಅಗತ್ಯ.

ಉದ್ಘಾಟನೆಯಾದ 'ಮಾದರಿ ರೇಷ್ಮೆ ಬಿತ್ತನೆ ಕೋಠಿ' ಯಲ್ಲಿ ಉತ್ತಮ ಗುಣಮಟ್ಟದ ರೋಗರಹಿತ ಬಿತ್ತನೆ ತಯಾರಾಗುವುದರ ಕಡೆ ಇಲಾಖೆ ಹೆಚ್ಚು ಗಮನ ಕೊಡಬೇಕು. ರೇಷ್ಮೆ ಬೆಳೆಯು ರೋಗಮುಕ್ತವಾಗಿರುವಂತೆ ನೋಡಿಕೊಳ್ಳುವ 'ಆಸ್ಪತ್ರೆ'ಯಾಗಬೇಕು. ಬೆಳೆಗಾರ ಕಣ್ಣೀರು ಸುರಿಸದಂತೆ ಅವನನ್ನು 'ನಗುಮುಖ'ದಿಂದ ಉಳಿಯುವಂತೆ ನೋಡಿಕೊಳ್ಳಬೇಕು. ಬರಗಾಲದಲ್ಲಿಯೂ 'ವರ'ವಾಗಿ ಕಾಪಾಡುವ ಈ ಕಸುಬು ಅಂಧಶ್ರದ್ಧೆಗೆ ಒಳಗಾಗಬಾರದು. ಬೆಳೆಗಾರರಲ್ಲಿ 'ಅಶ್ರದ್ಧೆ' ಇರಲೇಬಾರದು. ನಾನು ಶಾಸಕನಾಗಿದ್ದಾಗ ಯಾವ ಸಮಸ್ಯೆಗಳನ್ನು ಮುಂದಿಟ್ಟುಕೊಂಡು ಶಾಸನಸಭೆಯಲ್ಲಿ ಹೋರಾಡುತ್ತಿದ್ದೇನೋ ಆ ಸಮಸ್ಯೆಗಳನ್ನು ಪರಿಹರಿಸುವ ಹೊಣೆಗಾರಿಕೆಯನ್ನು ಈಗ ವಹಿಸಿಕೊಂಡಿದ್ದೇನೆ. ವಿಜ್ಞಾನಿಗಳು, ಆಡಳಿತ ಸೂತ್ರ ಹಿಡಿದವರು ಎಲ್ಲರೂ ನನಗೆ ಸಹಕಾರ ನೀಡಬೇಕು.

## ನವೆಂಬರ್ ೧೯೮೫

*ಸಂದರ್ಭ: ತುಮಕೂರಿನಲ್ಲಿ 'ಮಾದರಿ ರೇಷ್ಮೆ ಬಿತ್ತನೆ ಕೋಠಿ' ಯ ನೂತನ ಕಟ್ಟಡವನ್ನು ರೇಷ್ಮೆ ಸಚಿವರಾಗಿ ಉದ್ಘಾಟಿಸಿದಾಗ ಮಾಡಿದ ಭಾಷಣ.*

ಬೆಳೆಗಾರನ ದೃಷ್ಟಿಯಲ್ಲಿ ಬಿತ್ತನೆ ಕೋಠಿಗಳು ದೇವಾಲಯ. ಈ ದೇವಾಲಯದಿಂದ ತಯಾರಾಗುವ ಮೊಟ್ಟೆಗಳು ಬೆಳೆಗಾರನ ಜೀವನ ಸ್ಥಿತಿಯನ್ನೇ ಬದಲಿಸಬಲ್ಲವು. ಆದುದರಿಂದ ಇಲ್ಲಿ ಕೆಲಸ ಮಾಡುವ ನೋಡಿಕೊಳ್ಳುವ ಅಧಿಕಾರಿಗಳು ಮತ್ತು ಸಿಬ್ಬಂದಿ ತಮ್ಮ ಜವಾಬ್ದಾರಿಯನ್ನು ಅರಿತು ನಡೆಯಬೇಕು. ಬೆಳೆ ಮಾಡುವವರು ನೀವು. ಗೂಡಿಗೆ ಬೆಲೆ ನಿರ್ಧರಿಸುವವರು ವ್ಯಾಪಾರಸ್ಥರು ಮತ್ತು ಸರ್ಕಾರ. ಗೂಡಿನ ಗುಣಮಟ್ಟ ಉತ್ತಮವಾಗಿದ್ದರೆ ಬೆಲೆ ಪೈಪೋಟಿಯಲ್ಲಿ ಸಿಕ್ಕುತ್ತದೆ. ರೋಗರಹಿತ ಮೊಟ್ಟೆ ತಯಾರಿಕೆಗೆ ಸವಲತ್ತುಗಳಿವೆ. ಯಂತ್ರೋಪಕರಣಗಳಿವೆ. ವಿಶಾಲವಾದ ಕಟ್ಟಡವಿದೆ. ತಾಂತ್ರಿಕ ಪರಿಣತಿಯೂ ಇದೆ. ಆದರೆ ಇಷ್ಟರಿಂದಲೇ ಎಲ್ಲವನ್ನೂ ಸಾಧಿಸಿ ಬಿಡಲಾಗುತ್ತದೆನ್ನಲಾಗದು. ತೆಗೆದುಕೊಂಡು ಹೋದ ಮೊಟ್ಟೆಗಳನ್ನು ಹುಳು ಹಣ್ಣಾಗುವವರೆಗೆ ಸುಧಾರಿತ ಕ್ರಮದಲ್ಲಿ ಪಾಲನೆ ಮಾಡದೆ ಹೋದಾಗ ಎಲ್ಲ ಪ್ರಯತ್ನವೂ ವ್ಯರ್ಥವಾಗಿ ಬಿಡುತ್ತದೆ.

ಬೆಳೆ ಹೋದಾಗ, ಇಳುವರಿ ಕಡಿಮೆಯಾದಾಗ ರೈತರು ಮೊಟ್ಟೆಯ ಮೇಲೆ ಗೊಣಗುವುದನ್ನು ಬಿಡಬೇಕು. ಇಡೀ ಲಾಟು ನಷ್ಟವಾದರೆ ಮಾತ್ರ ಇಲಾಖೆ ತಪ್ಪು ಮಾಡಿದೆ ಎಂದು ಒಪ್ಪಿಕೊಂಡೇನು. ಬೇರೆಯವರ ಬಳಿ ಬೆಳೆ ಆಗಿ ಒಬ್ಬಿಬ್ಬರ ಬೆಳೆ ಹೋದರೆ ತಪ್ಪು ಯಾರದು ಎಂಬುದನ್ನು ತಿಳಿಯಲು ನಿಮ್ಮನ್ನು ನೀವೇ ಪ್ರಶ್ನಿಸಿಕೊಳ್ಳಬೇಕು.

ಇಲಾಖಾಧಿಕಾರಿಗಳ ಮೇಲೆ ದೂರು ಅರ್ಜಿಗಳನ್ನು ಸಲ್ಲಿಸುವವರು ಹೆಚ್ಚಾಗಿದ್ದಾರೆ. ಅರ್ಜಿಗಳು ಬರಕೂಡದೆಂದು ನನ್ನ ಭಾವನೆಯಲ್ಲ. ಅರ್ಜಿಗಳನ್ನು ಬರೆಯುವುದರಿಂದಲೇ ಬೆಳೆಯನ್ನು ಬೆಳೆದುಬಿಡಬಹುದೆಂದು ತಿಳಿದುಕೊಂಡವರನ್ನು ಕುರಿತು ನಾನು ಹೇಳುವ ಮಾತು. ಬೆಳೆ ಹೋದುದಕ್ಕೆ ಕಾರಣಗಳನ್ನು ಹುಡುಕಿ ನ್ಯೂನತೆಗಳನ್ನು ಸರಿಪಡಿಸಿಕೊಳ್ಳುವ ಪ್ರಯತ್ನ ಮಾಡುವುದು ಅಗತ್ಯ. ಈ ಇಲಾಖೆಯಲ್ಲಿನ ಸಿಬ್ಬಂದಿ ಕರ್ತವ್ಯ ಪ್ರಜ್ಞೆಯಿಂದ ಕೆಲಸ ಮಾಡದೆ ಹೋದರೆ ಬೆಳೆಗಾರನ ಅನ್ನದ ತುತ್ತಿಗೆ ಕುತ್ತು ಉಂಟಾಗುತ್ತದೆನ್ನುವ ಉತ್ಕಟ ಬಯಕೆಯ ಹಿನ್ನೆಲೆಯಲ್ಲಿ ಇಲಾಖೆಯ ಅಧಿಕಾರಿಗಳನ್ನು ಕಟುವಾಗಿ ಟೀಕಿಸಿದ್ದಾನೆ. ನನ್ನ ಇಂಗಿತವನ್ನು ಅರಿತು ಅವರು ಸ್ಪಂದಿಸಿದ್ದಾರೆ. ಉತ್ತಮ ಕೆಲಸ ನಡೆಯುತ್ತಿದೆ. ಈಗ ರೇಷ್ಮೆ ಮೊಟ್ಟೆಗಳ ಇಳುವರಿಯಲ್ಲಿ ಗಣನೀಯ ಪ್ರಗತಿಯಾಗಿದೆ. ಇದು ಹೀಗೆಯೇ ಮುಂದುವರಿಯಬೇಕೆಂದು ಅವರನ್ನು ಕೋರುತ್ತೇನೆ. ನಾನು ಅಧಿಕಾರ ವಹಿಸಿಕೊಂಡಾಗ ಶೇಕಡಾ ೧೮ರಷ್ಟು ಇದ್ದ ಇಳುವರಿ ಈಗ ೩೫ಕ್ಕೆ ಏರಿದೆ.

ಈ ಇಲಾಖೆಗೂ, ಇತರ ಇಲಾಖೆಗಳಿಗೂ ಕಾರ್ಯವಿಧಾನದಲ್ಲಿ ವ್ಯತ್ಯಾಸವುಂಟು. ಇಲ್ಲಿ ಕಾಲಮಿತಿಯಿಲ್ಲದ ಕೆಲಸ, ಕಾಲಕ್ಕೆ ಸರಿಯಾಗಿಯೇ ಆಗಬೇಕಾದ ಕೆಲಸ. ಅವೇಳೆಯಲ್ಲಿ ಬಂದು ಮೊಟ್ಟೆಗಳನ್ನು ಆರಿಸಿ ಮೊಟ್ಟೆ ತಯಾರಿಕೆಗೆ ವ್ಯವಸ್ಥೆ ಮಾಡಬೇಕು. ಜೀವವಿರುವ ಚಿಟ್ಟೆ ಮತ್ತು ಹುಳುವಿನ ಜೊತೆ ಕೆಲಸ ಮಾಡುವ ಸಿಬ್ಬಂದಿ ಈಗ ಮಾಡುವುದನ್ನು ಆಮೇಲೆ ಮಾಡಿದರಾಯಿತು ಎಂದು ನಿಲ್ಲಿಸುವಂತಿಲ್ಲ. ಅವರಿಗಿರುವ ಎರಡು ದಿನಗಳ ರಜೆ ಮಾತ್ರ. ಈ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು ವಿನಾಕಾರಣ ತಪ್ಪು ಹುಡುಕುವುದರಲ್ಲಿಯೇ ಮಗ್ನರಾಗದೆ ಅವರಿಂದ ಕೆಲಸ ತೆಗೆದುಕೊಳ್ಳುವ ಜಾಣ್ಮೆಯನ್ನು ತೋರುವಂತಾದರೆ ನಿಮ್ಮ ಸೇವೆ ಮಾಡಲು ಅವರಿಗೆ ಇನ್ನಷ್ಟು ಉತ್ಸಾಹವಿರುತ್ತದೆ. ಹಿಪ್ಪುನೇರಳೆಗೆ ಇವತ್ತು ಹೆಚ್ಚಿನ ಬೇಡಿಕೆ ಇದೆ. ಇದಕ್ಕಾಗಿ ಉತ್ತಮವಾದ ಕಾಂಡಗಳನ್ನು ತನ್ನಿ. ಪ್ರಾರಂಭದಿಂದಲೇ ವ್ಯವಸ್ಥಿತವಾಗಿ ನಾಟಿ ಮಾಡಿ ತಜ್ಞರ ಸಲಹೆ ಪಡೆಯಿರಿ. ಕಡಿಮೆ ನೀರಿದ್ದರೂ ಚೆನ್ನಾಗಿ ಬೆಳೆಯಬಲ್ಲ ಹಿಪ್ಪುನೇರಳೆಯನ್ನು ದುಡಿಸಿಕೊಳ್ಳಬೇಕಾದರೆ ಅವುಗಳನ್ನು ನಾಟಿ ಮಾಡುವ ಮತ್ತು ಭೂಮಿಯನ್ನು ಹದಗೊಳಿಸುವ ರೀತಿ ವೈಜ್ಞಾನಿಕವಾಗಿರಲಿ, ಚಿತ್ತನೆ ಕೋಠಿಯ ಒಳಗೆ ಮತ್ತು ಹೊರಗಡೆ ಆಕರ್ಷಕ ಪರಿಸರವಿರುವಂತೆ ನೋಡಿಕೊಳ್ಳಿ. ಅದಕ್ಕಾಗಿ ಅಲಂಕಾರಿಕ ಪುಷ್ಪಗಳನ್ನು ಬಿಡುವ ಸಸಿಗಳೂ, ಹವೆಯನ್ನು ಉತ್ತಮವಾಗಿ ಉಳಿಸುವ ಮರಗಿಡಗಳೂ ಆವರಣದಲ್ಲಿ ಬೆಳೆಸಲ್ಪಡಲಿ.

## ಡಿಸೆಂಬರ್ ೧೯೮೫

*ಸಂದರ್ಭ: ಶಿಡ್ಲಘಟ್ಟದಲ್ಲಿ 'ರೇಷ್ಮೆ ಬಿತ್ತನೆ ಕೋಠಿ' ಕಟ್ಟಡವನ್ನು ರೇಷ್ಮೆ ಸಚಿವರಾಗಿ ಉದ್ಘಾಟನೆ ಮಾಡಿದಾಗ ಆಡಿದ ಮಾತುಗಳು.*

ಇಂದು ಉದ್ಘಾಟನೆ ಮಾಡಿದ ಕಟ್ಟಡ ಇಟ್ಟಿಗೆ, ಸಿಮೆಂಟ್‌ಗಳಿಂದ ಕಟ್ಟಿದ ನಿರ್ಜೀವ ವಸ್ತುವಲ್ಲ. ಲಕ್ಷಾಂತರ ಕುಟುಂಬಗಳನ್ನು ಬದುಕಿಸಬಲ್ಲ ಜೀವ ಕೇಂದ್ರ. ಸ್ವಾತಂತ್ರ್ಯ ಬಂದು

೩೫ ವರ್ಷಗಳಾದರೂ ಬಡತನ ನಿವಾರಣೆಯಾಗಲಿಲ್ಲ. ಇದೇಕೆ ಹೀಗಾಯಿತು ಎಂದು ವಿಶ್ಲೇಷಿಸಿದಾಗ ಕಂಡುಬರುವ ಅಂಶವೆಂದರೆ ಜನಜೀವನದ ನೋವಿನ ಸ್ವಾನುಭವವಿರುವವರು ಆಡಳಿತ ಸೂತ್ರವನ್ನು ಹಿಡಿಯಲಿಲ್ಲ. ಬಡತನದ ಬವಣೆಯನ್ನು ಕಂಡರಿಯದವರಿಂದ ಬಡತನ ನಿವಾರಣೆ ಹೇಗೆ ಸಾಧ್ಯ? ಜನತೆಯಲ್ಲಿ ವೈಚಾರಿಕ ಕ್ರಾಂತಿಯಾದರೆ ಆಡಳಿತ ಯಂತ್ರಕ್ಕೆ ಹಿಡಿದಿರುವ ತುಕ್ಕು ಮಾಯವಾಗಿ ತೀವ್ರ ಗತಿಯಲ್ಲಿ ಚಲಿಸುತ್ತದೆ. ಈ ನಿಟ್ಟಿನಲ್ಲಿ ನೀವು - ನಾವೆಲ್ಲ ಒಟ್ಟುಗೂಡಬೇಕು. ಈ ಸುತ್ತಲ ರೇಷ್ಮೆ ಬೆಳೆಗಾರರನ್ನು ಆಕರ್ಷಿಸುವಂತಹ ರೀತಿಯಲ್ಲಿ ಈ ಕಟ್ಟಡದಲ್ಲಿ ರೇಷ್ಮೆ ಬಿತ್ತನೆ ತಯಾರಾಗಲಿ, ರೋಗರಹಿತ ಮೊಟ್ಟೆಯನ್ನು ತೆಗೆದುಕೊಂಡು ಹೋಗುವುದರಿಂದ ಮಾತ್ರ ಆರೋಗ್ಯಕರ ಬೆಳೆ ಆಗಿ ಇಳುವರಿ ಉತ್ತಮಗೊಳ್ಳುತ್ತದೆ ಎಂದು ನಾನು ಭಾವಿಸುವುದಿಲ್ಲ. ತೆಗೆದುಕೊಂಡು ಹೋದ ಮೊಟ್ಟೆಯ ಸಾಕಣೆಯಲ್ಲಿ ಅತೀವ ಶ್ರದ್ಧೆಯಿಟ್ಟುಕೊಂಡು ಕರ್ತವ್ಯ ನಿರ್ವಹಿಸಿದರೆ ಉತ್ತಮ ಬೆಳೆ ನಿಮ್ಮದು. ಸುಧಾರಿತ ಕ್ರಮದಲ್ಲಿ ಸಾಕಣೆ ಮಾಡುವುದರಲ್ಲಿ ತಡ ಮಾಡದಿರಿ. ಹಿಂದೆ ಬೀಳಲೇಬೇಡಿ.

## ಜನವರಿ ೧೯೮೬

*ಸಂದರ್ಭ: 'ಹಾಸನ ಮಾದರಿ ರೇಷ್ಮೆ ಬಿತ್ತನ ಕೋಠಿ' ಯ ನೂತನ ಕಟ್ಟಡವನ್ನು ರೇಷ್ಮೆ ಸಚಿವರಾಗಿ ಉದ್ಘಾಟಿಸಿದಾಗ ಆಡಿದ ಮಾತುಗಳು*

ನನ್ನನ್ನು ಬೆಳೆಸಿದಿದು ರೇಷ್ಮೆ ಬೆಳೆ. ಆದುದರಿಂದ ನನಗಂತೂ ಈ ಉದ್ಯಮದ ವಿಚಾರದಲ್ಲಿ ಅತ್ಯಂತ ಶ್ರದ್ಧೆ ಮತ್ತು ಗೌರವವಿದೆ. ಭಾರತೀಯ ಹಿಪ್ಪುನೇರಳೆ ಉದ್ಯಮವು ಹುರುಪು ಪಡೆಯಬೇಕಾದರೆ ಅದಕ್ಕೆ ಕರ್ನಾಟಕ ನೀಡುವ ಪಾಲು ಬಹು ದೊಡ್ಡದು. ಈ ನಾಡಿನಲ್ಲಿ ರೇಷ್ಮೆ ಉದ್ಯಮ ಬೆಳೆಯಲು ಅನೇಕ ಜನರು ಜೀವದ ಹಂಗು ತೊರೆದು ದುಡಿದಿದ್ದಾರೆ. ರೇಷ್ಮೆ ಎಷ್ಟು ನವಿರೋ ಅದರ ಸಮಸ್ಯೆಗಳು ಅಷ್ಟೇ ನವಿರು. ಒಂದೊಂದು ಜಿಲ್ಲೆಯಲ್ಲಿಯೂ ಒಂದೊಂದು ವಿಶೇಷ ತರನಾದ ಸಮಸ್ಯೆಗಳಿವೆ. ಆದರೆ ಅವುಗಳನ್ನು ಬಿಡಿಸಲು ಸಾಧ್ಯವಿದೆ. ಅದಕ್ಕೆ ತಾಳ್ಮೆ ಬೇಕು; ಸಂಯಮ ಬೇಕು. ಭಾರತದ ಯಾವ ರಾಜ್ಯವೂ ಕರ್ನಾಟಕದ ಪ್ರಾಮುಖ್ಯತೆಯನ್ನು ಕಿತ್ತುಕೊಳ್ಳಲು ಸಾಧ್ಯವಾಗದಂತೆ ನಾವು- ನೀವೆಲ್ಲ ಕರ್ತವ್ಯಶೀಲರಾಗಬೇಕು. ರೇಷ್ಮೆ ಕಸುಬು ಕೈಗೊಳ್ಳಿರಿ ಎಂದು ಪ್ರಚಾರ ಮಾಡಬೇಕಾದ ಪ್ರಮೇಯವಿಲ್ಲ. ಜನ ಇದರ ಲಾಭವನ್ನು ಗುರುತಿಸಿದ್ದಾರೆ. ರೋಗ ರಹಿತ ಮೊಟ್ಟೆ ಒದಗಿಸಿ ಬೆಳೆದ ಗೂಡಿಗೆ ಯೋಗ್ಯ ಬೆಲೆ ಸಿಕ್ಕುವಂತೆ ಖಾತರಿ ಕೊಟ್ಟು ರೈತರಿಗೆ ಮನವರಿಕೆ ಮಾಡಿಕೊಟ್ಟರೆ ಸಾಕು.

ಇಂದು ಉದ್ಘಾಟನೆಯಾದ ಕಟ್ಟಡಕ್ಕೆ ಜೀವವಿಲ್ಲವೆಂದು ನಾನು ತಿಳಿದಿಲ್ಲ. ಕಾರಣ ಜೀವವಿರುವ ಜನಗಳನ್ನು ಉಳಿಸಿ ಬೆಳೆಸಲು ಪ್ರಯತ್ನ ಕೈಗೊಳ್ಳುವ ದೇಗುಲವಿದು. ರೈತರ ಹಿತವನ್ನು ಕಾಪಾಡುವಾಗ ಯಾವುದೇ ಭ್ರಷ್ಟತೆ ನನ್ನ ಇಲಾಖೆಯ ಅಧಿಕಾರಿಗಳಲ್ಲಿ ಬರಬಾರದೆಂದು ಎಲ್ಲ ವೇದಿಕೆಗಳಿಂದಲೂ ಹೇಳುತ್ತಿದ್ದೇನೆ. ಅದನ್ನೇ ಇಲ್ಲಿ

ಪುನರುಚ್ಚರಿಸುತ್ತಿದ್ದೇನೆ. ನನ್ನನ್ನು ಅರ್ಥಮಾಡಿಕೊಂಡು ನನ್ನ ನಿರೀಕ್ಷೆಗೆ ಪ್ರತಿಸ್ಪಂದಿಸಿದ ಇಲಾಖಾಧಿಕಾರಿಗಳಿದ್ದಾರೆ. ಈ ಮನೋಭಾವ ಸದಾ ಮುಂದುವರಿಯಲೆಂದು ಆಶಿಸುತ್ತೇನೆ. ಬಹು ಹಿಂದಿನಿಂದ ಈ ಕಸುಬು ಮಾಡುತ್ತಿರುವ ಕುಣಿಗಲ್ ತಾಲ್ಲೂಕಿಗೇ ಇಲ್ಲದ ಸೌಲಭ್ಯವನ್ನು ಈ ಜಿಲ್ಲೆಗೆ ಕೊಟ್ಟಿದ್ದೇನೆ. ಇದನ್ನು ಸೂಕ್ತವಾಗಿ ಬಳಸಿಕೊಳ್ಳಿ.

## ಫೆಬ್ರುವರಿ ೧೯೮೬

*ಸಂದರ್ಭ : ದಾವಣಗೆರೆ ಪಕ್ಕದ ತೋಳು ಹುಣಸೆಯಲ್ಲಿ*
*'ರೇಷ್ಮೆ ನೂಲು ಬಿಚ್ಚುವ ಕಿರುಘಟಕ' ಉದ್ಘಾಟನಾ ಸಮಾರಂಭದ*
*ಅಧ್ಯಕ್ಷತೆ ವಹಿಸಿ ರೇಷ್ಮೆ ಸಚಿವರಾಗಿ ಮಾತನಾಡಿದ್ದು.*

ರೇಷ್ಮೆ ನೂಲಿನಷ್ಟೇ ನಾಜೂಕಾದ ಸಮಸ್ಯೆಗಳು ಈ ಉದ್ಯಮದಲ್ಲಿವೆ. ರೇಷ್ಮೆ ಗೂಡು ಬೆಳೆಯಬಹುದು, ಬೆಳೆದ ಗೂಡಿನ ಮಾರಾಟ ಲಾಭದಾಯಕವಾಗಿರಬೇಕು. ಅದಕ್ಕಾಗಿಯೇ ಖಾಸಗಿಯವರ ಹಿಡಿತದಲ್ಲಿದ್ದ ಮಾರುಕಟ್ಟೆಗಳನ್ನು ತಪ್ಪಿಸಿ ಸರ್ಕಾರ ಹಿಡಿತಕ್ಕೆ ತೆಗೆದುಕೊಳ್ಳಲಾಯಿತು. ಬಹಿರಂಗ ಹರಾಜು, ಕರಾರುವಕ್ಕಾದ ತೂಕ, ನಗದು ಹಣ ಪಾವತಿ ಸೌಲಭ್ಯ ಇಲ್ಲಿದೆ. ಮಾರುಕಟ್ಟೆಗಳಲ್ಲಿ, ಹರಾಜಿನಲ್ಲಿ ಪಾಲ್ಗೊಳ್ಳಲು ನೂಲು ಬಿಚ್ಚುವ ಉದ್ಯಮಿಗಳು ಇರಬೇಕು. ಹೊಸ ಪ್ರದೇಶಗಳಲ್ಲಿ ಈ ಉದ್ಯಮಿಗಳು ಕಡಿಮೆ. ಅವರನ್ನು ಸಿದ್ಧಪಡಿಸಲು ಈ ಘಟಕ ನೆರವಾಗುತ್ತದೆ. ಅತ್ಯಾಧುನಿಕ ಯಂತ್ರಗಳಿಂದ ಸಜ್ಜುಗೊಂಡ ಈ ಘಟಕ ಇಡೀ ರಾಜ್ಯದಲ್ಲಿ ಮೊದಲನೆಯದು ಹಾಗೂ ಅಪೂರ್ವವಾದುದು.

ರಾಜ್ಯ ಮಳೆಯ ಅಭಾವದಿಂದ ತತ್ತರಿಸಿದೆ. ಬರಗಾಲದ ದಿನಗಳಲ್ಲಿದ್ದೇವೆ. ಇಂತಹ ದಿನಗಳಲ್ಲಿಯೂ ರೈತನನ್ನು ಕಾಪಾಡಿದ ಬೆಳೆಯೆಂದರೆ ರೇಷ್ಮೆ ಎನ್ನುವುದನ್ನು ಹೇಳುವಾಗ ನನಗೆ ಹೆಮ್ಮೆಯೆನಿಸಿದೆ. ಆಳವಾಗಿ ಬೇರೂರುವ ಸ್ವಭಾವದ ಹಿಪ್ಪುನೇರಳೆ ಎಂಥ ಬರಗಾಲವಾದರೂ ಬಸವಳಿಯದೆ ಉಳಿಯುವ ಚೈತನ್ಯವಿರುವ ಬೆಳೆ. ಸಮಾಜದ ದುರ್ಬಲ ವರ್ಗದವರನ್ನು ಹಸಿವಿನಿಂದ ಸೊರಗಲು ಇದು ಬಿಟ್ಟಿಲ್ಲ. ಅವನು ಕೊಳ್ಳುವ ಶಕ್ತಿ ಕ್ಷೀಣಿಸಲು ಬಿಟ್ಟಿಲ್ಲ. ಈ ಉದ್ಯಮ ನನ್ನ ದೃಷ್ಟಿಯಲ್ಲಿ ಇತರ ಉದ್ಯಮಕ್ಕಿಂತ ಭಿನ್ನ. ಇದು ಜನಸಾಮಾನ್ಯನ ಬದುಕು. ಅವನ ರಕ್ತ - ಮಾಂಸವೆನಿಸುವಷ್ಟರಮಟ್ಟಿಗೆ ಅವನ ಜೀವನದ ಅವಿಭಾಜ್ಯ ಅಂಗವಾಗಿದೆ. ಇನ್ನೂ ಸ್ಪಷ್ಟಪಡಿಸಬೇಕಾದರೆ ಕರ್ನಾಟಕದಲ್ಲಿ ರೇಷ್ಮೆ ಉದ್ಯಮ ಒಂದು ಜೀವನ ವಿಧಾನವೇ ಆಗಿಬಿಟ್ಟಿದೆ.

ಕರ್ನಾಟಕದ ರೇಷ್ಮೆ ಉದ್ಯಮದಲ್ಲಿ ಶ್ರೀ ವಿ. ಬಾಲಸುಬ್ರಮಣಿಯನ್ ಅವರ ಹೆಸರು ಸದಾ ನೆನಪಿನಲ್ಲಿ ಉಳಿಯುತ್ತದೆ. ಅದಕ್ಕೆ ಕಾರಣವೆಂದರೆ ಈ ಉದ್ಯಮಕ್ಕೆ ಒಂದು ತಿರುವು ಕೊಟ್ಟವರು ಅವರು. ಕೇಂದ್ರ ಮಂತ್ರಿಗಳಲ್ಲಿ ನನ್ನದೊಂದು ಬೇಡಿಕೆ ಇದೆ. ಮಂತ್ರಿಯಾಗಿ ಅಲ್ಲ, ಶಾಸಕನಾಗಿ ಅಲ್ಲ, ಸಾಮಾನ್ಯ ಬೆಳೆಗಾರನಾಗಿ,

ಬೆರಳೆಣಿಕೆಯ ವ್ಯಾಪಾರಿಗಳ ಕ್ಷೇಮವನ್ನು ನೋಡಿಕೊಳ್ಳುವುದೇ ಮುಖ್ಯವಲ್ಲ. ಲಕ್ಷಾಂತರ ಬೆಳೆಗಾರರ ಅನ್ನದ ತಟ್ಟೆ ಬರಿದಾಗದಂತೆ ನೋಡಿಕೊಳ್ಳುವುದೂ ಮುಖ್ಯ. ಅದಕ್ಕಾಗಿಯೇ

ಕಚ್ಚಾ ರೇಷ್ಮೆಯ ಆಮದು ನಿಲ್ಲಬೇಕು. ಇದು ನನ್ನ ಅಂತರಾಳದ ಪ್ರಾರ್ಥನೆ. ನಮಗೆ ನ್ಯಾಯ ಸಿಗಬೇಕು. ಅದಕ್ಕಾಗಿ ಶ್ರೀ ಖುರ್ಷಿದ್ ಆಲಂಖಾನ್ ಅವರ ಸಹಕಾರ ಬೇಕು. ಚೀನಾ, ಜಪಾನ್ ದೇಶವನ್ನು ಹಿಂದೆ ಹಾಕಲು ಸಾಧ್ಯವಿರುವಾಗ ಭಾರತಕ್ಕೆ ಸಾಧ್ಯವಿಲ್ಲವೆ? ಈ ನಿಟ್ಟಿನಲ್ಲಿ ಭಾರತವು ಸಕ್ರಿಯವಾಗಿ ಪ್ರಯತ್ನ ನಡೆಸಬೇಕು. ಮಾನ್ಯರಾದ ಕೇಂದ್ರ ಮಂತ್ರಿಗಳಲ್ಲಿ ಸಣ್ಣಪುಟ್ಟ ಬೇಡಿಕೆಯನ್ನು ಮಂಡಿಸಲು ನನಗೆ ಇಷ್ಟವಿಲ್ಲ. ಈ ಉದ್ಯಮವು ಉತ್ತಮ ತಳಹದಿಯ ಮೇಲೆ ನಿಲ್ಲಲು ಸೂಕ್ತ ನೆಲವು ನಮಗೀಗ ಬೇಕು.

## ಮಾರ್ಚ್ ೧೯೮೬

*ಸಂದರ್ಭ: ಕಲ್ಬುರ್ಗಿಯಲ್ಲಿ 'ರೇಷ್ಮೆ ಕೃಷಿಕರ ವಿಚಾರಗೋಷ್ಠಿ' ಯಲ್ಲಿ*
*ರೇಷ್ಮೆ ಸಚಿವನಾಗಿ ಮಾಡಿದ ಉದ್ಘಾಟನಾ ಭಾಷಣ*

ರೇಷ್ಮೆ ಉದ್ಯಮದಲ್ಲಿ ಸಕ್ರಿಯ ನೆರವು ನೀಡಿ ಪ್ರೋತ್ಸಾಹಿಸುತ್ತಿರುವ ಜಿಲ್ಲಾಧಿಕಾರಿ ಶ್ರೀ ಶ್ರೀಧರ್ ಅವರು ಇಂತಹ ಕಾರ್ಯ ಚಟುವಟಿಕೆಗಳನ್ನು ಅನೇಕ ವಿರೋಧಗಳ ಮಧ್ಯೆಯೂ ಯಶಸ್ವಿಯಾಗಿ ಮಾಡಿದ್ದಾರೆ. ನನಗಂತೂ ಸಮಾಧಾನವಾಗಿದೆ. ಈ ಮೇಳವನ್ನು ಮೋಜಿಗಾಗಿ ಮಾಡಿಲ್ಲ. ರೈತನ ದೈನಂದಿನ ಜೀವನವನ್ನು ಉತ್ತಮಪಡಿಸುವಲ್ಲಿ ಉಪಕಸುಬಾಗಿ ರೇಷ್ಮೆ ಹುಳು ಸಾಕಣೆಯನ್ನು ಕೈಗೊಳ್ಳುವುದು ಎಷ್ಟರಮಟ್ಟಿಗೆ ಸಾಧು ಎಂಬುದನ್ನು ಮನವರಿಕೆ ಮಾಡಿಕೊಡುವುದು ನಮ್ಮ ಉದ್ದೇಶ.

ಲೆಕ್ಕವಿಲ್ಲದಷ್ಟು ಯೋಜನೆಗಳು ದೇಶಕ್ಕೆ ಸ್ವಾತಂತ್ರ್ಯ ಬಂದಾಗಿನಿಂದಲೂ ರೂಪಿತಗೊಂಡಿವೆ. ಆದರೆ ಅದರಿಂದ ಸಿಕ್ಕರುವ ಫಲ ಆಶಾದಾಯಕವಾಗಿಲ್ಲ. ಇದಕ್ಕೇನು ಕಾರಣ? ನಾನು ವಿಶ್ಲೇಷಿಸುವಂತೆ ನೀವು ಆಯ್ಕೆ ಮಾಡಿ ಕಳಿಸಿದ ಪ್ರತಿನಿಧಿಗಳು ನಿಮ್ಮ ದುಗುಡ-ದುಮ್ಮಾನಗಳಿಗೆ ಪ್ರತಿಸ್ಪಂದಿಸಲು ಅನಾಸಕ್ತರಾದದ್ದು! ಈಗ ಅದನ್ನೆಲ್ಲ ನೆನೆದು ಪ್ರಯೋಜನವಿಲ್ಲ. ಆದರೆ ಮುಂದಾದರೂ ನಮ್ಮನ್ನು ನಾವು ಸರಿಪಡಿಸಿಕೊಳ್ಳಲು ಸಾಧ್ಯವಿದೆ ಎಂದು ಹೇಳಿಕೊಳ್ಳಲು ಅವಕಾಶವಿದೆ. ವ್ಯವಸಾಯವೊಂದರಿಂದಲೇ ರೈತನ ಜೀವನ ಉತ್ತಮವಾಗುತ್ತದೆಂದು ಭರವಸೆಯಿಡಲು ಸಾಧ್ಯವಿಲ್ಲ. ಹೈನುಗಾರಿಕೆ, ಜೇನು ಸಾಕಣೆ, ಕೋಳಿ ಸಾಕಣೆ ಇತ್ಯಾದಿಗಳನ್ನು ಉಪಕಸುಬನ್ನಾಗಿ ರೈತ ರೂಢಿಸಿಕೊಳ್ಳಬೇಕು, ಅಷ್ಟೇ ಅಲ್ಲ, ಈ ಕಸುಬುಗಳು ರೈತನ ಬದುಕಿನ ಅವಿಭಾಜ್ಯ ಅಂಗಗಳು. ಇಂತಹ ಕಸುಬುಗಳ ಸಾಲಿನಲ್ಲಿ ರೇಷ್ಮೆ ಕಸುಬು ಪ್ರಥಮ ಸಾಲಿನಲ್ಲಿದೆ. ಒಂದು ಬಾರಿ ಮಳೆ ಬಿದ್ದರೂ ಸಾಕು ಒಂದು ರೇಷ್ಮೆ ಬೆಳೆ ಗ್ಯಾರಂಟಿ. ಒಳ್ಳೆಯ ರೇಷ್ಮೆ ಮೊಟ್ಟೆ ಸಿಕ್ಕುವುದಿಲ್ಲ ಎನ್ನುವ ಸ್ಥಿತಿ ಈಗಿಲ್ಲ. ಉತ್ತಮ ಮಟ್ಟದ ರೇಷ್ಮೆ ಮೊಟ್ಟೆಗಳನ್ನು ಒದಗಿಸಲು ರೇಷ್ಮೆ ಇಲಾಖೆ ಪ್ರಾಮಾಣಿಕ ಪ್ರಯತ್ನ ಮಾಡಿದೆ. ಈ ಸುತ್ತಿನಲ್ಲಿ ಬೆಳೆದ ಗೂಡಿನ ಮಾರಾಟಕ್ಕೆ ರೈತರಿಗೆ ತೊಂದರೆಯಾಗಿದೆ ಎಂಬುದನ್ನು ಅರಿತಿದ್ದೇನೆ. ಈ ಪ್ರದೇಶದಲ್ಲಿ ರೇಷ್ಮೆ ನೂಲು ಬಿಚ್ಚುವ ಉದ್ಯಮ ಚುರುಕುಗೊಳ್ಳಬೇಕು. ಈ ನಿಟ್ಟಿನಲ್ಲಿ ಆಸಕ್ತರಾದವರಿಗೆ ತರಬೇತಿ ನೀಡುವ ವ್ಯವಸ್ಥೆಯಾಗಿದೆ. ಉತ್ಸಾಹದಿಂದ ಮುಂದೆ ಬನ್ನಿ, ನಿಮ್ಮ ಪ್ರದೇಶದಲ್ಲಿ ಬೆಳೆದ ಗೂಡು ನಿಮ್ಮ ಪ್ರದೇಶದಲ್ಲಿಯೇ

ಉಪಯೋಗಕ್ಕೆ ಬರುತ್ತದೆ. ನಿಮ್ಮ ಜನರಿಗೇ ಉದ್ಯೋಗವೂ ಸಿಕ್ಕುತ್ತದ' ದೂರದ ಪ್ರದೇಶಗಳಿಗೆ ಸಾಗಣೆ ಮಾಡುವಾಗ ಆಗುವ ತೊಂದರೆ ತಪ್ಪುತ್ತದೆ.

ರೇಷ್ಮೆ ಕಸುಬಿನ ಮೂರು ಮಂತ್ರಗಳನ್ನು ನೆನಪು ಮಾಡುತ್ತೇನೆ. ರೋಗರಹಿತ ಮೊಟ್ಟೆ, ಉತ್ತಮ ತೋಟ, ಬೆಳಗಾರನಲ್ಲಿ ಅತೀವ ಶ್ರದ್ಧೆ, ರೈತರಲ್ಲಿರಬೇಕಾದ ಶ್ರದ್ಧೆಗೆ ವೈಜ್ಞಾನಿಕ ತಳಹದಿಯಿರಬೇಕು. ಅದನ್ನು ಒದಗಿಸುವ ಹಾದಿಯಲ್ಲಿ ಇಂದು ನಡೆಯುತ್ತಿರುವ ವಿಚಾರಗೋಷ್ಠಿ ನೆರವಾಗುತ್ತದೆ. ಈ ಗೋಷ್ಠಿಯನ್ನು ಉದ್ಘಾಟಿಸಲು ನನಗೆ ಸಂತೋಷವಾಗಿದೆ. ತರುಣ ವಿಜ್ಞಾನಿಗಳು, ಕ್ಷೇತ್ರ ಕಾರ್ಯದ ಅನುಭವಗಳಲ್ಲಿ ಪಕ್ವವಾಗಿರುವ ಹಿರಿಯರು, ಇಲ್ಲಿ ಸೇರಿದ್ದಾರೆ, 'ಹಳೇ ಬೇರು ಹೊಸ ಚಿಗುರು' ಸೇರಿರುವ ಮಹಾವೃಕ್ಷದಡಿ ನೀವೆಲ್ಲ ನೆರೆದಿದ್ದೀರಿ. ಈಗ ಗೋಷ್ಠಿ ಪ್ರಾರಂಭವಾಗಲಿ. ಉಪಯುಕ್ತ ವಿಚಾರಗಳ ಚರ್ಚೆಯಾಗಲಿ. ಚರ್ಚೆ ಫಲಪ್ರದವಾಗಲಿ.

## ಏಪ್ರಿಲ್ ೧೯೮೬

*ಸಂದರ್ಭ: ಮಧುಗಿರಿ ತಾಲ್ಲೂಕಿನ ದೊಡ್ಡೇರಿಯಲ್ಲಿ 'ಚಾಕಿ ಸಾಕಣೆ ಕೇಂದ್ರ'ದ ಕಟ್ಟಡಕ್ಕೆ ಶಿಲಾನ್ಯಾಸ ಮಾಡಿದಾಗ ರೇಷ್ಮೆ ಸಚಿವರಾಗಿ ಬೆಳೆಗಾರರನ್ನು ಉದ್ದೇಶಿಸಿ ಮಾಡಿದ ಭಾಷಣ*

ರೇಷ್ಮೆ ಬೆಳೆಯಿಂದ ಗಳಿಸಿದ ಹಣದಿಂದಲೇ ನಾನು ವಿದ್ಯೆ ಕಲಿತವನು. ಈ ಬೆಳೆಯನ್ನು ಮಾಡುವುದು ಹೇಗೆಂಬುದನ್ನು ಓದಿ ಕಲಿಯುವ ಅಗತ್ಯ ನನಗಿಲ್ಲ. ತಲೆಮಾರಿನ ಈ ಕಸುಬನ್ನು ಮತ್ತಷ್ಟು ಸದೃಢವಾಗಿ ಬೆಳೆಸುವ ಹಂಬಲದವನು ನಾನು. ಈ ಊರಿನ ರೈತರು ಇಲ್ಲಿ ಒಂದು ಚಾಕಿ ಸಾಕಣೆ ಕೇಂದ್ರವಾಗಬೇಕೆಂದು ಒತ್ತಾಯ ತಂದಿದ್ದರು. ಆದರೆ ನಿವೇಶನ ದೊರೆಯದೆ ತಡವಾಗಿತ್ತು. ನಿವೇಶನವನ್ನು ಒದಗಿಸಿಕೊಡುವಲ್ಲಿ ಜಿಲ್ಲಾಧಿಕಾರಿಗಳು ಪ್ರಯತ್ನ ನಡೆಸಿದರು. ಅದರ ಫಲವಾಗಿಯೇ ಕಟ್ಟಡಕ್ಕೆ ಶಿಲಾನ್ಯಾಸ ಮಾಡಲು ಅವಕಾಶವಾಯಿತು. ಇಲ್ಲಿ ಕಟ್ಟಡ ನಿರ್ಮಾಣವಾಗಿಬಿಟ್ಟರೆ ಬೆಳೆಗಾರರ ಕಲ್ಯಾಣವಾಗಿ ಬಿಡುತ್ತದೆ ಎಂಬ ನಂಬಿಕೆ ನನ್ನದಲ್ಲ. ಹಿಪ್ಪುನೇರಳೆ ನಾಟಿ ಮಾಡಿ ಹುಳು ಸಾಕಣೆ ಕೈಗೊಂಡವರು ಹಣ ಗಳಿಕೆಯಲ್ಲಿ ವಿಕ್ರಮ ಸ್ಥಾಪಿಸಿರುವುದನ್ನು ಅವರ ಬಾಯಿಂದಲೇ ಕೇಳಿದ್ದೇನೆ. ದಾರಿಯಲ್ಲಿ ಬರುತ್ತಿದ್ದಾಗ 'ತುಂಬಾಡಿ' ಗ್ರಾಮದ ರೈತ ಮಿತ್ರ ಹೇಳಿದ, 'ಇರುವ ೮ ಗುಂಟೆ ಜಮೀನಿನಲ್ಲಿ ಒಂದು ವರ್ಷದಲ್ಲಿ ಇಪ್ಪತ್ತು ಸಾವಿರ ರೂಪಾಯಿ ಸಂಪಾದಿಸಿದೆ' ಎಂದು ಹೆಮ್ಮೆಪಟ್ಟ. ಇದನ್ನು ಕೇಳಿ ಆಶ್ಚರ್ಯವೂ, ಸಂತೋಷವೂ ಒಟ್ಟಿಗೇ ಆಯಿತು. ಇದೊಂದು ದಾಖಲೆಯೆಂದು ಕೊಳ್ಳಬಹುದು. ಸರಾಸರಿ ಕ್ರಮದಲ್ಲಿ ಇಂತಹ ಲಾಬ ಸಿಕ್ಕುವುದೆಂಬ ನಿರೀಕ್ಷೆ ಇಟ್ಟುಕೊಳ್ಳುವಂತಿಲ್ಲ. ಸರಾಸರಿ ಇದೊಂದು ಲಾಭಕರ ಕಸುಬು. ಇದನ್ನು ಬೆಳೆಸಲು ಇಲ್ಲಿನ ರೈತಾಪಿಗಳು ಪ್ರಯತ್ನಶೀಲರಾಗಬೇಕು. ಇಲ್ಲಿನ ಪರಿಸ್ಥಿತಿಯನ್ನು ಗಮನಿಸಿದರೆ ಕಡಿಮೆ ನೀರನ್ನು ಬಳಸಿಕೊಂಡು ಬೆಳೆಯಬಲ್ಲ ಏಕೈಕ ಬೆಳೆಯೆಂದರೆ ಹಿಪ್ಪುನೇರಳೆ ಬೇಸಾಯವೆಂಬುದನ್ನು ಈಗಾಗಲೇ ನೀವೆಲ್ಲ ತಿಳಿದಿದ್ದೀರಿ. ಹುಳು ಸಾಕಣೆಯಲ್ಲಿನ ಪ್ರಥಮ ಘಟ್ಟವನ್ನು ಇಲಾಖೆಯು ಮಾಡಿಕೊಡುತ್ತದೆ. ದ್ವಿತೀಯ ಘಟ್ಟದಲ್ಲಿ ಅಷ್ಟೇ ಶ್ರದ್ಧೆ ವಹಿಸಿದ್ದಾದರೆ ಲಾಭ ಬರುತ್ತದೆ.

# ಮೇ ೧೯೮೬

*ಸಂದರ್ಭ : ಸಂತೇ ಮಾವತ್ತೂರಿನಲ್ಲಿ ನಡೆದ 'ವಿಚಾರ ಸಂಕಿರಣ' ಮತ್ತು ಜನಸಂಪರ್ಕ ಕಾರ್ಯಕ್ರಮಗಳ ಸಮಾವೇಶ. ಅಲ್ಲಿ ನೆರೆದಿದ್ದ ಮೈಸೂರು ತಳಿ ಬಿತ್ತನೆ ವಲಯದ ರೇಷ್ಮೆ ಬೆಳೆಗಾರರ ಸಮ್ಮೇಳನದಲ್ಲಿ ರೇಷ್ಮೆ ಸಚಿವರಾಗಿ ಮಾಡಿದ ಉದ್ಘಾಟನಾ ಭಾಷಣ*

ಇಂದು ನನಗೆ ಹೆಚ್ಚಿನ ಸಂತೋಷವಾಗಿದೆ. ಇಲ್ಲಿನ ಇಂತಹ ಕಟ್ಟಡ ನಿರ್ಮಾಣ ವಾಗಬೇಕೆಂಬ ಕನಸು ಕಂಡವನು ನಾನು. ಅದಕ್ಕಾಗಿ ಸರ್ವಪ್ರಯತ್ನವನ್ನೂ ನಡೆಸಿದ್ದೆ. ಸೂಕ್ತ ನಿವೇಶನ ದೊರೆಯದೆ ನಿರಾಶನಾಗಿದ್ದಾಗ ಶ್ರೀ ವೆಂಕಟರಾಮಯ್ಯ ಮುಂತಾದ ದಾನಿಗಳು ಮುಂದೆ ಬಂದರು. ಅವರ ತ್ಯಾಗ ನೆನಪಿನಲ್ಲಿ ಉಳಿಯುವಂಥದು. ಈ ನಿವೇಶನವನ್ನು ಒದಗಿಸಿದ ದಾನಿಗಳಿಗೆ ನಿಮ್ಮೆಲ್ಲರ ಪರವಾಗಿ ಮಾಲಾರ್ಪಣೆ ಮಾಡಿ ವಂದಿಸುವೆ.

ಮೈಸೂರು ಬಿತ್ತನೆ ವಲಯಕ್ಕೆ ಬಹುವರ್ಷಗಳಿಂದಲೂ ಆಗದಿದ್ದ ನಿರ್ಮಾಣ ಕಾರ್ಯವನ್ನು ಸರ್ಕಾರ ಕೈಗೆತ್ತಿಕೊಂಡಿದೆ. ಅದರಂತೆ ಒಂದೊಂದು ಕಾರ್ಯಗಳು ಪೂರ್ಣಗೊಳ್ಳುತ್ತಿವೆ. ಈ ಹಿಂದೆ ಬಿತ್ತನೆ ವಲಯಕ್ಕೆ ಅನುಕೂಲ ಕಲ್ಪಿಸುವ ಪ್ರಯತ್ನ ನಡೆದಿರಲಿಲ್ಲವೆಂಬುದು ಕಟುಸತ್ಯ. ಬಿತ್ತನೆ ವಲಯಕ್ಕೆ ಮಾಡುವ ವೆಚ್ಚ ಖಂಡಿತಾ ವ್ಯರ್ಥವಲ್ಲ. ಆದ್ದರಿಂದ ಇಡೀ ರಾಷ್ಟ್ರಕ್ಕೆ ಅನುಕೂಲವೆಂಬ ನಿಚ್ಚಳ ಸತ್ಯವನ್ನು ಗುರುತಿಸಿ ಅದಕ್ಕೆ ಸರ್ವ ನೆರವು ನೀಡಲು ಕಾರ್ಯಕ್ರಮ ರೂಪಿಸಲು ಮುಂದಾದವರು ಈಗ ಅಧಿಕಾರದಲ್ಲಿರುವ ಶ್ರೀ ಬಿ. ಕೆ. ದಾಸ್ ಅವರು. ಈ ಕ್ಷೇತ್ರದ ಬೆಳೆಗಾರರ 'ಕಾರ್ಯ' ರಾಷ್ಟ್ರದ ಸಂಪತ್ತನ್ನು ರೂಢಿಸುವುದರಲ್ಲಿ ನೆರವಾಗಿದೆ.

ಬೆಳೆಗಾರನಿಗೆ ರೋಗರಹಿತ ಬಿತ್ತನೆ ದೊರೆಯುವಂತಾಗಿ ಬೆಳೆದ ಗೂಡಿಗೆ ಪ್ರೋತ್ಸಾಹಕ ಬೆಲೆ ಸಿಕ್ಕಬೇಕೆಂಬುದು ನನ್ನ ವಾದ. ಈ ಹಿಂದೆ ನೂರು ಗೂಡುಗಳಿಂದ ಶೇ. ೧೮-೨೦ ಮೊಟ್ಟೆಗಳಾಗುತ್ತಿದ್ದುದು ಈಗ ಶೇಕಡಾ ೩೦-೩೬ ರಷ್ಟಾಗುವಂತಾಗಲೂ ಇಲಾಖಾಧಿಕಾರಿಗಳು ಹಾಗೂ ನೌಕರರು ಶ್ರಮವಹಿಸಿ ಕೆಲಸ ಮಾಡಿರುವುದು ಕಾರಣ.

ರೋಗರಹಿತ ಮೊಟ್ಟೆಯೊಂದಿದ್ದರೆ ಸಾಕೆ...? ಬೆಳೆ ಮಾಡುವವರು ಶ್ರದ್ಧೆವಹಿಸದೆ ಹೋದರೆ ರೋಗರಹಿತ ಮೊಟ್ಟೆ ಒದಗಿಸಿಕೊಟ್ಟ ಇಲಾಖೆಯ ಶ್ರಮ ವ್ಯರ್ಥವಾಗುತ್ತದೆ. ಹಿಪ್ಪುನೇರಳೆ ತೋಟ ನಿರ್ವಹಣೆಯಲ್ಲಿ ಅಸಡ್ಡೆ ತೋರಿದರೆ ಇಳುವರಿ ಮುಗ್ಗರಿಸುತ್ತದೆಂಬುದನ್ನು ನೀವು ತಿಳಿಯಬೇಕು. ನಾನು ಇನ್ನು ಹೆಚ್ಚಿಗೆ ಮಾತನಾಡಲು ಇಚ್ಛಿಸುವುದಿಲ್ಲ. ನನ್ನ ರೈತ ಬಂಧುಗಳು ಮಾತನಾಡುವುದನ್ನು ಕೇಳಲು ಉತ್ಸುಕನಾಗಿದ್ದೇನೆ. ನಿಮ್ಮ ಅನಿಸಿಕೆಗಳನ್ನು ಸ್ಪಷ್ಟವಾಗಿ ಹೇಳಿರಿ. ಸಮಸ್ಯೆಗಳನ್ನು ಪ್ರಸ್ತಾಪಿಸಿರಿ. ಸಾಧ್ಯವಾದಷ್ಟು ಪರಿಹಾರ ಕಂಡುಕೊಳ್ಳೋಣ.

## ಜೂನ್ ೧೯೮೬

*ಸಂದರ್ಭ : ಚನ್ನಪಟ್ಟಣ ತಾಲ್ಲೂಕಿನ ಕಣ್ವದಲ್ಲಿ ನಡೆದ 'ರೇಷ್ಮೆ ಬೆಳೆಗಾರರ ಸಮಾವೇಶ'ದಲ್ಲಿ ರೇಷ್ಮೆ ಸಚಿವರಾಗಿ ಆಡಿದ ಮಾತುಗಳು*

ಈ ಊರಿನೊಡನೆ ನನಗೆ ನಿಕಟ ಸಂಬಂಧವಿದೆ. ಇಡೀ ದೇಶದಲ್ಲಿ ಪ್ರಸಿದ್ಧಿ ಪಡೆದಿರುವ 'ಕಣ್ವ-೨' ಎನ್ನುವ 'ಎಂ-೫'ತಳಿಯನ್ನು ಕೊಟ್ಟ ಕೀರ್ತಿ 'ಕಣ್ವ'ಗ್ರಾಮದ್ದು. ಈ ಊರಿಗೆ ಅಮ್ಮನ ಕಂಕುಳಲ್ಲಿ ಆಶ್ರಯ ಪಡೆದು ಬಂದಿದ್ದೇನೆ. ಅಪ್ಪನ ಹೆಗಲ ಮೇಲೆ ಕುಳಿತು ಬಂದಿದ್ದೇನೆ. ವಕೀಲನಾಗಿ ಬಂದಿದ್ದೇನೆ. ಸಿಲ್ಕ್ ಅಸೋಸಿಯೇಷನ್ ಅಧ್ಯಕ್ಷನಾಗಿ ಭೇಟಿ ನೀಡಿದ್ದೇನೆ. ಈಗ ಮಂತ್ರಿಯಾಗಿ ನಿಮ್ಮ ಮಧ್ಯೆ ಬಂದಿದ್ದೇನೆ. ವೈಭವದಿಂದ ಮೆರವಣಿಗೆ ಮಾಡಿಕೊಂಡು ಬಂದು ವೇದಿಕೆಯ ಮೇಲೆ ಕೂರಿಸಿದ್ದೀರಿ. ಆದರೆ ಅಕ್ಷರಶಃ ಇಂತಹ ವೈಭವಗಳಿಗೆ ನಾನು ಪಾತ್ರನಲ್ಲ. ನಿಮ್ಮ ಸೇವೆಯಲ್ಲಿ ನನ್ನನ್ನು ಗುರುತಿಸಿಕೊಳ್ಳುವ ಹಂಬಲ ನನ್ನದು. ಇಂದು ಈ ಊರಿನಲ್ಲಿ ಉದ್ಘಾಟನೆಗೊಂಡ ಕಟ್ಟಡಗಳು, ಸಿಬ್ಬಂದಿಯ ವಸತಿಗೃಹ ಹಾಗೂ ಹುಳು ಸಾಕಣೆ ಕಟ್ಟಡ, ಬಹಳ ವರ್ಷಗಳಿಂದಲೂ ಅಪೂರ್ಣವಾಗಿಯೇ ಉಳಿದಿದ್ದುವು. ಬೇಗ ಆಗಲೇಬೇಕೆಂಬ ತೀರ್ಮಾನ ಮಾಡಿದೆ. ಸಂಬಂಧಿಸಿದವರೊಡನೆ ಕಟುವಾಗಿ ನಡೆದುಕೊಂಡೆ. ನಿರ್ವಾಹವಿರಲಿಲ್ಲ. ಬೇಗನೆ ಪೂರ್ಣಗೊಳಿಸಿದ್ದಾರೆ. ನನಗೆ ಸಮಾಧಾನವಾಗಿದೆ. ವಸತಿ ಸೌಲಭ್ಯ ಒದಗಿಸಿರುವುದರಿಂದ ಇನ್ನು ಮುಂದೆ ನೌಕರರು ಇಲ್ಲಿಯೇ ಉಳಿದು ಇಲಾಖೆಯ ಕೆಲಸಗಳನ್ನು ಮತ್ತಷ್ಟು ಸಮರ್ಪಕವಾಗಿ ಮಾಡಲಿ.

ಹುಳು ಸಾಕಣೆಯ ವಿಧಾನದಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ಆದರೆ ಅದನ್ನು ಅಳವಡಿಸಿಕೊಳ್ಳುವುದರಲ್ಲಿ ಈ ಸುತ್ತಲಿನ ಜನ ಇನ್ನೂ ಮೀನ- ಮೇಷ ಎಣಿಸುತ್ತಿದ್ದಾರೆ. ಒಳ್ಳೆಯ ಪೌಷ್ಠಿಕಾಂಶವಿರುವ ಹಾಗೂ ಹೆಚ್ಚು ಇಳುವರಿಯನ್ನು ಕೊಡುವ 'ಕಣ್ವ-೨' ಅಥವಾ 'ಎಂ-೫' ಎಂದು ಜನಪ್ರಿಯವಾಗಿರುವ ತಳಿಯ ಕಡ್ಡಿಯನ್ನು ಇಲ್ಲಿಯೇ ಇನ್ನೂ ಹಲವು ಕುಟುಂಬಗಳು ನಾಟಿ ಮಾಡಿಲ್ಲವೆಂದು ಕೇಳಿದೆ. ಇದು ವಿಶಾದನೀಯ ಸಂಗತಿ. ಅಪ್ಪ ಹಾಕಿದ ಆಲದ ಮರಕ್ಕೆ ನೇಣು ಬೀಳುವ ಸ್ವಭಾವದವರು ಇನ್ನೂ ಇದ್ದಾರಲ್ಲಾ ಎಂಬುದು ನನಗೆ ನೋವು ತರುವ ವಿಷಯ. ನಾನು ಮಾತನಾಡಿರುವುದನ್ನು ಅನೇಕ ಕಡೆ ನೀವು ಕೇಳಿಯೇ ಇದ್ದೀರಿ. ಇಲ್ಲಿ ನನ್ನ ರೈತ ಮಿತ್ರರು ಮಾತನಾಡುವುದನ್ನು ಕೇಳುವ ಇಷ್ಟ ನನ್ನದು. ನಿಮ್ಮ ಅನಿಸಿಕೆಗಳನ್ನು, ಸಮಸ್ಯೆಗಳನ್ನು ಸಭೆಯಲ್ಲಿ ಮಂಡಿಸಿರಿ. ಪರಿಣತರು ಉತ್ತರಿಸುತ್ತಾರೆ. ಅವರು ಬಗೆಹರಿಸಲಾರದಂತಹವುಗಳನ್ನು ನಾನು ಪರಿಹರಿಸಲು ಸಾಧ್ಯವೇ ಎಂಬುದನ್ನು ವಿಚಾರ ಮಾಡುತ್ತೇನೆ.

## ಜುಲೈ ೧೯೮೬

*ಸಂದರ್ಭ : ತಲಘಟ್ಟಪುರದ 'ಕರ್ನಾಟಕ ರಾಜ್ಯ ರೇಷ್ಮೆ ಅಭಿವೃದ್ಧಿ ಸಂಸ್ಥೆ'ಯ ಕಟ್ಟಡದ ಉದ್ಘಾಟನಾ ಸಮಾರಂಭದಲ್ಲಿ ರೇಷ್ಮೆ ಸಚಿವರಾಗಿ ಆಡಿದ ಮಾತುಗಳು*

ಇಂತಹ ಸಂಶೋಧನಾ ಸಂಸ್ಥೆಯ ಅಗತ್ಯವಿದೆಯೆಂದು ಮನಗಂಡು ಚಿಂತನೆ ನಡೆಸಿದ್ದು ಹಲವರು. ಅವರ ಆಸೆಗಳು ನೆರವೇರುವಂತಹ ಕಾರ್ಯ ಇಲ್ಲಿ ನಡೆದಿದೆ. ಈಗಾಗಲೇ ಮೈಸೂರಿನಲ್ಲಿ ಇಂತಹ ಸಂಸ್ಥೆಯಿದೆ ಎಂದ ಮೇಲೆ ಇಲ್ಲಿ ಇಂತಹ ಸಂಸ್ಥೆಯ ಸ್ಥಾಪನೆಯ ಅಗತ್ಯವಿತ್ತೆ ಎಂದು ಕೆಲವರು ಯೋಚಿಸಿದ್ದುಂಟು. ಈ ಎರಡೂ ಸಂಸ್ಥೆಗಳ ಕಾರ್ಯ ವ್ಯಾಪ್ತಿಯನ್ನು ವಿಶ್ಲೇಷಿಸಿದಾಗ ಸ್ವಲ್ಪ ವ್ಯತ್ಯಾಸ ಇದೆಯೆನ್ನಲೇಬೇಕು. ರೈತನಿಗೆ ಎದುರಾಗುವ ಕ್ಷೇತ್ರ ಸಮಸ್ಯೆಗಳಿಗೆ ಪರಿಹಾರ ಸಿಕ್ಕುವಂತಾಗಬೇಕು. ಆ ನಿಟ್ಟಿನಲ್ಲಿ ಆಗಬೇಕಾದ ಕೆಲಸ ಇಲ್ಲಿ ನಡೆಯುತ್ತದೆ.

ರಾಜ್ಯದ ಈ ಉದ್ಯಮವನ್ನು ಮತ್ತಷ್ಟು ಉನ್ನತಿಯೆಡೆಗೆ ಎಳೆದೊಯ್ಯಬೇಕೆಂದು ಬಯಸಿದಾಗ ವಿಶ್ವಬ್ಯಾಂಕ್‌ನ ಕಡೆಯಿಂದ ಆರ್ಥಿಕ ನೆರವು ಪಡೆಯಲು ಸಾಧ್ಯವಾಯಿತು. ಸುಸಜ್ಜಿತ ಕಟ್ಟಡಗಳು, ಶೈತ್ಯಾಗಾರ ನಿರ್ಮಾಣವಾಗಿದೆ. ಮೂಲಭೂತವಾಗಿ ಬೇಕಾಗಿರತಕ್ಕ ಕೆಲಸಗಳು ಈಗ ಆಗಿರುವುದೇನೋ ವಾಸ್ತವ. ಆದರೆ ಈ ಕೆಲಸಗಳು ನಡೆದಿರುವುದರಿಂದ ರೇಷ್ಮೆ ಉದ್ಯಮ ಬೆಳೆದುಬಿಟ್ಟಿದೇ ಎಂದು ಒಪ್ಪಲಾರೆ. ಇಲ್ಲಿ ಕೆಲಸ ಮಾಡುವ ಜನರಲ್ಲಿ ಅರ್ಪಣಾ ಮನೋಭಾವ ಬರಬೇಕು, ಉದ್ಯಮದಲ್ಲಿದ್ದು ಹೆಣಗುತ್ತಿರುವ ಜನರ ಮುಖಗಳು ಸಂಶೋಧಕರ ಕಣ್ಣೆದುರು ನಿಲ್ಲಬೇಕು.

ಸಂಶೋಧನೆ ಎಂದ ಮೇಲೆ ಜಪಾನ್, ಕೊರಿಯಾದಲ್ಲಿ ನಡೆದಿರುವ ಸಂಶೋಧನೆ ಎಂದು ನನ್ನ ಅರ್ಥವಲ್ಲ. ನನ್ನ ನಾಡಿಗೆ, ನನ್ನ ನಾಡ ಜನರಿಗೆ ಅನುಕೂಲವಾಗುವಂತಹ ಸಂಶೋಧನೆ ಆಗಬೇಕು. ಭಾರತದ ರೇಷ್ಮೆ ಉದ್ಯಮಕ್ಕೆ ಅನುಕೂಲವಾಗುವಂತಹ ಸಂಶೋಧನೆ ಬೇಕು. ಬೆಳೆ ಗ್ಯಾರಂಟಿ ಆಗುವಂತೆ ನಂಬಿಕೆ ಬರಬೇಕು, ಆಗ ರೈತ ತಾನೇ ಮುಂದಾಗುತ್ತಾನೆ. ವರ್ಷದ ೪ ಬೆಳೆ ಕೆಟ್ಟು ೧ ಬೆಳೆ ಆದರೆ ಯಾವ ರೈತನಾದರೂ ಹಿಪ್ಪುನೇರಳೆಯನ್ನು ಉಳಿಸಿಕೊಂಡಾನೇನು? ಯೋಚನೆ ಮಾಡಿ ರೋಗರಹಿತವಾದ ಉತ್ತಮ ಗುಣಮಟ್ಟದ ಮೊಟ್ಟೆ ತಯಾರಿಸುವುದು ಅಗತ್ಯ. ವಿಜ್ಞಾನಿಗಳು ಹೇಳುತ್ತಾರೆ. ಈಗ ಇರುವ ಬೈವೋಲ್ಟಿನ್ ತಳಿ ಚೆನ್ನಾಗಿದೆ. ಬೆಳೆ ಆಗಿಯೇ ಆಗುತ್ತೆ. ಇಲಾಖೆ ವಿಸ್ತರಣಾ ಚಟುವಟಿಕೆ ಸಮರ್ಪಕವಾಗಿ ಆಗಬೇಕು ಎಂದು. ಆದರೆ ಇಲಾಖೆಯವರು ಹೇಳುತ್ತಾರೆ ಇರುವ ತಳಿಗಳು ಇನ್ನೂ ಸದೃಢವಾಗಿರಬೇಕು. ನಮ್ಮ ವಿಸ್ತರಣಾ ಕಾರ್ಯ ಚೆನ್ನಾಗಿಯೇ ಇದೆ.... ಎಂದು. ಇವರಿಬ್ಬರು ವ್ಯಕ್ತಪಡಿಸುವ ಅಭಿಪ್ರಾಯಗಳ ವಿಶ್ಲೇಷಣೆ ಮಾಡಿದರೆ ಸರಪಳಿಯಲ್ಲಿ ಯಾವುದೋ ಕೊಂಡಿ ಕಳಚಿರಬಹುದೆ ಎನ್ನಿಸುತ್ತದೆ. ಈ ಬಗೆಗೆ ಯಾರನ್ನೂ ನಿಷ್ಠುರ ಮಾಡುವುದು ನನ್ನ ಉದ್ದೇಶವಲ್ಲ. ನನಗೆ ಬೇಕಾಗಿರುವುದು ಉತ್ತಮ ಫಲಿತಾಂಶ. ನನ್ನ ಅಭಿಪ್ರಾಯದಲ್ಲಿ ಈ ಉತ್ತಮ ಫಲಿತಾಂಶ ಪಡೆಯಲು ಸದೃಢವಾದ, ನಮ್ಮ ಸಾಮಾನ್ಯ ರೈತನ ಗುಡಿಸಲಿನಲ್ಲಿ ಬೆಳೆಯಲು ಸಾಧ್ಯವಾಗುವ ರೋಗರಹಿತ ಮೊಟ್ಟೆ ಒದಗಿಸುವುದರಿಂದಲೂ, ಇಲಾಖಾ ಅಧಿಕಾರಿಗಳ ಶ್ರದ್ಧಾಪೂರ್ಣ ವಿಸ್ತರಣಾ ಚಟುವಟಿಕೆಗಳಿಂದಲೂ ಹಾಗೂ ರೈತನ ಅರ್ಪಣಾತ್ಮಕ ಶ್ರಮದಿಂದಲೂ ಈ ಫಲಿತಾಂಶ ಸಾಧ್ಯ.

❑❑

# ೪. ರೇಷ್ಮೆ ಉದ್ಯಮ ಕುರಿತು...

ಶಾಸಕರಾಗಿ ವಿಧಾನಸಭೆಯಲ್ಲಿ
೧೧.೭.೮೩ರಂದು ಮಾಡಿದ ಭಾಷಣ

**ಈ** ದಿವಸ ಸದನದ ಮುಂದಿರುವ ಬೇಡಿಕೆಗಳಿಗೆ ನನ್ನ ಒಪ್ಪಿಗೆಯನ್ನು ಸೂಚಿಸುತ್ತಾ, ಮಾನ್ಯ ಗಂಗಾಧರನ್ ಅವರು ಸಂಕ್ಷಿಪ್ತವಾಗಿ ಹೇಳಿರುವಂತಹ ವಿಷಯಗಳಿಗೆ ನಾನೂ ಸಹ ಬಾಯಿ ಹಾಕುತ್ತೇನೆ. ಈಗ ತುಮಕೂರು, ಕೋಲಾರ, ಬೆಂಗಳೂರು ಹಾಗೂ ಮಂಡ್ಯ ಜಿಲ್ಲೆಗಳಲ್ಲಿ ಅತಿ ಹೆಚ್ಚಿನ ರೈತರು ತಮ್ಮ ಜೀವನಕ್ಕೆ ಆಧಾರವಾಗಿಟ್ಟುಕೊಂಡಿರುವ ಕಸುಬು ಎಂದರೆ ರೇಷ್ಮೆ ಉದ್ಯಮ. ಆದ್ದರಿಂದ ಇದರ ಮೇಲೆ ಕೆಲವು ವಿಷಯಗಳನ್ನು ಹೇಳುತ್ತಾನೆ. ಈ ರೇಷ್ಮೆ ಉದ್ಯಮ ನಮ್ಮ ಭಾರತ ದೇಶಕ್ಕೆ ಬಹಳ ಪುರಾತನವಾದಂಥ ಉದ್ಯಮವಾಗಿದೆ. ಈ ಉದ್ಯಮದ ಉಗಮ ನಮ್ಮ ದೇಶದಲ್ಲಿ ೧೬೭೦ ರಲ್ಲಿ ಪ್ರಾರಂಭವಾಯಿತೆಂದು ತಿಳಿದುಬರುತ್ತದೆ. ನಮ್ಮ ಕರ್ನಾಟಕ ರಾಜ್ಯದಲ್ಲಿ ಪ್ರಾರಂಭವಾಗಿದ್ದು ಟಿಪ್ಪುಸುಲ್ತಾನ್ ಕಾಲದಲ್ಲಿ. ಟಿಪ್ಪುಸುಲ್ತಾನ್ ತನ್ನ ಪ್ರತಿನಿಧಿಗಳನ್ನು ಚೈನಾ ದೇಶಕ್ಕೆ ಕಳುಹಿಸಿಕೊಟ್ಟು ಅಲ್ಲಿಂದ ರೇಷ್ಮೆ ಬೆಳೆಯ ಕಡ್ಡಿ ಮತ್ತು ಬೀಜವನ್ನು ತರಿಸಿಕೊಂಡು ಹಳೆಯ

ಮೈಸೂರು ಭಾಗದಲ್ಲಿ ರೇಷ್ಮೆಯನ್ನು ಬೆಳೆದಂಥ ಮಾಹಿತಿ ಇದೆ. ಈ ದಿವಸ ಭಾರತ ದೇಶದಲ್ಲಿ ಬೆಳೆಯುವಂತಹ ರೇಷ್ಮೆಯಲ್ಲಿ ಸಿಂಹಪಾಲು ನಮ್ಮ ಕರ್ನಾಟಕ ರಾಜ್ಯದ್ದೇ ಆಗಿದೆ. ಇಲ್ಲಿ ಶೇಕಡಾ ೮೦ ರಷ್ಟು ರೇಷ್ಮೆಯನ್ನು ಉತ್ಪತ್ತಿ ಮಾಡಲಾಗುತ್ತಿದೆ. ಆದ್ದರಿಂದ ರೇಷ್ಮೆ ಉದ್ಯಮದಲ್ಲಿ ನಮ್ಮ ಕರ್ನಾಟಕದ ಪಾತ್ರ ಬಹಳ ದೊಡ್ಡದಾಗಿದೆ. ಇದನ್ನು ಇನ್ನೂ ಹೆಚ್ಚು ಮಾಡಬೇಕಾಗಿದೆ ಮತ್ತು ಇದರ ಗುಣಮಟ್ಟವನ್ನು ಸಹ ಹೆಚ್ಚು ಮಾಡಬೇಕಾಗಿದೆಯೆಂಬುದು ಈ ಉದ್ಯಮದಲ್ಲಿ ಆಸಕ್ತಿ ಇರುವವರೆಲ್ಲರ ಅಭಿಲಾಷೆಯಾಗಿದೆ. ನಾನೂ ಕೂಡ ಒಬ್ಬ ಸಾಮಾನ್ಯ ಬೆಳೆಗಾರನ ಮಗನಾಗಿ ಮತ್ತು ಸ್ವತಃ ನಾನೂ ಸಹ ಬೆಳೆಗಾರನಾಗಿ ಇದನ್ನು ಸಮಗ್ರವಾಗಿ ಪರಿಶೀಲನೆ ಮಾಡಿದಾಗ ಈ ಒಂದು ಉದ್ಯಮವನ್ನು ಪ್ರಗತಿಪಥದಲ್ಲಿ ತೆಗೆದುಕೊಂಡು ಹೋಗಬೇಕಾದರೆ ಎರಡು ಪ್ರಮುಖವಾದಂತ ಅಂಶಗಳನ್ನು ನಾವು ಗಮನಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಮೊದಲನೆಯದು - ಬೆಳೆಗಾರರಿಗೆ ರೋಗರಹಿತವಾದಂಥ ಮತ್ತು ಉತ್ತಮವಾದಂಥ ಮೊಟ್ಟೆಗಳನ್ನು ಒದಗಿಸುವುದು, ಎರಡನೆಯದು- ಅವರು ಬೆಳೆದಂಥ ಬೆಳೆಗೆ ಅಂದರೆ ಗೂಡಿಗೆ ಉತ್ತಮವಾದಂಥ ಬೆಲೆಯನ್ನು ಕಲ್ಪಿಸಿಕೊಡುವುದು. ಈ ಎರಡನ್ನೂ ಅವನು ಗಮನದಲ್ಲಿಟ್ಟುಕೊಂಡು ಮುಂದುವರೆದರೆ ಬಹುಶಃ ಈ ಉದ್ಯಮದ ಪ್ರಗತಿ ಸಾಧ್ಯವಾಗಬಹುದು. ಆದರೆ ನನ್ನ ಅಭಿಪ್ರಾಯದಲ್ಲಿ ಅದಕ್ಕೆ ಸಂಬಂಧಪಟ್ಟ ಇಲಾಖೆ ಈ ಎರಡೂ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕೆಲಸ ಮಾಡುವುದರಲ್ಲಿ ಸಂಪೂರ್ಣವಾಗಿ ಫಲಪ್ರದವಾಗಿದೆ ಎಂದು ಒಪ್ಪಿಕೊಳ್ಳುವುದಕ್ಕೆ ಸಿದ್ಧನಿಲ್ಲ.

ರೇಷ್ಮೆ ಸಂಘದ ಅಧ್ಯಕ್ಷನಾಗಿ ಸುಮಾರು ಎರಡು ವರ್ಷಗಳ ಹಿಂದೆ ನಾನು ಆನೇಕಲ್ ತಾಲ್ಲೂಕಿಗೆ ಹೋಗಿ ರೈತರ ಪರಿಸ್ಥಿತಿಯನ್ನು ನೋಡಿದಾಗ ಕರುಳು ಕಿತ್ತುಬರುವ ತರಹ ಇತ್ತು. ಬೈವೋಲ್ಟೀನ್ ಬೀಜವನ್ನು ತಂದು ಹುಳುವನ್ನು ಸಾಕಿ ಚಂದ್ರಿಕೆಗೆ ಬಿಡುವಾಗ ಯಾವುದೋ ಒಂದು ತರಹ ರೋಗ ಬಂದು ಎಲ್ಲಾ ಹುಳುಗಳನ್ನು ತಿಪ್ಪೆಗೆ ಸುರಿದಿದ್ದಾರೆ. ಸಾವಿರಾರು ರೂಪಾಯಿ ಖರ್ಚು ಮಾಡಿ, ಮನೆ - ಮಂದಿಯೆಲ್ಲಾ ಶ್ರಮವಹಿಸಿ ಸಾಕಿದಂತಹ ಹುಳುಗಳನ್ನು ತಿಪ್ಪೆಗೆ ಸುರಿದು ಬಂದಿದ್ದಾರೆ. ಒಬ್ಬ ಮಗನನ್ನು ಶವ ಸಂಸ್ಕಾರ ಮಾಡಿ ಬಂದರೆ ಯಾವ ರೀತಿ ದುಃಖವಾಗುತ್ತದೋ ಆ ರೀತಿಯ ದುಃಖ ಹುಳ ಸುರಿದಾಗ ಆಗುತ್ತದೆ. ಇಂತಹ ಒಂದು ಪರಿಸ್ಥಿತಿ ಆನೇಕಲ್ ತಾಲ್ಲೂಕಿನಲ್ಲಿ ಒಂದು ಊರನ್ನು ಬಿಟ್ಟರೆ ಎಲ್ಲಾ ಊರುಗಳಲ್ಲೂ ಇತ್ತು. ಕಣ್ಣಲ್ಲಿ ಕಣ್ಣಿಟ್ಟು ಹುಳು ಸಾಕಿದರೆ ಕೊನೆಯ ಗಳಿಗೆಯಲ್ಲಿ ಹುಳುಗಳು ಹೊರಟು ಹೋಗುತ್ತವೆ. ಇದು ಇಲಾಖೆಯವರ ವೈಫಲ್ಯವೆಂದು ಹೇಳುವುದಕ್ಕೆ ನಾನು ಇಷ್ಟಪಡುವುದಿಲ್ಲ. ಮೈಸೂರಿನಲ್ಲಿ ಸಂಶೋಧನಾ ಕೇಂದ್ರವಿದೆ. ಅದು ಏತಕ್ಕೆ ಇದೆಯೋ ಗೊತ್ತಿಲ್ಲ. ಅಲ್ಲಿ ಉತ್ತರ ಭಾರತದ ಒಬ್ಬರು ಅಧಿಕಾರಿಗಳಿದ್ದಾರೆ. ಅವರಿಗೆ ಹಿಪ್ಪುನೇರಳೆ ಸೊಪ್ಪು, ಹುಳ ಗೊತ್ತಿದೆಯೋ, ಇಲ್ಲವೋ ಗೊತ್ತಿಲ್ಲ. ನಾನು ಅವರ ಬಗೆಗೆ ಏನೂ ಹೇಳುವುದಕ್ಕೆ ಹೋಗುವುದಿಲ್ಲ. ಕರ್ನಾಟಕದಲ್ಲಿರುವ ಕೇಂದ್ರ ಸರ್ಕಾರದ ಸಂಶೋಧನಾಲಯ ರೈತರಿಗೆ ಒಳ್ಳೆಯ ಗುಣಮಟ್ಟದ ರೋಗರಹಿತವಾದ ಮೊಟ್ಟೆಗಳನ್ನು ಒದಗಿಸುವುದರಲ್ಲಿ ರೈತರಿಗೆ ಸಹಾಯ ಮಾಡುವುದರಲ್ಲಿ ವಿಫಲವಾಗಿದೆ. ಇಷ್ಟು ಮಾತ್ರ ಸಭೆಯ ಮುಂದೆ

ಹೇಳಲಿಕ್ಕೆ ಇಷ್ಟಪಡುತ್ತೇನೆ. ಸಂಶೋಧನಾ ಕೇಂದ್ರದಲ್ಲಿ ರೇಷ್ಮೆ ಉದ್ಯಮಕ್ಕೆ ಸಂಬಂಧಪಟ್ಟ ಹಾಗೆ ಒಂದು ಸಮಿತಿ ಇದೆ. ಬೆಳೆಗಾರರ ತೋಟಗಳಲ್ಲಿ ಮತ್ತು ತಟ್ಟೆಗಳಲ್ಲಿ ಬರತಕ್ಕ ರೋಗಗಳಿಗೆ ಸಂಶೋಧನೆ ಮಾಡತಕ್ಕ ಕೆಲಸವನ್ನು ಸಂಶೋಧನಾ ಕೇಂದ್ರದಲ್ಲಿ ತೆಗೆದುಕೊಂಡ ಹಾಗೆ ಕಾಣುವುದಿಲ್ಲ. ಸಂಶೋಧನೆಯಲ್ಲಿ ಬರುವ ಸಮಸ್ಯೆಗಳನ್ನು ರೈತರ ತೋಟಗಳಿಗೆ ಅಂಟಿಸುವುದು ಬೇಡ. ಇದರ ಕಡೆಗೆ ಸರ್ಕಾರ ಗಮನ ಕೊಡಬೇಕು. ಸಂಶೋಧನಾ ಕೇಂದ್ರದಲ್ಲಿ ಲ್ಯಾಬೋರೇಟರಿ ಇದೆ. ಅದಕ್ಕೆ ಅಲ್ಲಿ ಪರಿಹಾರ ಕಂಡುಹಿಡಿಯಬೇಕು. ಅಲ್ಲಿ ಬರತಕ್ಕ ಸಮಸ್ಯೆಗಳನ್ನು ರೈತರ ಮೇಲೆ ಎಕ್ಸ್‌ಪೆರಿಮೆಂಟ್ ಮಾಡಲಿಕ್ಕೆ ಹೋಗುವುದು ಬೇಡ. ಈ ವಿಷಯದಲ್ಲಿ, ಸರ್ಕಾರ ಗಮನ ಹರಿಸಬೇಕೆಂದು ಮತ್ತೊಮ್ಮೆ ಹೇಳಲಿಕ್ಕೆ ಇಚ್ಛೆಪಡುತ್ತೇನೆ. ನಮ್ಮ ದೇಶದ ದುರದೃಷ್ಟವೋ ಏನೋ ಯಾವುದೇ ಒಂದು ಯೋಜನೆಯನ್ನು ಕುರಿತು ಸಂಶೋಧನೆ ಮಾಡುವಾಗ ಮಾನ್ಯ ಗಂಗಾಧರ್‌ರವರು ಹೇಳಿದ ಹಾಗೆ ಕ್ಯಾಪಿಟಲಿಸ್ಟ್ ಜನರು ಏನಿದ್ದಾರೆ ಅವರನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾಡುವುದು ಬೇಡ. ರೇಷ್ಮೆ ಇಲಾಖೆಯಲ್ಲಿ ಯಾವುದೇ ಯೋಜನೆಯನ್ನು ತಯಾರು ಮಾಡುವಾಗ, ಯಾವುದೇ ತಳಿಯನ್ನು ಕಂಡುಹಿಡಿಯುವಾಗ, ಅದರ ಬಗೆಗೆ ಸಂಶೋಧನೆ ಮಾಡುವಾಗ ಗುಡಿಸಲುಗಳಲ್ಲಿ ರೇಷ್ಮೆಯನ್ನು ಉತ್ಪಾದನೆ ಮಾಡುವವರನ್ನು ಗಮನದಲ್ಲಿಟ್ಟುಕೊಳ್ಳಬೇಕು.

ಮಂಡ್ಯದಲ್ಲಿರುವ ರೈತರು, ಕೋಲಾರದಲ್ಲಿರುವ ದೊಡ್ಡ ರೈತರನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾಡಿದರೆ ಆಗುವುದಿಲ್ಲ. ದೊಡ್ಡ ರೈತರು ಹಿಪ್ಪುನೇರಳೆ ಬೆಳೆದಾಗ ಬೆಲೆ ಕಡಿಮೆಯಾದರೆ ಅದನ್ನು ಕಿತ್ತುಹಾಕಿ ಆಲೂಗಡ್ಡೆ, ದ್ರಾಕ್ಷಿ ಹಾಕುತ್ತಾರೆ. ಯಾರು ೧೦-೧೫ಗುಂಟೆ ಜಮೀನಿನಲ್ಲಿ ರೇಷ್ಮೆ ಬೆಳೆಯನ್ನು ಬೆಳೆದು ಜೀವನ ಮಾಡತಕ್ಕಂತಹ ಲಕ್ಷಾಂತರ ರೈತರು ಇದ್ದಾರೆ, ಅವರ ಹಿತದೃಷ್ಟಿಯಿಂದ ಸಂಶೋಧನೆಗಳನ್ನು ಮಾಡಬೇಕೆಂದು ತಮ್ಮ ಮೂಲಕ ಮಾನ್ಯ ಮಂತ್ರಿಗಳಲ್ಲಿ ಕೇಳಿಕೊಳ್ಳುವುದಕ್ಕೆ ಇಷ್ಟಪಡುತ್ತೇನೆ. ಈ ದಿಶೆಯಲ್ಲಿ ರೇಷ್ಮೆ ಮೊಟ್ಟೆಯನ್ನು ಒದಗಿಸುವಲ್ಲಿ ಕೂಡ ಒಂದು ಸಮಸ್ಯೆಇದೆ. ನನಗೆ ತಿಳಿದಮಟ್ಟಿಗೆ ಕರ್ನಾಟಕ ಸಿರಿಕಲ್ಚರ್ ಪ್ರಾಜೆಕ್ಟ್ ಕೆಳಗಡೆ ಗ್ರೈನೇಜ್ ಅನ್ನು ೧೬- ೧೭ ಕೋಟಿ ರೂಪಾಯಿ ಖರ್ಚುಮಾಡಿ ಮಾಡಿದರೂ ಸಹ ಕರ್ನಾಟಕದಲ್ಲಿರುವ ಎಲ್ಲರಿಗೂ ಮೊಟ್ಟೆ ಪೂರೈಸುವುದಕ್ಕೆ ಸಾಧ್ಯವಿಲ್ಲ. ಮೊಟ್ಟೆ ಪೂರೈಸತಕ್ಕದ್ದು ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿಲ್ಲ. ನಮ್ಮ ನೆರೆ ರಾಜ್ಯಗಳಾದ ಆಂಧ್ರ, ಮದ್ರಾಸ್ ಮತ್ತು ಬೇರೆ ಹೊರ ರಾಜ್ಯಗಳಿಗೂ ಬೇಕಾಗುತ್ತದೆ. ಆ ದೃಷ್ಟಿಯನ್ನಿಟ್ಟುಕೊಂಡು ಮೊಟ್ಟೆಗಳನ್ನು ತಯಾರು ಮಾಡುವ ಒಂದು ಸ್ವತಂತ್ರವಾದ ಕಾರ್ಪೊರೇಷನ್ ಮಾಡಬೇಕೆಂದು ಹಿಂದಿನಿಂದಲೂ ಬೇಡಿಕೆ ಇದೆ. ಇದನ್ನು ಆದಷ್ಟು ಬೇಗ ನಮ್ಮ ಮಂತ್ರಿಗಳು ವೈಯುಕ್ತಿಕವಾಗಿ ಶ್ರಮ ತೆಗೆದುಕೊಂಡು ಬೇಗ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ಮೊನ್ನೆ ಇದರ ಬಗ್ಗೆ ನಾನು ಒಂದು ಕಾಗದ ಬರೆದಿದ್ದೇನೆ. ಈ ಸಂದರ್ಭದಲ್ಲಿ ಒಂದು ಎಚ್ಚರಿಕೆ ಕೊಡಲಿಕ್ಕೆ ಇಷ್ಟಪಡುತ್ತೇನೆ. ಕಾರ್ಪೊರೇಷನ್ ಅನ್ನು ಕರ್ನಾಟಕ ರೇಷ್ಮೆ ಕೈಗಾರಿಕೆ ಅಭಿವೃದ್ಧಿ ನಿಗಮದ ಕೆಳಗಡೆ ಮಾಡುತ್ತಾರೆಂದು ತಿಳಿದುಕೊಂಡಿದ್ದೇನೆ. ಈ ರೀತಿ ಮಾಡಿದರೆ ಅದು ಅಪರಾಧವಾಗುತ್ತದೆ. ಉದ್ಯಮದಾರರಿಗೆ

ಮತ್ತು ಬೆಳೆಗಾರರಿಗೆ ಮಾಡುವಂತಹ ಅಪರಾಧ ಬೇರೊಂದಿಲ್ಲ. ಕರ್ನಾಟಕ ರೇಷ್ಮೆ ಕೈಗಾರಿಕೆ ಅಭಿವೃದ್ಧಿ ನಿಗಮಕ್ಕೆ ಚಿಕ್ಕ ಚಿಕ್ಕ ಮಿಲ್‌ಗಳನ್ನು ಕೊಟ್ಟಿದ್ದೀರಿ. ಅವರು ಅದನ್ನೇ ಮಾಡಿಕೊಂಡು ಹೋಗಲಿ. ಬೆಳೆಗಾರರ ಹಿತದೃಷ್ಟಿಯಿಂದ ಬಿತ್ತನೆ ಕೇಂದ್ರವನ್ನು ಮಾಡುವಾಗ ಸ್ವತಂತ್ರವಾದ ಕಾರ್ಪೋರೇಷನ್ ಮಾಡಿ. ಪ್ರತ್ಯೇಕ ಕಾರ್ಪೋರೇಷನ್ ಮಾಡಿ ನುರಿತ ಹಿರಿಯ ಅಧಿಕಾರಿಯನ್ನು ಮುಖ್ಯಸ್ಥರನ್ನಾಗಿ ಮಾಡಬೇಕೆಂದು ನಾನು ಸರ್ಕಾರವನ್ನು ಕೇಳಿಕೊಳ್ಳುತೇನೆ. ಉತ್ತಮ ಮೊಟ್ಟೆಗಳನ್ನು ಕೊಡುವ ದಿಶೆಯಲ್ಲಿ ಮತ್ತೊಂದು ಅಭಿಪ್ರಾಯವನ್ನು ಕೊಡಲಿಕ್ಕೆ ಇಚ್ಛೆಪಡುತ್ತೇನೆ. ರೇಷ್ಮೆ ಇಲಾಖೆ ಮತ್ತು ತೋಟಗಾರಿಕೆ ಇಲಾಖೆ ತಾಂತ್ರಿಕ ಇಲಾಖೆಗಳೆಂದು ತಾವೇ ಒಪ್ಪಿಕೊಂಡಿದ್ದೀರಿ. ಅಂತಹ ಇಲಾಖೆಗಳಿಗೆ ಆಡಳಿತ ನೋಡಿಕೊಳ್ಳಲು ಐ. ಎ. ಎಸ್. ಅಧಿಕಾರಿಗಳನ್ನು ಹಾಕುತ್ತೀರಿ. ಅವರು ಆಡಳಿತ ನೋಡಿಕೊಳ್ಳಲಿ. ಆದರೆ ತಾಂತ್ರಿಕತೆಗೆ ಸಂಬಂಧಪಟ್ಟ ಹಾಗೆ ರೇಷ್ಮೆ ಉದ್ಯಮಕ್ಕೆ ಸಂಬಂಧಪಟ್ಟ ಹಾಗೆ, ಬೆಳೆಗಾರರ ಸಮಸ್ಯೆಗಳಿಗೆ ಸಂಬಂಧಪಟ್ಟ ಹಾಗೆ, ಬೆಳೆಗಾರರ ಕಷ್ಟ- ಸುಖಗಳನ್ನು ನೋಡುವಂತಹ ವ್ಯವಸ್ಥೆ ಇದೆಯೆ? ಫಾರಂಗಳು, ಗ್ರೈನೇಜ್‌ಗಳು ಇವುಗಳ ಮೆಂಟೇನೆನ್ಸ್‌ಗೆ ಸಂಬಂಧಪಟ್ಟ ಹಾಗೆ ಇಲಾಖೆಯಲ್ಲಿರುವ ಹಿರಿಯ ಅಧಿಕಾರಿಗಳನ್ನು ಅಡಿಶನಲ್ ಡೈರೆಕ್ಟರ್ ಎಂದು ಮಾಡಿ, ಹುಳುಗಳನ್ನು ಯಾವ ರೀತಿ ಸಾಕಬೇಕು, ಬೆಳೆಯನ್ನು ಯಾವ ರೀತಿ ಬೆಳೆಯಬೇಕು. ಇದರ ಬಗೆಗೆ ಅನುಭವವಿರುವಂತಹ ಸಂಬಂಧಪಟ್ಟ ಅಧಿಕಾರಿಗಳನ್ನು ಇಲಾಖೆಯಲ್ಲಿ ನೇಮಿಸಿಕೊಂಡು ಅವರಿಗೆ ಅಧಿಕಾರ ವಹಿಸಿಕೊಡುವುದು ಒಳ್ಳೆಯದೆಂದು ನನ್ನ ಅಭಿಪ್ರಾಯ.

ಇನ್ನು ಮುಂದೆ ಉತ್ತಮವಾದ ಚಾಕಿ ಕೊಡಿ, ಉತ್ತಮವಾದ ಮೊಟ್ಟೆಗಳನ್ನು ಕೊಡಿ. ಈ ವಿಷಯದಲ್ಲಿ ಮತ್ತೊಂದು ಆಸೆ ಏನೆಂದರೆ ಜಪಾನ್ ದೇಶಕ್ಕೆ ಅಧಿಕಾರಿಗಳನ್ನು ತರಬೇತಿಗಾಗಿ ಕಳುಹಿಸಿಕೊಡುತ್ತೀರಿ. ತರಬೇತಿ ಪಡೆದುಕೊಂಡು ಬಂದಂತಹ ಅಧಿಕಾರಿಗಳನ್ನು ಮಾನ್ಯ ವಿರೋಧ ಪಕ್ಷದ ನಾಯಕರಾದ ವೀರಪ್ಪ ಮೊಯಿಲಿಯವರು ಹೇಳಿದ ಹಾಗೆ ಬೇರೆ ಕಡೆಗೆ ಹಾಕುತ್ತೀರಿ. ರೇಷ್ಮೆ ಇಲಾಖೆಯ ಬಗ್ಗೆ ತರಬೇತಿ ಪಡೆದುಕೊಂಡು ಬಂದಂತಹ ಅಧಿಕಾರಿಯನ್ನು ಭದ್ರಾವತಿಯ ಕಬ್ಬಿಣ ಕಾರ್ಖಾನೆಗೆ ಹಾಕುತ್ತೀರಿ. ಇದು ನಮ್ಮ ದೇಶದ ದುರದೃಷ್ಟವೋ ಅಥವಾ ಆಡ್ಮಿನಿಸ್ಟ್ರೇಶನ್ ವೈಫಲ್ಯವೋ ಗೊತ್ತಿಲ್ಲ. ಏನಾದರೂ ಆಗಲಿ, ರೇಷ್ಮೆ ಉದ್ಯಮದ ಬಗ್ಗೆ ಹೊರ ದೇಶಗಳಿಗೆ ತರಬೇತಿಗಾಗಿ ಅಧಿಕಾರಿಗಳನ್ನು ಕಳುಹಿಸುವುದರ ಜೊತೆಗೆ ಪ್ರಾಮುಖ್ಯವಾಗಿ ವಿದ್ಯಾವಂತರು, ಪ್ರಾಜ್ಞರು ಉತ್ತಮ ಬೆಳೆಗಾರರು ಇವರನ್ನು ಕಳುಹಿಸಿಕೊಟ್ಟರೆ, ಅದರಿಂದ ಸ್ವತಂತ್ರವಾದ ಲಾಭ ಸಿಗುತ್ತದೆಂದು ನಾನು ಅಭಿಪ್ರಾಯಪಡುತ್ತೇನೆ. ಎಲ್ಲಕಿಂತ ಮುಖ್ಯವಾಗಿ ರೇಷ್ಮೆ ಮೊಟ್ಟೆಯನ್ನು ತಯಾರು ಮಾಡುವ ಹಿನ್ನೆಲೆಯಲ್ಲಿ ಹುಳುವನ್ನು ಸಾಕುವಾಗ, ಬಿತ್ತನೆ ಬೀಜ ತಯಾರು ಮಾಡುವಾಗ ಹೆಚ್ಚು ಗಮನ ಕೊಡುವುದು ಅವಶ್ಯಕ. ನಮ್ಮಲ್ಲಿ ಎರಡು ಪ್ರಮುಖವಾದ ಬಿತ್ತನೆ ಕೇಂದ್ರಗಳಿವೆ. ಒಂದು ಮೈಸೂರು ಬಿತ್ತನೆ ಕೇಂದ್ರ. ಇನ್ನೊಂದು ಬೈವೋಲ್ಟಿನ್ ಕೇಂದ್ರ. ಮೈಸೂರು ಬಿತ್ತನೆ ಕೇಂದ್ರದಲ್ಲಿ ನಾನು ಸ್ವತಃ ಬೆಳೆಗಾರ, ನನ್ನ ಮತದಾರ ಕ್ಷೇತ್ರದಲ್ಲಿ ೨೧ ಸಾವಿರ ಕುಟುಂಬಗಳು ರೇಷ್ಮೆಯಿಂದ ಜೀವನ ಮಾಡುವುದರಿಂದ ಆ ಬಗ್ಗೆ ನನಗೆ ಪ್ರಬಲವಾದ ಆಸಕ್ತಿ ಇದೆ,

ಸ್ವಾರ್ಥವೂ ಇದೆ. ಮೈಸೂರು ಬಿತ್ತನೆ ಕೇಂದ್ರ ಪದ್ಧತಿ ಬಹುಶಃ ಟಿಪ್ಪುಸುಲ್ತಾನ್ ಕಾಲದಲ್ಲಿಯೇ ಶುರುವಾಗಿರಬಹುದು ಎಂದು ನನ್ನ ಅಭಿಪ್ರಾಯ. ದುರದೃಷ್ಟವಶಾತ್ ಮೈಸೂರು ಬಿತ್ತನೆಯನ್ನು ಅಭಿವೃದ್ಧಿ ಪಡಿಸಲಿಕ್ಕೆ ಆಗಿಲ್ಲ. ಅದನ್ನು ನಿರ್ಲಕ್ಷಿಸಲಾಗಿದೆ, ಅನ್ಯಾಯವಾಗಿದೆ, ೮೦ ಕೋಟಿ ರೂಪಾಯಿಗಳ ವಿಶ್ವಬ್ಯಾಂಕಿನ ಪ್ರಾಜೆಕ್ಟ್ ಅನ್ನು ತಯಾರು ಮಾಡುವಾಗ ಅಧಿಕಾರಿಗಳು ಮತ್ತು ಸರ್ಕಾರ ಬಹಳ ಅನ್ಯಾಯ ಮಾಡಿದ್ದಾರೆ ಅಂದರೆ ಉತ್ಪ್ರೇಕ್ಷೆಯಾಗಲಾರದು. ಬೇಸಿಕ್ ಸೀಡ್ But they have forgotten the basic problem of the basic seed. That is my difficulty. ಮಾನ್ಯ ಉಪಾಧ್ಯಕ್ಷರೆ, ೮೦ ಕೋಟಿ ರೂಪಾಯಿಗಳ ಯೋಜನೆಯಲ್ಲಿ ೮೦ ರೂಪಾಯಿ ಕೂಡ ಬೇಸಿಕ್ ಸೀಡ್ ಏರಿಯಾಕ್ಕೆ ಕೊಡಲಿಲ್ಲ. ಇದು ಅನ್ಯಾಯ. ಇದಕ್ಕಾಗಿ ಒಂದು ನಯಾಪೈಸೆಯನ್ನೂ ವಿಶ್ವಬ್ಯಾಂಕ್ ಯೋಜನೆಯಲ್ಲಿ ಕೊಡಲಿಲ್ಲ. ಎರಡು ವರ್ಷಗಳ ಹಿಂದೆ ಹೋರಾಟ ಮಾಡಿ ಹಣವನ್ನು ಪಡೆದಿದ್ದೇನೆ. ಇದಕ್ಕೆ ಕಾರಣಕರ್ತರು ಯಾರೇ ಆಗಿರಲಿ, ಆಗಿರುವ ಅನ್ಯಾಯವನ್ನು ಸರಿಪಡಿಸಿಕೊಳ್ಳುವುದು ಅವಶ್ಯಕವಿದೆ. ಮೈಸೂರು ಬಿತ್ತನೆ ಬೀಜ ಬೆಳೆಯುವವರ ಪರವಾಗಿ ಮಾನ್ಯ ಗುಂಡೂರಾಯರನ್ನು ನಾನು ಅಭಿನಂದಿಸಲಿಕ್ಕೆ ಇಚ್ಛೆ ಪಡುತ್ತೇನೆ. ಒಳ್ಳೆಯ ಕೆಲಸ ಮಾಡಿದವರು ಯಾರೇ ಆಗಿರಲಿ ಅವರ ಗುಣಕ್ಕೆ ನಾವು ಅಭಿನಂದಿಸಲೇಬೇಕು. ಮೈಸೂರು ಬಿತ್ತನೆ ಬೀಜವನ್ನು ನಾವು ಒಂದು ಕಾನೂನಿನ ಚೌಕಟ್ಟಿನೊಳಗೆ ಬೆಳೆಯಬೇಕು, ಬಿತ್ತನೆ ತಳಿ ಬೆಳೆಯಲಿಕ್ಕೆ ಕಾನೂನಿನ ಮೂಲಕ ಒತ್ತಾಯ ಮಾಡುತ್ತಾರೆ. ಕಾನೂನಿನ ಹಿಡಿತಕ್ಕೆ ಸಿಕ್ಕಿಸಿಕೊಂಡು ಬೆಳೆದಂತಹ ರೇಷ್ಮೆಯನ್ನು ಸರ್ಕಾರ ಕಂಡುಕೊಳ್ಳತಕ್ಕದ್ದು, ಅದು ಸರ್ಕಾರದ ಕರ್ತವ್ಯ. There is a contract between the Government and the rearer, you are insisting the rearer to go in a particular way. If the government fails to purchase their product, they are violating the agrement and they are liable to the damages.

ಒಬ್ಬ ಸಾಮಾನ್ಯ ಬೆಳೆಗಾರನಾಗಿ ನಾನು ಸರ್ಕಾರದ ಗಮನಕ್ಕೆ ಅನೇಕ ವರ್ಷಗಳಿಂದ ಈ ವಿಚಾರಗಳನ್ನು ತಂದರೂ ಸರ್ಕಾರ ಅದನ್ನು ಗಮನಕ್ಕೆ ಹಾಕಿಕೊಳ್ಳಲಿಲ್ಲ. ಬಿತ್ತನೆ ಬೀಜವನ್ನು ಬೆಳೆದು, ಅವರಿಗೆ ಅನ್ಯಾಯವಾಗುವ ಪರಿಸ್ಥಿತಿ ಇದ್ದಾಗ ಅವರಿಗೆ ಸರ್ಕಾರ ನ್ಯಾಯ ದೊರಕಿಸಿಕೊಡುವುದು ನ್ಯಾಯವಾದುದು. ಇದನ್ನು ೩೫ ವರ್ಷಗಳಿಂದ ಮಾಡಲಿಲ್ಲ.

ಈ ದಿಸೆಯಲ್ಲಿ ಒಂದು ವರ್ಷದ ಹಿಂದೆ ಬೆಳೆಗಾರರಿಗೆ ಒಂದು ಕೆ. ಜಿ. ಗೆ ೫ ರೂಪಾಯಿಗಳ ಬೋನಸ್ ಕೊಡುವಂಥ ವ್ಯವಸ್ಥೆಯನ್ನು ಹಿಂದಿನ ಸರ್ಕಾರದವರು ಮಾಡಿದರು. ಆದರೆ ಯಾರು ಉತ್ತಮವಾದಂಥ ಕೆಲಸವನ್ನು ಮಾಡಿರುತ್ತಾರೋ ಅವರನ್ನು ನಾವು ಸ್ವಾಗತಿಸುವುದು ನಮ್ಮ ಪ್ರಜಾಪ್ರಭುತ್ವದ ಮೂಲ ಕರ್ತವ್ಯವೆಂದು ನಾನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಆದ್ದರಿಂದ ನಾನು ಹೇಳುವುದೇನೆಂದರೆ ಉತ್ಪಾದನಾ ವೆಚ್ಚವನ್ನು ಸರ್ಕಾರದವರು ಗಮನದಲ್ಲಿಟ್ಟುಕೊಂಡು ಕನಿಷ್ಠ ಬೆಲೆ ಫಿಕ್ಸ್ ಮಾಡಬೇಕೆಂದು ನಾನು ಹೇಳುತ್ತೇನೆ. ಇನ್ನು ಮೈಸೂರು ಬಿತ್ತನೆಯ ಉತ್ಪಾದನಾ ವೆಚ್ಚವನ್ನು ಗಮನದಲ್ಲಿಟ್ಟುಕೊಂಡು

ಸರ್ಕಾರದವರು ಬೆಳೆಗಾರರಿಗೆ ಬೋನಸ್ ಕೊಡಬೇಕೆಂದು ನಾನು ಹೇಳುತ್ತೇನೆ. ರೇಷ್ಮೆ ಬಿತ್ತನೆ ಬೇಡಿಕೆ ಈ ರಾಜ್ಯದಲ್ಲಿ ಬಹಳ ವ್ಯಾಪಕವಾಗಿ ಬೆಳೆಯುತ್ತಿರುವುದರಿಂದ ಸರ್ಕಾರದವರು ಇದರ ಬಗ್ಗೆ ಹೆಚ್ಚು ಗಮನವನ್ನು ಕೊಟ್ಟು, ಹೆಚ್ಚಿನ ಪ್ರೋತ್ಸಾಹ ಕೊಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಇನ್ನು ಬೈವೋಲ್ಟಿನ್ ವಿಚಾರ, ಇದು ನಮ್ಮ ರಾಜ್ಯದ ಬಿತ್ತನೆ ಅಲ್ಲ. ಇದನ್ನು ಹೆಚ್ಚಾಗಿ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಬೆಳೆಯುತ್ತಾರೆ. ಆದರೆ ಇದನ್ನು ನಮ್ಮ ರಾಜ್ಯದಲ್ಲಿ ತಂದು ಅಭಿವೃದ್ಧಿ ಮಾಡುವುದಕ್ಕೆ ಹೊರಟಿದ್ದಾರೆ. ಈ ಒಂದು ಬೈವೋಲ್ಟಿನ್ ಬಿತ್ತನೆಯನ್ನು ಮಾಡಬೇಕೆಂದು ರೈತರ ಮೇಲೆ ಬಲವಂತವಾಗಿ ಹೇರುತ್ತಾರೆ. ಆದ್ದರಿಂದ ನಾನು ಹೇಳುವುದೇನೆಂದರೆ ಈ ರಾಜ್ಯದಲ್ಲಿ ಆ ಬಿತ್ತನೆ ಸರಿಯಾದ ಪ್ರಮಾಣದಲ್ಲಿ ಬೆಳೆಯುವುದಿಲ್ಲ. ನಮ್ಮ ನಿರೀಕ್ಷೆಯ ಮಟ್ಟದಲ್ಲಿ ಉತ್ಪಾದನೆಯಾಗುವುದಿಲ್ಲ. They have fail to achieve the target in the bivoltine. ಇವತ್ತು ರೈತ ಶ್ರಮಕ್ಕೆ ತಕ್ಕ ಬೆಲೆಯನ್ನು ತಾವು ಕೊಡುತ್ತಿಲ್ಲ. ನಾವು ಇವತ್ತು ಎಷ್ಟು ಪ್ರಮಾಣದಲ್ಲಿ ಬೈವೋಲ್ಟಿನ್ ಬಿತ್ತನೆಯನ್ನು ಉತ್ಪಾದನೆ ಮಾಡಬೇಕೋ ಆ ಪ್ರಮಾಣದಲ್ಲಿ ಉತ್ಪಾದನೆಯನ್ನು ಮಾಡುವುದಕ್ಕೆ ಆಗುತ್ತಿಲ್ಲ. ಕಾರಣವೇನೆಂದರೆ ಇಲ್ಲಿನ ವಾತಾವರಣದಲ್ಲಿ ಆ ಬಿತ್ತನೆ ಸರಿಯಾದ ಪ್ರಮಾಣದಲ್ಲಿ ಆಗುವುದಿಲ್ಲ. ಇವತ್ತು ಬೈವೋಲ್ಟಿನ್ ಬಿತ್ತನೆಗೆ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಒಳ್ಳೆಯ ಬೆಲೆ ಇದೆ. ಇಲ್ಲವೆಂದು ನಾನು ಹೇಳುತ್ತಿಲ್ಲ. ಆದರೆ ಪರರಾಷ್ಟ್ರದಲ್ಲಿ ಒಳ್ಳೆಯ ಉತ್ಪಾದನೆ ಇದೆಯೆಂದು ತಿಳಿದು ನಮ್ಮ ರಾಜ್ಯದಲ್ಲಿ ಆ ಬಿತ್ತನೆ ಮಾಡಬೇಕೆಂದು ಹೊರಟರೆ ಅದರಿಂದ ತಮಗೆ ಯಾವ ಪ್ರಯೋಜನವಾಗುತ್ತಿಲ್ಲ. ತಾವು ಎಷ್ಟೇ ಪ್ರಾಜೆಕ್ಟ್‌ಗಳನ್ನು ಮಾಡಿ ಆ ಬಿತ್ತನೆಯನ್ನು ಮಾಡಿದರೂ ಸರಿಯಾದಂಥ ಪ್ರಮಾಣದಲ್ಲಿ ಉತ್ಪತ್ತಿಯಾಗುವುದಿಲ್ಲ. ಕಾರಣ ಇಲ್ಲಿನ ವಾತಾವರಣಕ್ಕೆ ಅದು ಸರಿ ಹೊಂದುವುದಿಲ್ಲ. ಆದ್ದರಿಂದ ತಾವು ಅನಾವಶ್ಯಕವಾಗಿ ರೈತರ ಮೇಲೆ ಈ ಬೈವೋಲ್ಟಿನ್ ತಳಿಯನ್ನು ಬೆಳೆಯುವಂತೆ ಒತ್ತಾಯ ಮಾಡುವುದನ್ನು ಬಿಡಿ. ಇಲ್ಲಿನ ಗುಣಮಟ್ಟಕ್ಕೆ ಆ ಬೈವೋಲ್ಟಿನ್ ತಳಿ ಸರಿಯಾಗಿ ಆಗುವುದಿಲ್ಲ. ಜಪಾನ್ ದೇಶದಲ್ಲಿ ಈ ಬೆಳೆ ಚೆನ್ನಾಗಿ ಆಗುತ್ತದೆಂದು ಹೇಳಿ ನಮ್ಮ ರಾಜ್ಯದಲ್ಲಿ ಕೂಡ ಅಂತಹ ಫಾರಂಗಳನ್ನು ಮಾಡಿ ಇಲ್ಲಿ ಬೆಳೆಸುವುದಕ್ಕೆ ತಾವು ಪ್ರಯತ್ನಪಟ್ಟರೆ ಅದು ಆಗುವುದಿಲ್ಲ. ಮಾನ್ಯ ಅಧ್ಯಕ್ಷರೇ ನಾನು ಇದರ ಬಗ್ಗೆ ಒಂದು ಉದಾಹರಣೆಯನ್ನು ಹೇಳುವುದಾದರೆ ಜಪಾನ್ ದೇಶದಲ್ಲಿ ಹುಟ್ಟತಕ್ಕಂಥ ಮಕ್ಕಳು ಎಲ್ಲರೂ ಸಾಮಾನ್ಯವಾಗಿ ಬೆಳ್ಳಗೆ ಇರುತ್ತಾರೆ. ಆದರೆ ಇಲ್ಲಿ ನಮ್ಮ ಕರ್ನಾಟಕ ರಾಜ್ಯದಲ್ಲಿ ಹುಟ್ಟತಕ್ಕಂತ ಮಕ್ಕಳು ಕಪ್ಪಾಗಿ ಹುಟ್ಟುತ್ತಾರೆ. ಕಾರಣ ಅಲ್ಲಿನ ವಾತಾವರಣ ಮತ್ತು ದೈಹಿಕ ಗುಣಮಟ್ಟವನ್ನು ಆಧರಿಸಿಕೊಂಡು ಆ ಮಗು ಬೆಳ್ಳಗೆ ಹುಟ್ಟುತ್ತದೆಯೇ ವಿನಃ ಕಪ್ಪಾಗಿ ಹುಟ್ಟುವುದಿಲ್ಲ. ಆದ್ದರಿಂದ ತಾವು ಅನಾವಶ್ಯಕವಾಗಿ ಈ ಬೈವೋಲ್ಟಿನ್ ತಳಿಯನ್ನು ಕರ್ನಾಟಕ ರಾಜ್ಯ ರೈತರ ಮೇಲೆ ತಂದು ಒತ್ತಾಯ ಮಾಡುವುದನ್ನು ನಿಲ್ಲಿಸಿ. ಇಲ್ಲಿ ಆ ತಳಿ ಅಷ್ಟು ಸಮರ್ಪಕವಾಗಿ ಬೆಳೆಯುವುದಿಲ್ಲ. ಇಲ್ಲಿನ ವಾತಾವರಣ ಸರಿಹೊಂದುವುದಿಲ್ಲ. ಆದ್ದರಿಂದ ನಾನು ಮಾನ್ಯ ಮಂತ್ರಿಗಳಲ್ಲಿ ಅರಿಕೆ ಮಾಡಿಕೊಳ್ಳುವುದೇನೆಂದರೆ ರೈತನು ಬೆಳೆದಂಥ ಬೆಳೆಗೆ ಸರಿಯಾದಂಥ

ಮಾರ್ಕೆಟ್ ರೇಟ್ ಕೊಡಿ. ಅವನ ಉತ್ಪಾದನಾ ವೆಚ್ಚವನ್ನು ಗಮನದಲ್ಲಿಟ್ಟುಕೊಂಡು ಅವನಿಗೆ ಸರಿಯಾದಂಥ ಬೆಲೆಯನ್ನು ಕೊಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಇವತ್ತು ರೈತನು ಒಂದು ಕೆ. ಜಿ. ಗೂಡನ್ನು ಉತ್ಪಾದನೆ ಮಾಡಬೇಕಾದರೆ ಸುಮಾರು ೬೦-೭೦ ರೂಪಾಯಿಗಳನ್ನು ಖರ್ಚು ಮಾಡಬೇಕಾಗುತ್ತದೆ. ಇದನ್ನು ತಾವು ಗಮನದಲ್ಲಿಟ್ಟುಕೊಂಡು ಅವನಿಗೆ ಸರಿಯಾದಂಥ ಬೆಲೆಯನ್ನು ಕೊಡಬೇಕಾಗುತ್ತದೆ. ಇದಲ್ಲದೆ ನಮ್ಮ ರಾಜ್ಯಕ್ಕೆ ಬೇರೆ ರಾಷ್ಟ್ರದಿಂದ ರೇಷ್ಮೆಯನ್ನು ಆಮದು ಮಾಡಿಕೊಳ್ಳುವುದನ್ನು ನಿಲ್ಲಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಇವತ್ತು ತಾವು ಪರರಾಷ್ಟ್ರಗಳಿಂದ ರೇಷ್ಮೆಯನ್ನು ಆಮದು ಮಾಡಿಕೊಳ್ಳುತ್ತಿರುವುದರಿಂದ ನಮ್ಮ ರಾಜ್ಯದ ರೇಷ್ಮೆಗೆ ಬೆಲೆ ಇಲ್ಲದಂತಾಗಿದೆ. ಸ್ವಾಮಿ, ನಾವು ಇವತ್ತು ಒಂದು ಅಂಬಾಸಿಡರ್ ಕಾರು ಕೊಂಡುಕೊಳ್ಳಬೇಕಾದರೆ ಸುಮಾರು ೮೦ ಸಾವಿರ ರೂಪಾಯಿಗಳಾಗುತ್ತದೆ. Is the central government prepared to import car? There are several industrail goods the prices of which is rising every day. Is the central Government going to import these articals?

ಈ ರೇಷ್ಮೆಯನ್ನು ತಾವು ಪರ ರಾಷ್ಟ್ರಗಳಿಂದ ಆಮದು ಮಾಡಿಕೊಳ್ಳುತ್ತಿರುವುದರಿಂದ ನಮ್ಮ ರಾಜ್ಯದ ಮಾರುಕಟ್ಟೆಯಲ್ಲಿ ನಾವು ಬೆಳೆದಂಥ ರೇಷ್ಮೆಗೆ ಬೆಲೆ ಇಲ್ಲದಂತಾಗಿದೆ. ನಮ್ಮಲ್ಲಿ ಸುಮಾರು ೩ ರೀತಿಯಲ್ಲಿ ಕೆಲವಾರು ಸ್ಕೀಮ್‌ಗಳನ್ನು ತಂದರು. ಅದರಲ್ಲಿ ಮೊದಲನೆಯದು ಎಕ್ಸ್‌ಪೋರ್ಟ್ ರೀಪ್ಲೆಸ್‌ಮೆಂಟ್ ಸ್ಕೀಮ್ ಎಂದು. ಆದರೆ ಇದೇ ಸಂದರ್ಭದಲ್ಲಿ ನಮ್ಮ ಮಾನ್ಯ ಬಸವಯ್ಯನವರನ್ನು ಜ್ಞಾಪಿಸಿಕೊಳ್ಳದಿದ್ದರೆ ಅದು ನಾನು ಮಾಡಿದ ಕರ್ತವ್ಯ ಲೋಪ ಎಂದು ಈ ಸಂದರ್ಭದಲ್ಲಿ ಹೇಳಬೇಕಾಗುತ್ತದೆ. ನಿಜವಾಗಿಯೂ ಕೂಡ ಅವರು ಒಳ್ಳೆಯ ಕೆಲಸವನ್ನು ಮಾಡಿದ್ದಾರೆ. ಅವರ ಕಾಲದಲ್ಲಿ ಸಿ.ಎಸ್.ಬಿ. (Central Sericultural Board)

ಬೆಂಗಳೂರಿಗೆ ಬರುವುದಕ್ಕೆ ಅವಕಾಶ ಮಾಡಿಕೊಟ್ಟರು. ಅವರು ಇದನ್ನು ತರುವುದಕ್ಕೆ ಭಾರೀ ಪ್ರಯತ್ನವನ್ನು ಮಾಡಿದ್ದಾರೆ. ಅವರು ಅದಕ್ಕೆ ಸಂಬಂಧಪಟ್ಟಂತಹ ಫೈಲ್ ಅನ್ನು ತರಿಸಿಕೊಂಡು ಕೇಂದ್ರ ಸರ್ಕಾರವನ್ನು ಕೂಡ ಲೆಕ್ಕಿಸದೆ ಆರ್ಡರ್ ಮಾಡಿ ಈ ಒಂದು ಸಿ.ಎಸ್.ಬಿ.ಯನ್ನು ಇಲ್ಲಿ ತಂದರು. ಅವತ್ತು ಅವರು ಮಾಡಿದಂಥ ಒಂದು ಒಳ್ಳೆಯ ಕೆಲಸವನ್ನು ನಾವು ಯಾರೂ ಮರೆಯುವಂತಿಲ್ಲ.

ಈ ಯೋಜನೆ ಅನ್ವಯ ಹಿಂದೆ ಇದ್ದಂಥ ಪರಿಸ್ಥಿತಿ ಏನೆಂದರೆ ಯಾರು ಬಟ್ಟೆಗಳನ್ನು ತಯಾರು ಮಾಡಿ ಈ ದೇಶದಿಂದ ಹೊರಕ್ಕೆ ಕಳಿಸುವಂಥವರು ಇದ್ದಾರೋ ಅವರಿಗೆ ಅವರು ಕಳುಹಿಸುವ ಬೆಲೆಯ ೧೦ ಭಾಗದಷ್ಟು ರೇಷ್ಮೆಯನ್ನು ಆಮದು ಮಾಡಿಕೊಳ್ಳುವ ನೀತಿಯಿತ್ತು. ಅದನ್ನು ಕಳೆದ ವರ್ಷ ೧೦ ರಿಂದ ೨೦ ಪರ್ಸೆಂಟ್ ಮಾಡಿದ್ದಾರೆ. ಇದರ ಪ್ರತಿಫಲವೇನೂಂತ ಅಂಕಿ-ಅಂಶಗಳನ್ನು ಕೊಡುವುದಕ್ಕೆ ಇಷ್ಟಪಡುತ್ತೇನೆ. ೧೯೮೨-೮೩ರಲ್ಲಿ ಸುಮಾರು ೬೫ ಕೋಟಿ ರೂಪಾಯಿಯಷ್ಟು ರೇಷ್ಮೆ ಎಕ್ಸ್‌ಪೋರ್ಟ್ ಆಯಿತು. ಆದರೆ ಸುಮಾರು ೧೨ ಕೋಟಿ

| | | |
|---|---|---|
| (1978 To 1980) | 29.10 | 13.70 |
| Sixth Five Year Plan (1980-81 To 1984-85) | 167.37 | 126.38 |
| Seventh Five Year Plan (1985-86 To 1989-90) | 310.78 | 294.05 |
| Transitional Period (1990-91 To 1991-92) | 230. 86 | 158.44 |
| Eighth Five Year Plan (1992-93 To 1996-97) | 901.05 | 773.62 |

## B. PHYSICAL PROGRESS

Table below indicates the physical progress achieved during the plan periods:

**Physical Progress at the End of Each Plan**

| Year | Area Under Mulberry (HA) | Production of Raw Silk (Tons) | | | Production of Silkwaste (Tons) | Foreign Exchange Earnings (Crore Rs.) |
|---|---|---|---|---|---|---|
| | | Mulberry | Non Mulberry | Total | | |
| 1955-56 | 68658 | 1098 | 339 | 1437 | 747 | 0.82 |
| 1960-61 | 82954 | 1185 | 328 | 1513 | 786 | 1.37 |
| 1965-66 | 86191 | 1545 | 520 | 2065 | 986 | 2.82 |
| 1968-69 | 87071 | 1781 | 539 | 2320 | 952 | 6.00 |
| 1973-74 | 110160 | 2421 | 473 | 2894 | 1186 | 14.46 |
| 1977-78 | 131094 | 3186 | 525 | 3711 | 1429 | 33.05 |
| 1979-80 | 155161 | 4193 | 612 | 4805 | 1554 | 48.83 |
| 1984-85 | 214838 | 6895 | 778 | 7673 | 2660 | 129.05 |
| 1989-90 | 294241 | 10905 | 1111 | 12016 | 4135 | 400.61 |
| 1990-91 | 313109 | 11487 | 1178 | 12665 | 4170 | 440.53 |
| 1996-97 | 280651 | 12954 | 1172 | 14126 | 4247 | 880.45 |
| 1997-98 | 282244 | 14048 | 1188 | 15236 | 4452 | 926.29 |

## ESTABLISHED FACTS AND ENLIGHTENED TRUTH SUDDEN CHANGE IN IMPORT POLICY

A flourishing rural cottage indigenous sericulture industry is now facing a threat by an indiscriminate import policy of raw silk announced by the Commerce Minister, on 8th oct. 1998 and subsequently revised on 30th oct. 1998, without consulting even the Central Silk Board , Ministry of Textiles, Govt. of India, which has a statutory obligation of advising Central Government, on all matters relating to sericulture industry inculding policies governing import and export of sericultural commodities. The argument put

forth for this import policy is that regularsing the smuggling of raw silk from borders of our country and to help poor weavers to get sufficient raw materials. This argument is ridiculous as no weaver suffers for want of raw silk and only master weavers, silk exporters and traders will get the advantage of this imported raw silk by disposing it in black-market. Hence it is only these vested interests who always play mischief in the name of poor weavers and distort the local sericulture avocation.

### China's position in Silk Trade

China is emerged as the single largest raw silk producer in world raw silk production by producing around 60,000 to 70,000 M.. tons of raw silk per annum. This country is unable to absorb all its production (at present their home consumption is only 15% of total production) and always looking for opportunities to dump their excess production to other countries. The present notification of Govt. of India is a boon to China to have an axe to grind! This is in other words opening of floodgates of Chinese silk to enter India. At present, China is in an advantageous position to keep their cost of production of raw silk at a low ebb (at present cocoon rates in China rules around Rs. 50 to Rs. 70 per kg.) thereby the cost of production of Chinese raw silk works out to Rs, 600 to Rs. 800 per kg. and the landed cost inculding import duty of India works out to Rs. 1,000 to Rs. 1,100 per kg., where as the cost of production alone in India is around Rs. 1,250 to Rs. 1,350 per kg and selling rate is around Rs. 1,400 to Rs. 1,500 per kg. This unequal trade and low cost of production of Chinese owing to obvious reasons will have precarious impact on our Agro based cottage industry throwing millions of rural population to lurch. Of course, China will not hesitate to quote a political price for its exports of raw silk to India so that bulk quantities would enter Indian market totally collapsing the Indian sericulture Industry in due course. When such a situation arises China will take the opportunity to encash all its losses in this trade by emerging as the single largest producer of raw silk having a monopoly trade to its credit and dictate terms to their advantage.

### Sericulture industry of China and India at a glance

Though no comparison could be made between Chinese sericulture industry which has longest history over 5,000 years and Indian sericulture industry which dates back to second B.C., and made roots just 200 years ago.

## TABLE BELOW INDICATES THE SERICULTURE INDUSTRY OF CHINA AND INDIA AT A GLANCE

### Sericulture industry of China and India at a glance.

(Data refers 1995-96)

| Particulars | China | India |
|---|---|---|
| Sericultural provinces/ states | 24 (mainly 5 areas) | 8 (mainly 2 areas) |
| Sericultural countries/ districts | 1300 | ...... 30 |
| Sericultural families | 200 lakhs. | 12 lakhs. |
| Area under mulberry | 12.5 lakhs Hectares | 2.89 lakh Hectares |
| Mulberry cultivation | All irrigated | irrigated 60% Rainfed 40% |
| Average leaf yield(kg/ha/year) | 40,000 | 35,000 15,000 |
| No of crops per year | South China 6-8<br>Taibu lake belt : 4 :<br>Sichuan province 4-5 | Tropical belt 6-7<br>Temperate belt : 3-4 |
| Seed production (In no's) | 13,500 lakhs layings) | 25,000 lakhs layings |
| Silkworm seed producers | All Govt. centres | Private 70% Govt. 30% |
| silk worm races | All Bivoltines | Multi & Bivoltine |
| Silk worm rearing | Batch rearing (seasonal) | Continuous in Tropical area<br>Seasonal in Temperate area |
| Leaf cocoon ratio(by wt.) | 18-20:1 | 20-25:1 in irrigated area<br>30-35: 1 in rainfed area |
| yield per 100 dfls(Avg) | 50-60 kg | 30-35 in rainfed area<br>45-55 in irrigated area |
| cocoon production | 7,59,850 tonnes | 1,16,362 tonnes |
| cocoon price fixation | Based on quality<br>Rs. 50-70/ kg. | Open auction<br>Rs. 90-120/kg |
| Marketing & reeling | All Govt. Centres | Private 90% Govt. 10% |
| Raw silk production | 66,400 tonnes | 12,884 tonnes |
| Silk production centres | 400(All. Govt.) | 1045 private 70%<br>Govt. 30% |
| No. of silk enterprises | 3,500 | Around 500 |
| No. of reeling ends | 38 lakhs | 0.31 lakhs filature<br>0.34 charakhas |
| Renditta | 6-8 | 8-10 |
| Filament length | 1000-1200mts | 800-1000 mts. |
| silk content (shell%) | 21-23% | 19-21% |
| Raw silk grade | Gradeless > A, 2A,3A | Gradeless A,B and C |
| Fabric production capacity | 3000 lakh sq. metres | 1883 lakh sq. mts. |
| No of weaving machines/looms | 2.1 lakhs | 2.56 lakhs |
| Domestic consumption (%) | About 10-15% | 100% |

## CONCULSION

Silk production in the leading silk producing countries- Japan and South Korea has declined fast due to scarce labour, high cost

of production and diminishing incentives for the sericulturists. This has created a big void in world silk market. India has an added advantage of having enough cultivable land, human resources and climate where mulberry and silk worm could be grown round the year. Rightly both centre and state Govt. have given priority for development of sericulture during last plan periods apart from launching world bank aided programmes especially to support with Infrastructure, Research and Extension programmes.

However, India is committed to be in World Trade Organisation (WTO) among other developing Nations and nobody can restrict import of any commodity including raw silk after 2005; even if somebody wishes by virtue of its commitment to WTO. Hence, the only way left to us is to develop sericulture industry "very strong" during the available 5 years so that India cannot only withstand international competition but also march upright in pushing its own commodity to international market.

**NATION'S APPEAL**

With the above facts, we very earnestly appeal to the Hon'ble Prime Minister of India to kindly withdraw forthwith the recent policy change made for import of raw silk. If at all high grade raw silk is required for manufacture of exportable varities of silk good, facilities and incentives already provided under "Exim policy" is quite enough to bridge the gap between demand and supply position. Any further change in the policy would be of vested interest aganist the welfare and socio economic status of millions of primary producers causing topsidown a well established indigenous rural industry.

Sd/-
**Y.K. RAMAIAH**
President,
Karnataka sericulturist's Association &
Presdient, Joint Action Committe
Aganist import of Raw silk.

**Y.K. RAMAIAH,** M.A. LL.B.
Kunigal
Karnataka

08132-20230
Phone : 080-3388231

1816-72904

Date 23.11.98

ಮಾನ್ಯರೆ,

ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕು, ಹಾಗೂ ತುಮಕೂರು ತಾಲ್ಲೂಕು ಹೆಬ್ಬೂರು ಹೋಬಳಿ ಮತ್ತು ಮಾಗಡಿ ತಾಲ್ಲೂಕು ಸೇರಿದಂತೆ ರಚಿಸಿರುವ ಮೈಸೂರು ಬಿತ್ತನೆ ವಲಯದ ರೇಷ್ಮೆ ಬೆಳೆಗಾರರ ಸಮಸ್ಯೆಗಳ ಬಗ್ಗೆ ತಾ|| ೧೮.೧೧.೯೮ ನೇ ಬುಧವಾರ ಕುಣಿಗಲ್ ಪಟ್ಟಣದ ಕೃಷಿ ಮಾರುಕಟ್ಟೆ ಆವರಣದಲ್ಲಿ ಸೇರಿದ ಸಾವಿರಾರು ಜನ ರೈತರ ಸಭೆಯಲ್ಲಿ ಬೆಳೆಗಾರರ ಕುಂದುಕೊರತೆಗಳನ್ನು ಚರ್ಚಿಸಲಾಯಿತು. ಚರ್ಚೆಯಲ್ಲಿ ಭಾಗವಹಿಸಿದ್ದ ಎಲ್ಲಾ ಬೆಳೆಗಾರರು ಮತ್ತು ಗಣ್ಯರು ಮೂಲ ಬಿತ್ತನೆ ವಲಯದ ಮೂಲ ಸಮಸ್ಯೆಗಳನ್ನು ಸರ್ಕಾರ ನಿರ್ಲಕ್ಷ್ಯ ಮಾಡಿದೆ. ಬೆಳೆ ಹಾಗೂ ಬೆಲೆ ವಿಷಯದಲ್ಲಿ ಸರ್ಕಾರ ರೈತರ ಅನೇಕ ದಿನಗಳ ಬೇಡಿಕೆಯನ್ನು ಈಡೇರಿಸುವಲ್ಲಿ ವಿಫಲವಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅನೇಕ ಗಂಟೆಗಳ ಚರ್ಚೆಯ ನಂತರ ಸರ್ಕಾರವು ಈ ಕೆಳಕಂಡ ಬೇಡಿಕೆಗಳನ್ನು ಈಡೇರಿಸುವಂತೆ, ನಾನೂ ಸೇರಿದಂತೆ ಮಾಜಿ ರೇಷ್ಮೆ ಖಾತೆ ಸಚಿವರಾದ ಡಾ|| ಜಿ. ಪರಮೇಶ್ವರ್, ಮಾಜಿ ಸಚಿವರಾದ ಶ್ರೀ ಹೆಚ್.ಎಮ್. ರೇವಣ್ಣ. ಮಾಜಿ ಸಂಸದರಾದ ಶ್ರೀ ಜಿ. ಎಸ್. ಬಸವರಾಜು ಹಾಗೂ ಶಾಸಕರಾದ ಶ್ರೀ ಎಸ್.ಪಿ. ಮುದ್ದಹನುಮೇಗೌಡರು ಸೇರಿದಂತೆ, ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಸದಸ್ಯರು ಹಾಗೂ ಇತರರು ಭಾಗವಹಿಸಿದ್ದ ಈ ಸಭೆಯಲ್ಲಿ ಸರ್ಕಾರವನ್ನು ಒತ್ತಾಯಿಸಲು ತೀರ್ಮಾನಿಸಲಾಯ್ತು.

೧. ಮೈಸೂರು ಬಿತ್ತನೆ ಗೂಡಿನ ಬೋನಸ್ ದರವನ್ನು ೨೫ ರೂ. ನಿಂದ ಐವತ್ತು ರೂ. ಗಳಿಗೆ ಹೆಚ್ಚಿಸಬೇಕೆಂದೂ,
೨. ಬಿತ್ತನೆ ಗೂಡಿನ ಕನಿಷ್ಠ ಬೆಲೆಯನ್ನು ರೂ ನೂರೈವತ್ತಿರಿಂದ ಇನ್ನೂರೈವತ್ತು ರೂ. ಗಳಿಗೆ ನಿಗಧಿಗೊಳಿಸಬೇಕೆಂದೂ,
೩. ರೈತರ ಬೆಳೆಗಳು ಕೆಡುವುದನ್ನು ತಪ್ಪಿಸಲು ಇಲಾಖೆಯವರು ರೋಗರಹಿತ ಮೊಟ್ಟೆ ಒದಗಿಸಲು ಕ್ರಮ ತೆಗೆದುಕೊಳ್ಳಬೇಕೆಂದೂ,
೪. ಮೈಸೂರು ಬಿತ್ತನೆ ಗೂಡಿಗೆ ಬದಲಾಗಿ ಬೇರೆ ತಳಿ ಗೂಡನ್ನು ಬೆಳೆಯಲು ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆ ಮತ್ತು ಹುಣಸೂರು, ಬೀದರ್ ಜಿಲ್ಲೆಯ ಹುಮನಾಬಾದ್‌ನಲ್ಲಿ ರೇಷ್ಮೆ ಇಲಾಖೆಯವರು ಪರ್ಯಾಯ ಬಿತ್ತನೆ ವಲಯವನ್ನು ಪ್ರಾರಂಭಿಸಲು ಪ್ರಯತ್ನಿಸುತ್ತಿರುವುದನ್ನು ಕೈ ಬಿಡಬೇಕೆಂದು ಒತ್ತಾಯಿಸಲೂ,

೫. ರೈತರಿಗೆ ಒದಗಿಸುವ ಮೊಟ್ಟೆಗಳಿಗೆ ವಿಮಾ ಸೌಲಭ್ಯವನ್ನೂ ಒದಗಿಸುವ ವ್ಯವಸ್ಥೆ ಮಾಡಬೇಕೆಂದೂ,

೬. ರಾಷ್ಟ್ರದ ರೇಷ್ಮೆ ಉತ್ಪಾದನೆಗೆ ಮಾರಕವಾಗಿರುವ ರೇಷ್ಮೆ ಆಮದು ಪದ್ಧತಿಯನ್ನೂ ತಕ್ಷಣ ರದ್ದು ಪಡಿಸಬೇಕೆಂದೂ.

ಈ ಬೇಡಿಕೆಗಳನ್ನೂ ಸರ್ಕಾರವು ಮೂವ್ವತ್ತು ದಿನಗಳೊಳಗಾಗಿ ಈಡೇರಿಸಲು ಕ್ರಮ ತೆಗೆದುಕೊಳ್ಳದಿದ್ದಲ್ಲಿ ಬೆಳೆಗಾರರು ಬಿತ್ತನೆ ಗೂಡನ್ನು ಬೆಳೆಯಲು ನಿರ್ಬಂಧ ವಿಧಿಸುವ ಕಾನೂನನ್ನು ಮುರಿದು ತಮಗೆ ಬೇಕಾದ ತಳಿ ಗೂಡನ್ನೂ ಬೆಳೆಯಲು ಸಿದ್ಧರಾಗಬೇಕೆಂದು ಕರೆ ಕೊಡಲಾಯಿತು.

ಆದ್ದರಿಂದ ದಯಮಾಡಿ ಮೈಸೂರು ಬಿತ್ತನೆ ವಲಯದ ಬೆಳೆಗಾರರ ಈ ಮೇಲ್ಕಂಡ ಬೇಡಿಕೆಗಳನ್ನು ಈಡೇರಿಸಲು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಸಂಬಂಧಪಟ್ಟವರಿಗೆ ಆದೇಶ ನೀಡಬೇಕೆಂದು ಕೋರುತ್ತೇವೆ.

ಗೌರವಗಳೊಂದಿಗೆ,

ತಮ್ಮ ವಿಶ್ವಾಸಿ
ಸಹಿ
**(ವೈ.ಕೆ. ರಾಮಯ್ಯ)**

ಇವರಿಗೆ,
**ಸನ್ಮಾನ್ಯ ಶ್ರೀ ಜೆ.ಹೆಚ್. ಪಟೇಲ್‌ರವರು**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ, ವಿಧಾನಸೌಧ
ಬೆಂಗಳೂರು

**JOINT ACTION COMMITTEE AGAINST IMPORT OF RAW SILK**
No. 129, Govindappa Road, Basavanagudi, Bangalore 560 004

**ಕಚ್ಚಾ ರೇಷ್ಮೆ ಆಮದು ವಿರೋಧಿ ಜಂಟಿ ಕ್ರಿಯಾ ಸಮಿತಿ**

| ಅಧ್ಯಕ್ಷರು | ಉಪಾಧ್ಯಕ್ಷರು | ಕಾರ್ಯದರ್ಶಿ |
|---|---|---|
| ವೈ.ಕೆ. ರಾಮಯ್ಯ | ಬಾಸಿತ್ | ಎಂ. ರಾಮಚಂದ್ರಗೌಡ |

ಎಸ್. ಪಿ. ಟಿ. /VI/1(4)98- ಸಮನ್ವಯ ದಿನಾಂಕ : 30-01-1999

**ಸನ್ಮಾನ್ಯ ರಾಮಕೃಷ್ಣ ಹೆಗೆಡೆಯವರೇ,**

ವಿಷಯ : ಕೇಂದ್ರ ಸರಕಾರದ ಕಚ್ಚಾ ರೇಷ್ಮೆ ಆಮದು
ನೀತಿಯಿಂದಾಗುವ ದುಷ್ಪರಿಣಾಮ ಕುರಿತು

ಭಾರತ ಸರಕಾರದ ವಾಣಿಜ್ಯ ಮಂತ್ರಾಲಯದಿಂದ ಕಳೆದ ಅಕ್ಟೋಬರ್ ಏರಡು ಪ್ರಕಟಿಸಿದ ಕಚ್ಚಾ ರೇಷ್ಮೆ ಮುಕ್ತ ಆಮದು ನೀತಿ ಮತ್ತು ತದನಂತರ ಅಕ್ಟೋಬರ್ ೩೦ ರಂದು ಹೊರಡಿಸಿದ ಕಚ್ಚಾ ರೇಷ್ಮೆ ಆಮದಿನ ಪ್ರಕಟಣೆಯ ತಿದ್ದುಪಡಿಯ ಬಗ್ಗೆ ನಾವು ದಿನಾಂಕ ೨೭.೧೦.೯೮ರ ಹಾಗೂ ೨.೮.೯೮ರಂದು ಸ್ಪಷ್ಟವಾಗಿ ಈ ಆಮದು ನೀತಿಯಿಂದ ದೇಶೀಯ ರೇಷ್ಮೆ ಕಸುಬಿಗೆ ಅದರಲ್ಲೂ ಮುಖ್ಯವಾಗಿ ಕರ್ನಾಟಕ ಗ್ರಾಮಾಂತರ ಗುಡಿ ಕೈಗಾರಿಕೆಯಾದ ರೇಷ್ಮೆ ಕಸುಬಿನ ಮೇಲಾಗುವ ದುಷ್ಪರಿಣಾಮಗಳನ್ನು ಕೂಲಂಕಷವಾಗಿ ವಿವರಿಸಿ ತಮಗೆ ಪತ್ರ ಬರೆದಿದ್ದೇವೆ. ಅಲ್ಲದೆ ಇದೇ ವಿಷಯದ ಬಗ್ಗೆ ನಮ್ಮ ಪ್ರಧಾನಮಂತ್ರಿಗಳು, ಕೇಂದ್ರ ಜವಳಿ ಖಾತೆ ಸಚಿವರು. ಜವಳಿ ಖಾತೆಯ ಜಂಟಿ ಕಾರ್ಯದರ್ಶಿಗಳಿಗೆ ಪತ್ರ ಮೂಲಕ ಈ ದೇಶೀಯ ರೇಷ್ಮೆ ಉದ್ಯಮಕ್ಕೆ ಮಾರಕವಾಗಲಿರುವ ಕಚ್ಚಾ ರೇಷ್ಮೆ ಆಮದು ನೀತಿಯನ್ನು ಕೈ ಬಿಡಬೇಕೆಂದು ಒತ್ತಾಯ ಪೂರ್ವಕ ಮನವಿ ಮಾಡಿದ್ದೇವೆ. ಇದೇ ವಿಷಯಕ್ಕೆ ಸಂಬಂಧಪಟ್ಟಂತೆ ವಿಸ್ತಾರವಾದ ಮನವಿ ಪತ್ರವನ್ನು ಫ್ಯಾಕ್ಸ್FAX ಮೂಲಕ ಮಾನ್ಯ ಪ್ರಧಾನ ಮಂತ್ರಿಗಳಿಗೂ, ಕೇಂದ್ರ ವಾಣಿಜ್ಯ ಕಾರ್ಯಲಯದ ಕಾರ್ಯದರ್ಶಿಗಳಾದ ಶ್ರೀಯುತ ಪ್ರಭುರವರಿಗೂ ಕಳುಹಿಸಿದ್ದೇವೆ. 14360

ಕರ್ನಾಟಕದ ಹಾಗೂ ರಾಷ್ಟ್ರದ ಹೆಮ್ಮೆಯ ಗುಡಿ ಕೈಗಾರಿಕೆಯಾದ ರೇಷ್ಮೆ ಕಸುಬಿಗೆ ಇತ್ತೀಚಿನ ಕೇಂದ್ರ ಸರಕಾರದ ಕಚ್ಚಾ ರೇಷ್ಮೆ ಆಮದಿನಿಂದಾಗುವ ಆಘಾತವನ್ನು ಮನಗೊಂಡು ಕಚ್ಚಾ ರೇಷ್ಮೆ ಆಮದು ವಿರೋಧಿ ಜಂಟಿ ಕ್ರಿಯಾ ಸಮಿತಿಯೊಂದನ್ನು ರಚಿಸಿ ರೇಷ್ಮೆ ಕಸುಬಿಗೆ ಸಂಬಂಧಪಟ್ಟವರೆಲ್ಲರನ್ನು ಅಂದರೆ ರೇಷ್ಮೆ ಕೃಷಿಕರು, ರೇಷ್ಮೆ ನೂಲು ಬಿಚ್ಚುವವರು, ರೇಷ್ಮೆ ಮೊಟ್ಟೆ ತಯಾರಕರು, ರೇಷ್ಮೆ ನೇಕಾರರು ಮತ್ತು ರೇಷ್ಮೆ ಹಿತಚಿಂತಕರನ್ನು ಜಂಟಿ ಕ್ರಿಯಾ ಸಮಿತಿಯ ಪದಾಧಿಕಾರಿಗಳನ್ನಾಗಿ ಆಯ್ಕೆ ಮಾಡಲಾಗಿದೆ. ಈ ಜಂಟಿ ಕ್ರಿಯಾ ಸಮಿತಿಯು ನನ್ನ ಅಧ್ಯಕ್ಷತೆಯಲ್ಲಿ ದಿನಾಂಕ ೨೭-೧೦-೯೮ ರಿಂದ ಅಸ್ತಿತ್ವಕ್ಕೆ ಬಂದಿದ್ದು ಕಚ್ಚಾ ರೇಷ್ಮೆ ಆಮದು ನೀತಿಯನ್ನು ವಿರೋಧಿಸಲು ಪ್ರಜಾಸತ್ತಾತ್ಮಕವಾಗಿ ವ್ಯವಸ್ಥಿತ ಹೋರಾಟಕ್ಕೆ ಕರ್ನಾಟಕ ರಾಜ್ಯಾದಾದ್ಯಂತ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು.

ತತ್ಸಂಬಂಧವಾಗಿ ಮೊದಲನೆಯದಾಗಿ ದಿನಾಂಕ ೧-೧೨-೯೮ ರಂದು ಬೆಂಗಳೂರಿನಲ್ಲಿ ವಿಚಾರ ಸಂಕಿರಣವೊಂದನ್ನು ಏರ್ಪಡಿಸಲಾಯಿತು. ಇದರಲ್ಲಿ ಸುಮಾರು ೩೦೦ ಮಂದಿ ರೇಷ್ಮೆ ಕಸಬಿಗೆ ಸಂಬಂಧಪಟ್ಟವರು ಭಾಗವಹಿಸಿದ್ದರು. ಅವರಲ್ಲಿ ಪ್ರಮುಖರೆಂದರೆ ನಿವೃತ್ತ ನ್ಯಾಯಮೂರ್ತಿ ಮಾನ್ಯ ಎನ್. ಡಿ ವೆಂಕಟೇಶ್, ಕೇಂದ್ರ ರೇಷ್ಮೆ ಮಂಡಳಿಯ ಅಧ್ಯಕ್ಷರಾದ ಶ್ರೀ ಹೆಚ್. ಏಕಾಂತಯ್ಯ, ರಾಜ್ಯ ಸರಕಾರದ ರೇಷ್ಮೆ ಸಚಿವರಾದ ಶ್ರೀ ಎಂ. ವರದೇಗೌಡ, ಶ್ರೀ. ವಿ. ಬಾಲಸುಬ್ರಮಣಿಯನ್, ಕರ್ನಾಟಕ ಸರಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ, ಶ್ರೀ ಸಿ. ನಾರಾಯಣಸ್ವಾಮಿ, ಮಾಜಿ ಸಂಸತ್ ಸದಸ್ಯರು, ಡಾ. ಎಸ್. ಬಿ. ದಂಡಿನ, ನಿರ್ದೇಶಕರು, ಕರ್ನಾಟಕ ರಾಜ್ಯ ಕೃಷಿ ರೇಷ್ಮೆ ಅಭಿವೃದ್ಧಿ ಮತ್ತು ಸಂಶೋಧನಾ ಸಂಸ್ಥೆ, ಶ್ರೀ ಇ. ಸುಭಾಷಚಂದ್ರ, ಕರ್ನಾಟಕ ಸರಕಾರದ ರೇಷ್ಮೆ ಕೃಷಿ ಹೆಚ್ಚುವರಿ ನಿರ್ದೇಶಕರು, ಶ್ರೀ ಎಸ್.ಎ. ಬಾಸಿತ್, ರಾಜ್ಯ ರೇಷ್ಮೆ ನೂಲು ಬಿಚ್ಚುವವರ ಸಂಘದ ಅಧ್ಯಕ್ಷರು, ಶ್ರೀ ಎಂ. ರಾಮಚಂದ್ರೇಗೌಡ, ಅಧ್ಯಕ್ಷರು, ಕರ್ನಾಟಕ ರಾಜ್ಯ ರೇಷ್ಮೆ ಮೊಟ್ಟೆ ಉತ್ಪಾದಕರ ವಿಶ್ವಸ್ಥ ಮಂಡಳಿ. ಈ ವಿಚಾರ ಸಂಕಿರಣದಲ್ಲಿ ಯಾವ ರೂಪದಲ್ಲಿಯೇ ಆಗಲಿ, ಯಾವ ಕಾರಣಕ್ಕೇ ಆಗಲಿ ರೇಷ್ಮೆ ಆಮದಾದರೆ ದೇಶೀಯ ರೇಷ್ಮೆ ಕಸುಬಿಗೆ ಮತ್ತು ಉದ್ಯಮಕ್ಕೆ ಧಕ್ಕೆ ತಪ್ಪಿದಲ್ಲವೆಂದು ಏಕಾಭಿಪ್ರಾಯ ಮೂಡಿಬಂದಿದೆ. ಈಗಾಗಲೇ ಜಿಲ್ಲಾ ಮಟ್ಟದ ಪತ್ರಿಕಾ ಸಂದರ್ಶನ, ಸುದ್ದಿ ಮಾಧ್ಯಮಗಳ ಮುಖಾಂತರ ಪ್ರತಿಭಟನೆ. ಕೋಲಾರ, ಮಂಡ್ಯ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ರೇಷ್ಮೆ ಬೆಳೆಗಾರರು, ಮೊಟ್ಟೆ ತಯಾರಕರು, ನೂಲು ಬಿಚ್ಚುವವರು ಮತ್ತು ರೇಷ್ಮೆ ಚಿಂತಕರ ಪ್ರತಿಭಟನಾ ಸಮಾವೇಶಗಳು- ಹೀಗೆ ಹಲವಾರು ಕಾರ್ಯಕ್ರಮಗಳ ಮುಖೇನ ಕಚ್ಚಾರೇಷ್ಮೆ ಆಮದು ನೀತಿಯನ್ನು ವಿರೋಧಿಸುತ್ತಾ ಬಂದಿದೆ. ಈ ಆಮದು ನೀತಿಯನ್ನು ವಿರೋಧಿಸಿ ಕರ್ನಾಟಕದ ರಾಜ್ಯಮಟ್ಟದ ಬೃಹತ್ ಪ್ರತಿಭಟನಾ ಸಮಾವೇಶವನ್ನು ದಿನಾಂಕ ೧೧.೦೧.೯೯ ರಂದು ಬೆಂಗಳೂರಿನಲ್ಲಿ ಏರ್ಪಡಿಸಲಾಗಿತ್ತು. ರಾಜ್ಯದ ಹಾಗೂ ರಾಷ್ಟ್ರದ ರೇಷ್ಮೆ ಕಸುಬಿಗೆ ಧಕ್ಕೆ ಉಂಟುಮಾಡುವ ಈ ಆಮದು ನೀತಿಯನ್ನು ಪಕ್ಷ ಭೇದವಿಲ್ಲದೇ ಅಂದು ಸರ್ವಾನುಮತದಿಂದ ವಿರೋಧಿಸಲಾಯಿತು. ಈ ಪ್ರತಿಭಟನಾ ಸಭೆಯಲ್ಲಿ ಸುಮಾರು ಇಪ್ಪತ್ತೈದು ಸಹಸ್ರ ರೇಷ್ಮೆ ರೈತರೇ ಭಾಗವಹಿಸಿದ್ದುದು ದಾಖಲೆ. ಈ ಸಮಾವೇಶದಲ್ಲಿ ನಮ್ಮ ಕೈಮೀರಿ ನಡೆದ ಅಹಿತಕರ ಘಟನೆಯಾದ ತಮ್ಮ ಬೆಂಗಳೂರು ನಿವಾಸದ ಮೇಲೆ ಕಲ್ಲೆಸೆದಿರುವುದಕ್ಕಾಗಿ ನಾವು ತುಂಬಾ ವಿಷಾದಿಸಿದ್ದೇವಲ್ಲದೆ ಆ ಬಗ್ಗೆ ತನಿಖೆ ನಡೆಸುವುದನ್ನು ಸ್ವಾಗತಿಸಿದ್ದೇವೆ.

ಪ್ರತಿಭಟನಾ ಸಮಾವೇಶದ ಅನಂತರ ಕೂಡ ಜಂಟಿ ಕ್ರಿಯಾ ಸಮಿತಿ ವತಿಯಿಂದ ತಾ. ೧೨.೦೧.೯೯ರಂದು ಪತ್ರಿಕಾ ಸಂದರ್ಶನವನ್ನೇರ್ಪಡಿಸಿ ಪ್ರತಿಭಟನಾ ಸಮಾವೇಶದ ಅಭಿಪ್ರಾಯಗಳನ್ನು ಸುದ್ದಿ ಮಾಧ್ಯಮದ ಮೂಲಕ ಪ್ರಚುರಪಡಿಸಲಾಗಿದೆ. ಇದಲ್ಲದೆ, ನಾನು ಸ್ವತಃ ತಮ್ಮನ್ನು ದೂರವಾಣಿ ಮುಖೇನ ಸಂಪರ್ಕಿಸಿ ಕಚ್ಚಾ ರೇಷ್ಮೆ ಆಮದುನಿಂದಾಗುವ ಕೆಟ್ಟ ಪರಿಣಾಮ ವಿವರಿಸಿ ದಯವಿಟ್ಟು ಆಮದು ನೀತಿಯನ್ನು ಕೈ ಬಿಡಬೇಕೆಂದು ಆಗ್ರಹಿಸಿದ್ದೇನೆ.

ಆದಾಗ್ಯೂ ರಾಜ್ಯಮಟ್ಟದ ಪ್ರತಿಭಟನಾ ಸಮಾವೇಶದ ನಂತರದ ದಿನಗಳಲ್ಲಿ ತಾವು ನೀಡುತ್ತಿರುವ ಪತ್ರಿಕಾ ಹೇಳಿಕೆಗಳು ಅಮಾಯಕ ರೇಷ್ಮೆ ರೈತರನ್ನು ಮತ್ತು ರೇಷ್ಮೆ ಹಿತಚಿಂತಕರನ್ನು ಗೊಂದಲಕ್ಕೆಡೆಮಾಡುತ್ತಿದೆ. ಇಷ್ಟೊಂದು ಚರ್ಚಿತ ಚರ್ವಣವಾಗಿರುವ ಈ ಕಚ್ಚಾ ರೇಷ್ಮೆ ಆಮದು ನೀತಿ ಬಗ್ಗೆ ಯಾರು ತಮಗೆ ಕೂಲಂಕಷವಾಗಿ ನಿವೇದಿಸಿಯೇ ಇಲ್ಲವೆಂದೂ, ಈ ನೀತಿ ರೈತರ ವಿರೋಧಿ ಎಂದು ಮನವರಿಕೆಯಾದರೆ ಕೂಡಲೇ ಹಿಂತೆಗೆದುಕೊಳ್ಳಲು ಸಿದ್ಧವೆಂದು ಯಾರು ಇದುವರಿಗೂ ತಮ್ಮನ್ನು ಸಂಪರ್ಕಿಸೇ ಇಲ್ಲವೆಂದೂ ಪತ್ರಿಕಾ ಹೇಳಿಕೆಗಳನ್ನು ಕೊಡುತ್ತಿದ್ದೀರಿ.

ನಮಗೆ ತಿಳಿದಿರುವಂತೆ ಈಗಾಗಲೇ ಈ ಬಗ್ಗೆ ಪ್ರಕಟಿಸಿರುವ ಕಚ್ಚಾ ರೇಷ್ಮೆ ಆಮದು ನೀತಿಯಿಂದ ಖಂಡಿತ ದೇಶೀಯ ರೇಷ್ಮೆ ಉದ್ಯಮ ನಶಿಸಿ ಹೋಗುವುದರಲ್ಲಿ ಅನುಮಾನವಿಲ್ಲವೆಂಬುದು ತಮಗೆ ಮನವರಿಕೆಯಾಗಿದೆಯೆಂದು ನಂಬಿದ್ದೇವೆ. ನಮ್ಮ ರಾಜ್ಯದ ಪ್ರಮುಖ ಆರ್ಥಿಕತಜ್ಞರು ಹಾಗು ಕರ್ನಾಟಕ ರಾಜ್ಯ ಯೋಜನ ಮಂಡಳಿ ಉಪಾಧ್ಯಕ್ಷರಾದ ಶ್ರೀಯುತ ಡಾ. ಡಿ.ಎಮ್. ನಂಜುಂಡಪ್ಪನವರೂ ಸಹ ಈ ಬಗ್ಗೆ ಪತ್ರಿಕಾ ಹೇಳಿಕೆ ನೀಡಿದ್ದಾರೆ. ಅಲ್ಲದೆ, ಮಾಜಿ ಪ್ರಧಾನಿಗಳಾದ ಶ್ರೀಯುತ ದೇವೇಗೌಡರು, ಹಾಲಿ ರಾಜ್ಯದ ಮಂತ್ರಿಗಳಾದ ಮಾನ್ಯ ಭೈರೇಗೌಡರು, ಕೇಂದ್ರ ರೇಷ್ಮೆ ಮಂಡಳಿಯ ಅಧ್ಯಕ್ಷರಾದ ಶ್ರೀಯುತ ಏಕಾಂತಯ್ಯನವರು ಮತ್ತು ರಾಜ್ಯದ ರೇಷ್ಮೆ ಮಂತ್ರಿಗಳಾದ ಮಾನ್ಯ ಎಂ. ವರದೇಗೌಡರು ಈ ವಿಷಯದ ಬಗ್ಗೆ ಪತ್ರಿಕಾ ಹೇಳಿಕೆಗಳನ್ನು ಕೊಟ್ಟಿರುವುದಲ್ಲದೆ ಸಂಬಂಧಪಟ್ಟ ಕಾರ್ಯಾಲಯಗಳಿಗೆ ಪತ್ರ ಬರೆದಿದ್ದಾರೆ. ಕೇಂದ್ರ ಸರಕಾರದ ಜವಳಿ ಸಚಿವರು ಈಚೆಗೆ ಮೈಸೂರಿಗೆ ಭೇಟಿ ಕೊಟ್ಟ ಸಂದರ್ಭದಲ್ಲಿ ಕೇಂದ್ರ ಸರಕಾರದ ಕಚ್ಚಾ ರೇಷ್ಮೆ ಆಮದು ನೀತಿಯನ್ನು ವಿರೋಧಿಸಿ ರೇಷ್ಮೆ ಬೆಳೆಗಾರರು ಮತ್ತು ಮೊಟ್ಟೆ ಉತ್ಪಾದಕರು, ರೇಷ್ಮೆ ನೂಲು ಬಿಚ್ಚುವವರು ಹಾಗೂ ರೇಷ್ಮೆ ಕೈ ಮಗ್ಗ ನೇಕಾರರು ಪ್ರತ್ಯೇಕ ಮನವಿಗಳನ್ನು ನನ್ನ ನೇತೃತ್ವದಲ್ಲೇ ಸಲ್ಲಿಸಿದ್ದಾರೆ.

ದಿನ ಬೆಳಗೆದ್ದರೆ ವೃತ್ತಪತ್ರಿಕೆಗಳು ಮತ್ತು ಸುದ್ದಿಮಾಧ್ಯಮಗಳಿಂದ ಕಚ್ಚಾ ರೇಷ್ಮೆ ಆಮದಿಗೆ ಸಂಬಂಧಿಸಿದ ಸುದ್ದಿ ಹಿಂದೆಂದೂ ದಾಖಲಿಸದಿದ್ದಷ್ಟು ಪ್ರಚಾರವಾಗುತ್ತಿದ್ದಾಗ್ಯೂ ಇದುವರೆವಿಗೂ ಯಾರೂ ಈ ಬಗ್ಗೆ ಕಳವಳವನ್ನು ವ್ಯಕ್ತಪಡಿಸಿಯೇ ಇಲ್ಲವೆಂಬ ಅರ್ಥಬರುವ ವಿಷಯಾಂತರ ಪತ್ರಿಕಾ ಹೇಳಿಕೆಗಳನ್ನು ಕೊಡುತ್ತಾ ಬಂದಿರುವುದು ನಾಡಿನ ರೈತರ ಸಂಯಮಕ್ಕೊಂದು ಸವಾಲು ಆಗಿದೆ. ಇದೇ ಸಂದರ್ಭದಲ್ಲಿತಾವು ಪದೇ ಪದೇ ರೇಷ್ಮೆ ಬೆಲೆಗಳು ಮತ್ತು ಯಂತ್ರಚಾಲಿತ ಮಗ್ಗಗಳವರ ಪರ ಕಾಳಜಿ ವ್ಯಕ್ತಪಡಿಸುತ್ತಿರುವ ಬಗ್ಗೆ ಒಂದು ಮಾತು ತಿಳಿಸಲೇಬೇಕಾಗಿದೆ. ಮೊದಲನೆಯದಾಗಿ ನಾವು (ಜಂಟಿ ಕ್ರಿಯಾ ಸಮಿತಿ) ಈ ರಾಜ್ಯದ ರಾಷ್ಟ್ರದ ರೇಷ್ಮೆ ನೇಕಾರರ ದ್ವೇಷಿಗಳಲ್ಲಿ ಅಥವಾ ಈ ರಾಷ್ಟ್ರದ ಪ್ರಜೆಯಾದ ನೇಕಾರನ ಅಗತ್ಯತೆಗೆ ವಿರೋಧಿಗಳೂ ಅಲ್ಲ, ವಿಸ್ಮಯವೆಂದರೆ ರೇಷ್ಮೆ ಹುಟ್ಟಿದಂದಿನಿಂದಲೂ ಟಾರಿಫ್ ರಕ್ಷಣೆ ಪಡೆಯುತ್ತಾ ಬಂದಿದ್ದು, ಈಚೆಗೆ ಹೊರಡಿಸಿರುವ ಆಮದು ನೀತಿಗೆ ಮುಂಚಿನಿಂದಲೂ ನಮ್ಮ ನೇಕಾರರು ಯಾವ ರೇಷ್ಮೆ ಬಳಸುತ್ತಿದ್ದಾರೆಂದು ನಮ್ಮನ್ನು

ಕಾಡುತ್ತದೆ. ಇಂದು ವಿದೇಶಿ ರೇಷ್ಮೆಯನ್ನೇ ಬಯಸುವ ವಾರಣಾಸಿ, ಸೂರತ್ ಮತ್ತು ಇತರ ಯಂತ್ರಚಾಲಿತ ಮಗ್ಗಗಳವರು ಇದುವರೆವಿಗೂ ದೇಶೀಯ ರೇಷ್ಮೆಯನ್ನೇ ಬಳಸುತ್ತಾ ಬಂದಿದ್ದರೆಂಬುದು ಕಟುಸತ್ಯ. ವಾರಣಾಸಿ, ಸೂರತ್, ಕಾಂಚೀಪುರಂ ಮತ್ತು ಧರ್ಮಾವರಂಗಳಲ್ಲಿರುವ ಕರ್ನಾಟಕ ಸರಕಾರದ ಕಚ್ಚಾ ರೇಷ್ಮೆ ಮಾರಾಟ ಮಳಿಗೆಗಳಲ್ಲಿ ಈವರೆವಿಗೂ ನಡೆದಿರುವ ವಹಿವಾಟು ಇದಕ್ಕೆ ಪುಷ್ಟಿ ನೀಡುತ್ತದೆ. ರೇಷ್ಮೆ ವರ್ತಕರೂ ಮತ್ತು ಮಗ್ಗಗಳ ಒಡೆಯರ (ಮಾಸ್ಟರ್ ವೀವರ್ಸ್) ತಮ್ಮ ಲಾಭಕ್ಕಾಗಿ ಬಡ ನೇಕಾರನನ್ನು ಮುಂದೆ ಮಾಡಿ ತಮಗೆ ಅಧಿಕ ಲಾಭ ತರುವ ಆಮದಿಗೆ ಒತ್ತಡ ತರುವಷ್ಟು ಪ್ರಭಾವಿ ವಲಯವನ್ನು ಸೃಷ್ಟಿಸಿಕೊಂಡಿದ್ದಾರೆ. ಹಣದ ಬಲದಿಂದ ತಾವೇನು ಬೇಕಾದರೂ ಮಾಡಬಲ್ಲೆವೆಂಬ ಹಮ್ಮು ಅವರದು. ಈ ಕೆಲವರ ಹಿತರಕ್ಷಣೆಗಾಗಿ ಲಕ್ಷೋಪಲಕ್ಷ ಗ್ರಾಮೀಣ ಜನರ ಜೀವನಾಡಿಯ ಬಲಿಕೊಡಬೇಕಾಗಿಲ್ಲ.

ಇನ್ನು ತಾವು ಪದೇ ಪದೇ ಅಭಿಪ್ರಾಯಪಡುತ್ತಿರುವ ದೇಶೀಯ ರೇಷ್ಮೆ ಉತ್ಪನ್ನಗಳ ಮೇಲೆ ಈಗಿನ ಆಮದು ಯಾವ ರೀತಿಯ ಪ್ರಭಾವವನ್ನು ಬೀರಿಲ್ಲವೆಂಬುದು ತಳಸ್ಪರ್ಶಿ ಚಿಂತನೆಯಲ್ಲ. ಈಗಿನ ದಿನಗಳಲ್ಲಿ ಜೀವನಾವಶ್ಯಕ ವಸ್ತುಗಳಿಂದ ಹಿಡಿದು ದಿನ ನಿತ್ಯದ ಬಳಕೆ ಪದಾರ್ಥಗಳ ಬೆಲೆ ಗಗನಕ್ಕೇರುತ್ತಿದೆ. ಇತ್ತೀಚೆಗೆ ದಾಖಲೆಯಾಗಿರುವ ಜೀವನ ನಿರ್ವಹಣೆಯ ಸೂಚ್ಯಂಕಗಳೇ ಇದಕ್ಕೆ ಸಾಕ್ಷಿ. ಆದರೆ ರೇಷ್ಮೆ ಮತ್ತು ರೇಷ್ಮೆ ಉತ್ಪನ್ನಗಳ ಬೆಲೆ ಕಡಿಮೆ ಯಾಗಬೇಕೆನ್ನುವುದು ಯಾವ ನ್ಯಾಯ? ರೇಷ್ಮೆ ಜೀವನಾವಶ್ಯಕ ವಸ್ತುವೇನಲ್ಲ. ಅದರ ಹೆಚ್ಚಿನ ಧಾರಣೆಯಿಂದ ಕೆಲ ಲಕ್ಷ ಮಂದಿ ಗ್ರಾಮೀಣ ಜನರ ಬದುಕು ಬಡತನದ ರೇಖೆಯಿಂದ ಮೇಲ್ಮಟ್ಟಕ್ಕೇರಿದರೆ ಅದಕ್ಕಿಂತ ಸಾಮಾಜಿಕ ನ್ಯಾಯ ಇನ್ನೆಲ್ಲಿದೆ? ನಮ್ಮ ರಾಷ್ಟ್ರದ ಪ್ರಜೆಗಳು ಕಳ್ಳತನಕ್ಕೋ, ಭಿಕ್ಷಾಟನೆಗೋ, ಮೋಸ ಕೃತ್ಯಕ್ಕೋ, ಕಳ್ಳ ಮಾಲು ಸಾಗಣೆದಾರರೋ ಆಗುವುದನ್ನು ತಪ್ಪಿಸಿ ತಾನು ಇದ್ದ ಗ್ರಾಮದಲ್ಲೇ ಹೇಗೋ ಗೌರವಪೂರಕ ಜೀವನ ನಡೆಸಲು ಅನುಕೂಲವಾಗಿರುವ ದೇಶೀಯ ರೇಷ್ಮೆ ಉದ್ಯಮವು ನಾಶವಾಗಬಾರದೆಂಬುದೇ ನಮ್ಮ ಕಳಕಳಿಯ ಮನವಿ, ಸತ್ಯಾಂಶವೆಂದರೆ ಈಚೆಗೆ ಹೊರಡಿಸಿರುವ ಕಚ್ಚಾ ರೇಷ್ಮೆ ಆಮದು ನೀತಿಯಿಂದ ಈಗಾಗಲೇ ರೇಷ್ಮೆ ಉತ್ಪನ್ನಗಳ ಬೆಲೆ ಕುಸಿಯಲಾರಂಭಿಸಿದೆ. ಕಳೆದ ಡಿಸೆಂಬರ್ ಮತ್ತು ಜನವರಿ ಮಾಹೆಯ ರೇಷ್ಮೆ ಬೆಲೆಗಳನ್ನು ಈ ಕೆಳಗಿನ ಪಟ್ಟಿಯಲ್ಲಿ ಕೊಡಲಾಗಿದೆ.

### ದೇಶೀಯ ಕಚ್ಚಾ ರೇಷ್ಮೆ ಮತ್ತು ಗೂಡಿನ ಬೆಲೆಗಳು

| | ಕಚ್ಚಾ ರೇಷ್ಮೆ ಧಾರಣೆ (ಕೆ.ಜಿ.ಗೆ ರೂಗಳಲ್ಲಿ) | | ಕಚ್ಚಾ ರೇಷ್ಮೆ ಗೂಡಿನ ಧಾರಣೆ (ಕೆ.ಜಿ.ಗೆ ರೂಗಳಲ್ಲಿ) | | |
|---|---|---|---|---|---|
| ಡಿಸೆಂಬರ್'೯೮ | ಫಿಲೇಚರ್ ಚರಕಾ | ರಾಮನಗರ | ಶಿಡ್ಲಘಟ್ಟ, ಕೊಳ್ಳೆಗಾಲ | | |
| ಮೊದಲನೇ ವಾರ | ೧೪೬೧ | ೧೨೭೬ | ೧೪೧ | ೧೪೨ | ೧೪೪ |
| ಎರಡನೇ ವಾರ | ೧೫೦೫ | ೧೩೦೦ | ೧೪೦ | ೧೧೭ | ೧೩೭ |

| | | | | | |
|---|---|---|---|---|---|
| ಮೂರನೇ ವಾರ | ೧೪೭೦ | ೧೩೨೪ | ೧೪೭ | ೧೩೨ | ೧೩೩ |
| ನಾಲ್ಕನೇ ವಾರ | ೧೪೦೧ | ೧೨೮೧ | ೧೩೬ | ೧೪೨ | ೧೪೦ |
| ಜನವರಿ ೯೯ | | | | | |
| ಮೊದಲನೇ ವಾರ | ೧೩೭೪ | ೧೨೪೩ | ೧೩೩ | ೧೨೯ | ೧೩೧ |
| ಎರಡನೇ ವಾರ | ೧೩೩೫ | ೧೨೧೭ | ೧೩೧ | ೧೨೬ | ೧೨೬ |
| ಮೂರನೇವಾರ | ೧೨೫೧ | ೧೧೫೦ | ೧೨೨ | ೧೨೮ | ೧೨೮ |

ಈ ಪಟ್ಟಿಯು ಆಮದು ರೇಷ್ಮೆ ಮಾರುಕಟ್ಟೆಗೆ ಬರುವುದಕ್ಕೂ ಮೊದಲೇ ಕುಸಿಯತೊಡಗಿದ ಧಾರಣೆಗಳು ವಾಸ್ತವವಾಗಿ ವಿದೇಶೀ ರೇಷ್ಮೆ ದೇಶೀಯ ಮಾರುಕಟ್ಟೆಯಲ್ಲಿ ಲಭ್ಯವಾದಾಗ ಏನಾಗಬಹುದೆಂಬುದನ್ನು ಸೂಚಿಸುತ್ತದೆ.

ಇಷ್ಟಿದ್ದರೂ, ನಾವು ಸ್ವೀಕರಿಸುವ ತುದಿಯಲ್ಲಿರುವುದರಿಂದ, ಈಗಲಾದರೂ ತಾವು ದಯವಮಾಡಿ ಜಂಟಿ ಕ್ರಿಯಾ ಸಮಿತಿಯು ತಮ್ಮನ್ನು ಯಾವಾಗ ಎಲ್ಲಿ ಭೇಟಿಯಾಗಬಹುದೆಂಬುದನ್ನು ತಿಳಿಸಿದರೆ ನಾವು ಖಂಡಿತ ತಮ್ಮೊಂದಿಗೆ ಈ ಬಗ್ಗೆ ಕೂಲಂಕಷವಾಗಿ ಚರ್ಚಿಸಿ ಆಮದು ನೀತಿಯಿಂದಾಗುವ ದುಷ್ಪರಿಣಾಮವನ್ನು ಮನವರಿಕೆಮಾಡಲು ಹೃತ್ಪೂರ್ವಕವಾಗಿ ಪ್ರಯತ್ನಿಸುತ್ತೇವೆ. ಇಲ್ಲದಿದ್ದಲ್ಲಿ ಇದೊಂದು ಹಟ ಮತ್ತು ವ್ಯಕ್ತಿ ಪ್ರತಿಷ್ಠೆಯ ವಿಚಾರವಾಗಿ ಅದರದೇ ಆದ ದಾರಿ ಹಿಡಿದೀತು.

ಸಾಧ್ಯವಾದಷ್ಟು ಬೇಗ ತಮಗೆ ಅನುಕೂಲವಾದ ಒಂದು ದಿನ ಈ ಬಗ್ಗೆ ಚರ್ಚಿಸಲು ಅವಕಾಶ ಮಾಡಿಕೊಡಬೇಕೆಂದು ಮತ್ತೊಮ್ಮೆ ಪ್ರಾರ್ಥಿಸಿ, ತಮ್ಮಿಂದ ಯಾವ ಉತ್ತರವೂ ಬಾರದಿದ್ದಲ್ಲಿ ನಮ್ಮ ಈ ಆಮದು ವಿರೋಧಿ ಹೋರಾಟವನ್ನು ಗತ್ಯಂತರವಿಲ್ಲದೆ ತೀವ್ರಗೊಳಿಸುವ ಕಾರ್ಯಕ್ರಮಗಳನ್ನು ಜಂಟಿ ಕ್ರಿಯಾ ಸಮಿತಿಯು ಹಮ್ಮಿಕೊಳ್ಳಲೇ ಬೇಕಾಗುವುದೆಂದು ವಿನಯಪೂರ್ವಕವಾಗಿ ಸೂಚಿಸಬಯಸುತ್ತೇನೆ.

ಗೌರವಪೂರ್ವಕ ವಂದನೆಗಳೊಂದಿಗೆ,

ತಮ್ಮವನೇ ಆದ

ಸಹಿ

**(ವೈ.ಕೆ. ರಾಮಯ್ಯ)**

**ಶ್ರೀಯುತ ರಾಮಕೃಷ್ಣ ಹೆಗ್ಗಡೆಯವರು**

ವಾಣಿಜ್ಯಮಂತ್ರಿಗಳು

ವಾಣಿಜ್ಯ ಮಂತ್ರಾಲಯ, ಭಾರತ ಸರ್ಕಾರ

ನಂ. ೧೪೬, ಉದ್ಯೋಗ ಭವನ, ಮೊದಲನೇ ಅಂತಸ್ತು

ಹೊಸ ದೆಹಲಿ - ೧೧೦೦೧೧

**JOINT ACTION COMMITTEE AGAINST IMPORT OF RAW SILK**
No. 129, Govindappa Road, Basavanagudi, Bangalore 560 004
**ಕಚ್ಚಾ ರೇಷ್ಮೆ ಆಮದು ವಿರೋಧಿ ಜಂಟಿ ಕ್ರಿಯಾ ಸಮಿತಿ**

| ಅಧ್ಯಕ್ಷರು | ಉಪಾಧ್ಯಕ್ಷರು | ಕಾರ್ಯದರ್ಶಿ |
|---|---|---|
| ವೈ.ಕೆ. ರಾಮಯ್ಯ | ಬಾಸಿತ್ | ಎಂ. ರಾಮಚಂದ್ರಗೌಡ |


## ವಿನಾಶದ ಅಂಚಿನಲ್ಲಿ ರೇಷ್ಮೆ ಉದ್ಯಮ : ಒಂದು ಮನವಿ

ವಿಶ್ವದ ರೇಷ್ಮೆ ಉತ್ಪತ್ತಿಯಲ್ಲಿ ಮೊದಲನೆಯ ಸ್ಥಾನ ಚೀನಾ ದೇಶದ್ದು. ೨ನೆಯ ಸ್ಥಾನ ಭಾರತದ್ದು. ರಾಷ್ಟ್ರದ ರೇಷ್ಮೆ ಉತ್ಪಾದನೆಯಲ್ಲಿ ಕರ್ನಾಟಕ ರಾಜ್ಯದ್ದು ಸಿಂಹಪಾಲು. ಕರ್ನಾಟಕದ ಈ ಹೆಮ್ಮೆಯ ಸಾಧನೆಗೆ ಈ ರಾಜ್ಯದ ರೇಷ್ಮೆ ಬೆಳೆಗಾರರ, ರೇಷ್ಮೆ ಮೊಟ್ಟೆ ಉತ್ಪಾದಕರ, ರೇಷ್ಮೆ ನೂಲು ಬಿಚ್ಚುವವರ ಹಾಗೂ ರೇಷ್ಮೆ ಬಟ್ಟೆ ನೇಕಾರರ ಶ್ರಮ ಪ್ರಮುಖ ಕೊಡುಗೆಯಾಗಿದೆ. ವಿಶ್ವದ ರೇಷ್ಮೆ ಉತ್ಪಾದನೆಯಲ್ಲಿ ಜಪಾನ್ ರಾಷ್ಟ್ರದ ಉತ್ಪತ್ತಿ ಅನೇಕ ಕಾರಣಗಳಿಂದ ಕಡಿಮೆಯಾದ ಮೇಲೆ ಭಾರತ ಮತ್ತು ಚೀನಾ ದೇಶಗಳು ವಿಶ್ವದ ಮಾರುಕಟ್ಟೆಯಲ್ಲಿ ಪ್ರಬಲ ಸ್ಪರ್ಧಿಗಳಾದರು.

ರೇಷ್ಮೆ ಜೀವನಾವಶ್ಯಕ ವಸ್ತುವಲ್ಲ. ಬಡ ಬೆಳೆಗಾರರು ಮತ್ತು ನೇಕಾರರು ಹಾಗೂ ನೂಲು ಬಿಚ್ಚುವವರ ಶ್ರಮದ ದುಡಿಮೆಯಿಂದ ಬರುವ "ರೇಷ್ಮೆ ಬಟ್ಟೆಗಳು ಬಹುತೇಕ ಧನಿಕರ ಭೋಗವಸ್ತು". ರಾಷ್ಟ್ರದಲ್ಲಿ ಅದರಲ್ಲೂ ಕರ್ನಾಟಕದ ಲಕ್ಷಾಂತರ ಬಡ ಕುಟುಂಬಗಳಿಗೆ ಅನ್ನ ಒದಗಿಸುತ್ತಿರುವುದು ಈ ರೇಷ್ಮೆ ಉದ್ಯಮ. ರಾಷ್ಟ್ರದಲ್ಲಿ ರೇಷ್ಮೆ ಸಾಕಷ್ಟು ಉತ್ಪಾದನೆಯಾಗುತ್ತಿದೆ. ಆದರೂ ಕೆಲವು ಪಟ್ಟಭದ್ರ ಹಿತಾಸಕ್ತಿಗಳ ಒತ್ತಡಕ್ಕೆ ಮಣಿದು ಕೇಂದ್ರ ಸರಕಾರ ಹೊರ ದೇಶದಿಂದ ರೇಷ್ಮೆ ನೂಲನ್ನು ಆಮದು ಮಾಡಿಕೊಳ್ಳಲು ಕೆಲವು ನಿಬಂಧನೆಗಳಿಗೆ ಒಳಪಟ್ಟು ಅವಕಾಶ ಮಾಡಿಕೊಟ್ಟಿದೆ. ಈ ಆಮದು ನೀತಿ ಯಾವುದೇ ದೃಷ್ಟಿಯಿಂದಲೂ ಸರಿಯಿಲ್ಲವೆಂಬುದು ಕರ್ನಾಟಕ ರಾಜ್ಯದ ಎಲ್ಲ ಪಕ್ಷದ, ಎಲ್ಲ ಸರಕಾರಕ್ಕೆ ಒಳಪಟ್ಟ ಸಂಸ್ಥೆಗಳ, ಎಲ್ಲ ನಾಯಕರುಗಳ ಅಭಿಪ್ರಾಯ. ಅಷ್ಟೇ ಏಕೆ ನಾಡಿನ ಎಲ್ಲ ಪತ್ರಿಕೆಗಳು, ಎಲ್ಲ ಕಾಲಕ್ಕೂ ಕೇಂದ್ರ ಸರ್ಕಾರದ "ಆಮದು ನೀತಿ"ಯನ್ನು ವಿರೋಧಿಸುತ್ತಾ ಬಂದಿವೆ. ಆದಾಗ್ಯೂ "ರಾಷ್ಟ್ರದಲ್ಲಿ ಉತ್ತಮ ಗುಣ ಮಟ್ಟದ ನೂಲು ಉತ್ಪಾದನೆಯಾಗುತ್ತಿಲ್ಲ"ವೆಂದೂ, "ರಫ್ತು ಯೋಗ್ಯವಾದ ರೇಷ್ಮೆ ಬಟ್ಟೆ ತಯಾರು ಮಾಡಲು ಸಾಧ್ಯವಾಗುತ್ತಿಲ್ಲ"ವೆಂದೂ, "ರೇಷ್ಮೆ ನೂಲಿನ ಬೆಲೆ ನಿಯಂತ್ರಿಸಬೇಕು" ಎಂಬ ಸಲ್ಲದ ಕಾರಣಗಳನ್ನು ಮುಂದಿಟ್ಟು, ಆಮದು ಮಾಡಿಕೊಳ್ಳುವ ಅನಿಷ್ಟ ಪದ್ಧತಿಯನ್ನು ಮುಂದುವರಿಸಿಕೊಂಡು ಬರುತ್ತಿದೆ. ಇದರಿಂದಾಗಿ ಈ ರಾಷ್ಟ್ರದ ರೇಷ್ಮೆ ಉದ್ಯಮ ಕುಂಠಿತವಾಗಿದೆ. ಪಟ್ಟಭದ್ರ ಹಿತಾಸಕ್ತಿಗಳನ್ನು ಓಲೈಸುವುದನ್ನು ಬಿಟ್ಟರೆ ರೇಷ್ಮೆ ನೂಲು ಆಮದಿಗೆ ಯಾವುದೇ ಕಾರಣವಿಲ್ಲ ಎನ್ನುವುದು ಕೇಂದ್ರ ಸರಕಾರಕ್ಕೆ ಮತ್ತು ಕೇಂದ್ರ ರೇಷ್ಮೆ

ಮಂಡಳಿಗೆ ನಿಚ್ಚಳವಾಗಿ ಗೊತ್ತಿದೆ. ರಫ್ತು ಯೋಗ್ಯವಾದ ಬಟ್ಟೆಗಳ ತಯಾರಿಕೆಗೆ ಅವಶ್ಯಕವೆಂದು ಆಮದು ಮಾಡಿಕೊಂಡ ಸಾವಿರಾರು ಕೆ. ಜಿ. ಹೊರ ದೇಶದ ರೇಷ್ಮೆ ನೂಲು, ಭಾರತದ ಕಾಳಸಂತೆಯಲ್ಲಿ ಮಾರಾಟವಾಗುತ್ತಿಗೆ ಎನ್ನುವ ಸತ್ಯವನ್ನು ತಿಳಿಯಬೇಕು. ನಾವು ಹೊರ ದೇಶಕ್ಕೆ ರಫ್ತು ಮಾಡುವ ರೇಷ್ಮೆ ಸರಕಿಗೆ ಆಮದು ಮಾಡಿಕೊಳ್ಳುವ ರೇಷ್ಮೆಯ ಅವಶ್ಯಕತೆ ಇಲ್ಲ ಎನ್ನುವುದು ಉದ್ಯಮದಲ್ಲಿ ಆಳ ಅನುಭವವಿರುವ ಎಲ್ಲರಿಗೂ ತಿಳಿದಿದೆ. ಅಷ್ಟೇ ಅಲ್ಲದೆ ಹೊರ ದೇಶದಿಂದ "ರೇಷ್ಮೆ ಆಮದು ಮಾಡಿಕೊಂಡಾಗ್ಯೂ ರೇಷ್ಮೆ ನೂಲಿನ ಬೆಲೆಯನ್ನು ಸ್ಥಿರೀಕರಿಸಲು ಸಾಧ್ಯವಾಗಿಲ್ಲ" ವೆಂದು ಒಂದು ಹಂತದಲ್ಲಿ ಕೇಂದ್ರ ಸರಕಾರವೇ ತೀರ್ಮಾನಕ್ಕೆ ಬಂದಿದೆ. ಇದರಿಂದ "ಗುಣಮಟ್ಟದ ರೇಷ್ಮೆ ಈ ದೇಶದಲ್ಲಿ ಉತ್ಪಾದನೆಯಾಗದೆ ಇರುವುದರಿಂದ" ಹಾಗೂ "ರೇಷ್ಮೆ ನೂಲಿನ ಬೆಲೆ ನಿಯಂತ್ರಿಸಲು, ರೇಷ್ಮೆ ನೂಲು ಆಮದು ಮಾಡಿಕೊಳ್ಳಬೇಕಾಗಿದೆ" ಎನ್ನುವ ಕೇಂದ್ರ ಸರಕಾರದ ಅಭಿಪ್ರಾಯ ಸತ್ಯಕ್ಕೆ ದೂರವಾದುದು ಎಂಬುದರ ಸ್ಪಷ್ಟ ಅರಿವು ಯಾರಿಗಾದರೂ ಆಗುತ್ತದೆ. ಕೇಂದ್ರ ಸರಕಾರದ ಈ ತಪ್ಪು ತೀರ್ಮಾನದಿಂದ ರಾಷ್ಟ್ರದ ರೇಷ್ಮೆ ಉದ್ಯಮದ ಪ್ರಮಾಣ ಮತ್ತು ಗುಣಮಟ್ಟದಲ್ಲಿ ನಿರೀಕ್ಷಿಸಿದ ಪ್ರಗತಿ ಸಾಧಿಸಲು ಸಾಧ್ಯವಾಗಿರುವುದಿಲ್ಲ.

ಹೀಗಿರುವಾಗ ತಾ. ೦೮-೧೦-೧೯೯೮ ರಂದು ಕೇಂದ್ರ ಸರಕಾರ ಈ ರಾಷ್ಟ್ರದ ಕೆಲವು ವರ್ತಕರ ಮೂಲಕ, ಯಾರು ಬೇಕಾದರೂ ಎಷ್ಟು ಬೇಕಾದರೂ, ಯಾವುದೇ ಬೆಲೆಗೆ, ಹೊರ ದೇಶದಿಂದ ನಮ್ಮ ದೇಶಕ್ಕೆ "ಪರವಾನಗಿ ಇಲ್ಲದೆ ರೇಷ್ಮೆ ನೂಲು ಆಮದು ಮಾಡಿಕೊಳ್ಳಬಹುದು" ಎಂಬ ಆಜ್ಞೆಯನ್ನು ಹೊರಡಿಸಿದೆ. ನಿರ್ಬಂಧಿತ ಆಮದು ನೀತಿಯಿಂದಲೇ ಕೊರಗುತ್ತಿದೆ; ರೇಷ್ಮೆ ಉದ್ಯಮ. ಈ ನೂತನ ನೀತಿಯಿಂದಾಗಿ ಸರ್ವ ನಾಶವಾಗುವುದು ಖಚಿತ. ಕರ್ನಾಟಕ ರಾಜ್ಯದ ಲಕ್ಷಾಂತರ ಬಡ ಕುಟುಂಬಗಳ ಅನ್ನ ಕಿತ್ತುಕೊಳ್ಳುವ ಈ ಕರಾಳ ತೀರ್ಮಾನವನ್ನು ತೆಗೆದುಕೊಂಡಿರುವ ಕೇಂದ್ರ ಸರ್ಕಾರದಲ್ಲಿ ಸಂಬಂಧಪಟ್ಟ ಮಂತ್ರಿಗಳು ಮತ್ತು ಕಾರ್ಯದರ್ಶಿ, ಕನ್ನಡಿಗರೇ ಆಗಿರುವುದು ಒಂದು ದುರಂತ. ಇಂದಿನವರೆಗೆ ಬೇರೆಯವರನ್ನು ದೂಷಿಸುತ್ತಿದ್ದ ಕನ್ನಡಿಗರು ಹರಕೊಲ್ಲಲ್ - ಪರಕಾಯ್ವನೆ? ಎಂಬಂತೆ ಪರಿತಪಿಸುವಂತಾಗಿದೆ. ತಾವು ಪ್ರತಿಪಾದಿಸಿದ ನೀತಿಗಳನ್ನು, ನಂಬಿದ ಸಿದ್ಧಾಂತವನ್ನು, ಅಪಾರವಾಗಿ ಪ್ರಚಾರಗೊಳಿಸಿದ ಮೌಲ್ಯಗಳನ್ನು, ಸ್ವಾರ್ಥಕ್ಕಾಗಿಯೋ, ಸ್ವಜನ ಪಕ್ಷಪಾತದಿಂದಲೋ ಅಥವಾ ರಾಜಕೀಯ ಕಾರಣಗಳ ಒತ್ತಡಕ್ಕಾಗಿಯೋ ಒಬ್ಬ ವ್ಯಕ್ತಿ ಹೇಗೆ ತಿಲಾಂಜಲಿ ಕೊಡಬಲ್ಲ ಎನ್ನುವುದಕ್ಕೆ ಇದೊಂದು ನಿರ್ದಿಷ್ಟ ನಿದರ್ಶನವಾಗಿದೆ.

ಈ ಹಿನ್ನೆಲೆಯಲ್ಲಿ ಮುಕ್ತ ಆಮದು ನೀತಿಯ ಆಜ್ಞೆಯನ್ನು ತಕ್ಷಣ ಹಿಂತೆಗೆದುಕೊಳ್ಳಬೇಕೆಂದು ರಾಜ್ಯದ ಎಲ್ಲಕಡೆಯಿಂದ ಕೇಂದ್ರ ವಾಣಿಜ್ಯ ಸಚಿವರನ್ನು ಒತ್ತಾಯ ಮಾಡಲಾಯಿತು. ಈಗ ಕೇಂದ್ರ ಸರಕಾರವು ತಾ. ೦೮.೧೦.೧೯೯೮ರಂದು ಹೊರಡಿಸಿದ್ದ ಆಜ್ಞೆಯನ್ನು ಪರಿಷ್ಕರಿಸಿ, ೨ಎ ಮತ್ತು ಅದಕ್ಕಿಂತ ಮೇಲ್ಪಟ್ಟ ಗುಣಮಟ್ಟದ ರೇಷ್ಮೆ ದಾರವನ್ನು ಮುಕ್ತವಾಗಿ ಆಮದು ಮಾಡಿಕೊಳ್ಳಬಹುದೆಂದು ಆಜ್ಞೆ ಹೊರಡಿಸಿದೆ. ಈ ಪರಿಷ್ಕೃತ ಆಜ್ಞೆಯು ರಾಷ್ಟ್ರದ ರೇಷ್ಮೆ ಉದ್ಯಮಕ್ಕೆ ಹಿಂದಿನ ನೀತಿಯಷ್ಟೆ ಕೆಟ್ಟ

ಪರಿಣಾಮವಾಗುವುದು. ಭಾರತದ ರೇಷ್ಮೆ ಉದ್ಯಮವು ೫೦,೦೦೦ ಗ್ರಾಮೀಣ ಪ್ರದೇಶಗಳಲ್ಲಿ ವ್ಯಾಪಿಸಿದ್ದು ೬೦ ಲಕ್ಷಕ್ಕೂ ಹೆಚ್ಚಿನ ಜನರಿಗೆ ಉದ್ಯೋಗಾವಕಾಶವನ್ನೊದಗಿಸಿ ಕೊಡುವುದಲ್ಲದೆ, ಜೀವನಾಧಾರವಾಗಿರುವ ಕಸಬು. ಈ ದೇಶೀಯ ಉದ್ಯಮದಲ್ಲಿ ತೊಡಗಿರುವವರು ಶೇ. ೩೦ರಷ್ಟು ಬಡತನದ ರೇಖೆಯಿಂದ ಕೆಳಗಿರುವ ಮುಖ್ಯವಾಗಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸೇರಿದವರಾಗಿದ್ದಾರೆ. ಇದಲ್ಲದೆ, ಪರೋಕ್ಷವಾಗಿ ಈ ಕಸಬು ಅಷ್ಟೇ ಹೆಚ್ಚಿನ ಅಂದರೆ ೫೦ ಲಕ್ಷಕ್ಕೂ ಹೆಚ್ಚು ಮಂದಿ ಬಡತನದ ರೇಖೆಯ ಮಟ್ಟ ಅಥವಾ ಕೆಳಗಿನ ಮಟ್ಟದಲ್ಲಿರುವವರ ಜೀವನೋಪಾಯಕ್ಕಾಗಿ ಆಸರೆಯಾಗಿದೆ. ಕಚ್ಚಾ ರೇಷ್ಮೆಗೆ ಮುಕ್ತ ಆಮದು ನೀತಿಯನ್ನು ಆತುರದಲ್ಲಿ ಪ್ರಕಟಿಸಿದವರೇ ಸಿಲ್ಕ್‌ವೇಸ್ಟ್‌ನ್ನು ರಫ್ತು ಮಾಡಲು ಸಲ್ಲದ ನಿಬಂಧನೆಗಳನ್ನು ಹೇರಿ ರೇಷ್ಮೆ ನೂಲು ಬಿಚ್ಚುವವರ ಜೀವನೋಪಾಯಕ್ಕೂ ಕಲ್ಲು ಹಾಕುತ್ತಿದ್ದಾರೆ. ಅಲ್ಲದೆ ಸಿಲ್ಕ್‌ವೇಸ್ಟ್‌ನ್ನು ಅನಿರ್ಬಾಧಿತವಾಗಿ ರಫ್ತು ಮಾಡಿದ್ದೇ ಆದರೆ ಅದರಿಂದ ಬರಬಹುದಾದ ಲಾಭವನ್ನು ರೇಷ್ಮೆ ಕೃಷಿಕ ಪಡೆಯಬಹುದಾಗಿದೆ. ಕಚ್ಚಾ ರೇಷ್ಮೆಯನ್ನು ಆಮದು ಮಾಡಿ ಸಿಲ್ಕ್‌ವೇಸ್ಟ್‌ನ ರಫ್ತನ್ನು ನಿರ್ಬಂಧಿಸುವ ಈ ವಿಪರೀತ ನೀತಿಯಿಂದ ಈ ದೇಶೀಯ ಕಸಬಿನ ಮೇಲೆ ಅನಿಷ್ಟ ಪರಿಣಾಮವಾಗುತ್ತಿದೆ. ಇದಲ್ಲದೆ, ಬಡ ನೇಕಾರರನ್ನು ನೆಪಮಾಡಿಕೊಂಡು ಆಮದು ರೇಷ್ಮೆಯೊಂದರಿಂದಲೇ ಈ ದೇಶದ ನೇಕಾರನ ಉದ್ಧಾರವಾಗುವುದೆಂಬಂತೆ ಮಾತನಾಡುವ ಜನರಿಗೇನು ಕೊರತೆ ಇಲ್ಲ. ನೇಕಾರರನ್ನು ಮುಂದಿಟ್ಟು ಮಾತನಾಡುವ ಜನ ಬಡ ನೇಕಾರರನ್ನು ಶೋಷಣೆಗೊಳಪಡಿಸುತ್ತಿರುವ ಮಗ್ಗಗಳ ಒಡೆಯರಾಗಿರುವ (ಮಾಸ್ಟರ್ ವೀವರ್ಸ್), ರೇಷ್ಮೆ ಜವಳಿ ವ್ಯಾಪಾರಿಗಳೇ ಆಗಿದ್ದಾರೆ. ಇದರಿಂದ ದೇಶೀಯ ಅಥವಾ ಆಮದು ರೇಷ್ಮೆಯಿಂದ ಬಡ ನೇಕಾರನ ಜೀವನವೇನೂ ಸುಧಾರಿಸುವುದಿಲ್ಲ. ಆದರೆ ಇದರಿಂದ ಮಗ್ಗಗಳ ಒಡೆಯರು ಮತ್ತು ರೇಷ್ಮೆ ವ್ಯಾಪಾರಿಗಳಿಗೆ ಮಾತ್ರ ತುಂಬಾ ಲಾಭವಾಗುವುದು ಖಂಡಿತ. ಕೇಂದ್ರ ಸರಕಾರ ರೇಷ್ಮೆ ಆಮದು ನೀತಿ ಸಡಿಲಿಸಿದ ನಂತರ ಇದ್ದಕ್ಕಿದ್ದಂತೆ ಕಾಣಿಸಿಕೊಂಡ ಈ ನೇಕಾರ ಬಂಧುಗಳು ಆಮದು ನೀತಿಯನ್ನು ಬೆಂಬಲಿಸಿ ಸರಕಾರವನ್ನು ಹಾಡಿ ಹೊಗಳಿ ಅದೇ ನೀತಿಯನ್ನೆ ಮುಂದುವರಿಸಿಕೊಂಡು ಹೋಗುವಂತೆ ಒತ್ತಾಯಮಾಡ ಹೊರಟಿರುವವರು ಈ ಮೊದಲು ಸುಮ್ಮನಿದ್ದರೇಕೆ? ಬಡ ನೇಕಾರರ ನಿಮಿತ್ತ ಮಾಡಿಕೊಂಡು ರೇಷ್ಮೆ ಆಮದು ನೀತಿಯನ್ನು ಸ್ವಾಗತಿಸುವವರು ಮುಂದೆ ದೇಶೀಯ ಉದ್ಯಮ ಹಾಳಾದ ಮೇಲೆ ಕೇಳಿದಷ್ಟು ಹಣಕೊಟ್ಟು ರೇಷ್ಮೆ ಆಮದು ಮಾಡಿಕೊಳ್ಳಬೇಕಾದ ಪರಿಸ್ಥಿತಿ ಬರುವುದನ್ನು ಮರೆಯಬಾರದು. ಆಮದು ರೇಷ್ಮೆಯಿಂದಲೇ ಇಲ್ಲಿನ ನೇಕಾರರ ಉದ್ಧಾರವೆಂಬ ಸೋಗಾಲಾಡಿತನ ಎಷ್ಟರಮಟ್ಟಿನ ಸತ್ಯವೆಂಬುದು ವಿವೇಚನಾಶೀಲರೆಲ್ಲರೂ ತಿಳಿಯಬಲ್ಲರು. ಇದೇ ನೇಕಾರರ ಪ್ರತಿನಿಧಿಗಳ ರೇಷ್ಮೆ ಬಟ್ಟೆ ಆಮದು ಮಾಡಬಾರದೆಂಬ ಮನವಿ ನಾಳೆ ತಿರುಗುಬಾಣವಾಗುವ ಮುನ್ಸೂಚನೆಯಲ್ಲವೆ? ಈ ಹಿನ್ನೆಲೆಯಲ್ಲಿ ದೇಶೀಯ ಉದ್ಯಮವನ್ನು ಉಳಿಸಿಕೊಳ್ಳಬೇಕೆಂಬ ಆಸಕ್ತಿ ಇರುವವರೆಲ್ಲರೂ ಬೀದಿಗಿಳಿದು ಪ್ರತಿಭಟಿಸಬೇಕಾದುದು ಈಗ ಅನಿವಾರ್ಯವಾಗಿದೆ. ಯಾವುದೇ ಕಾರಣಕ್ಕಾಗಿ, ಎಷ್ಟೇ ಬೆಲೆ ತೆರಬೇಕಾದ ಸಂದರ್ಭ

ಬಂದಾಗ್ಯೂ, ಮುಕ್ತ ರೇಷ್ಮೆ ನೂಲು ಆಮದು ನೀತಿಯನ್ನು ಜಾರಿಗೊಳಿಸದಂತೆ ತಡೆಯಬೇಕಾಗಿದೆ. ಇದಕ್ಕಾಗಿ ಇಡೀ ರಾಜ್ಯದಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ರಾಜ್ಯದ ರೇಷ್ಮೆ ಬೆಳೆಗಾರರ ಸಂಘ, ನೂಲು ಬಿಚ್ಚುವವರ ಸಂಘ, ಮೊಟ್ಟೆ ಉತ್ಪಾದಕರ ಸಂಘ ಹಾಗೂ ಪ್ರದೇಶ ರೇಷ್ಮೆ ನೇಕಾರರ ಸಂಘದ ಪದಾಧಿಕಾರಿಗಳನ್ನೊಳಗೊಂಡ ಜಂಟಿ ಕ್ರಿಯಾ ಸಮಿತಿ ರಚಿಸಲಾಗಿದೆ.

ಕೇಂದ್ರ ಸರಕಾರದ ಈ ಆತುರದ ತೀರ್ಮಾನವನ್ನು ಪ್ರತಿಭಟಿಸಿ ನ್ಯಾಯ ದೊರಕಿಸಿಕೊಳ್ಳಲು ಜಂಟಿ ಕ್ರಿಯಾ ಸಮಿತಿ ಇಡೀ ರಾಜ್ಯದಲ್ಲಿ ಹಮ್ಮಿಕೊಂಡಿರುವ ಕಾರ್ಯ ಕ್ರಮಗಳನ್ನು ಯಶಸ್ವಿಗೊಳಿಸಲು ಸರ್ವರೂ ಸಹಕರಿಸಬೇಕಾಗಿ ವಿನಂತಿ.

# ಮೈಸೂರು ಬಿತ್ತನೆ ವಲಯದ ರೇಷ್ಮೆ ಬೆಳೆಗಾರರ ಸಮಾವೇಶದ ಉದ್ದೇಶ

ಸ್ಥಳ :ಕುಣಿಗಲ್ ದಿನಾಂಕ : ೧೮-೧೧-೯೮ ನೇ ಬುಧವಾರ

ವೇಳೆ ಬೆಳಿಗ್ಗೆ ೧೦ ಗಂಟೆಗೆ

ಮಾನ್ಯರೇ,

ರಾಷ್ಟ್ರದ ರೇಷ್ಮೆ ಉತ್ಪಾದನೆಯಲ್ಲಿ ಕರ್ನಾಟಕದ ಸಿಂಹಪಾಲು, ಕರ್ನಾಟಕದ ಈ ಹೆಮ್ಮೆಯ ಸಾಧನೆಗೆ ಮೈಸೂರು ಬಿತ್ತನೆ ವಲಯದ ರೈತರ ಕಟಿಬದ್ಧವಾದ ಶ್ರಮದಿಂದ ಬೆಳೆಯುವ ಬಿತ್ತನೆ ಗೂಡು ಪ್ರಮುಖ ಕೊಡುಗೆ.

ಹಿಂದೆ ಇದ್ದ ಅನೇಕ ಪ್ರದೇಶಗಳನ್ನು ಕೈ ಬಿಟ್ಟು ಕುಣಿಗಲ್, ಮಾಗಡಿ ತಾಲ್ಲೂಕು ಮತ್ತು ತುಮಕೂರು ತಾಲ್ಲೂಕಿನ ಹೆಬ್ಬೂರು ಹೋಬಳಿ ಪ್ರದೇಶವನ್ನು ಮೈಸೂರು ಬಿತ್ತನೆ ವಲಯವೆಂದು ಸರ್ಕಾರ ನಿಗದಿ ಮಾಡಿದೆ. ಈ ಪ್ರದೇಶದ ರೈತರು ಸರ್ಕಾರ ನಿಗದಿ ಮಾಡಿರುವ ಮೈಸೂರು ಬಿತ್ತನೆ ತಳಿಯ ಗೂಡನ್ನು ಮಾತ್ರ ಬೆಳೆಯಬೇಕೆಂಬ ನಿರ್ಬಂಧವಿದೆ. ಬೇರೆ ತಳಿಯನ್ನು ಬೆಳೆಯುವುದು ಇಲ್ಲಿ ಅಪರಾಧವಾಗುತ್ತದೆ. ಹೀಗೆ ಸರ್ಕಾರ ನಿಗದಿಪಡಿಸಿದ ನಿರ್ದಿಷ್ಟ ತಳಿಯನ್ನೇ ಬೆಳೆದ ಗೂಡನ್ನು ಸರ್ಕಾರಿ ಗೂಡು ಮಾರುಕಟ್ಟೆಯಲ್ಲಿಯೇ ಮಾರಾಟ ಮಾಡಬೇಕೆಂಬುದು ಮತ್ತೊಂದು ನಿರ್ಬಂಧ.

ಇಂತಹುದೇ ತಳಿಯನ್ನು ಬೆಳೆಯಬೇಕೆಂದು, ಇಂತಹ ಮಾರುಕಟ್ಟೆಯಲ್ಲೇ ಇಂತಿಷ್ಟೇ ಬೆಲೆಗೆ ಮಾರಬೇಕೆಂಬ ಕಾನೂನಿನಿಂದಾಗಿ ಅನಾದಿ ಕಾಲದಿಂದಲೂ ಈ ಪ್ರದೇಶದ ರೈತರು ತಮ್ಮ ಬೆಳೆಗೆ ಸರಿಯಾದ ಬೆಲೆ ಸಿಗದೆ ತೊಂದರೆ ಪಡಬೇಕಾಯಿತು. ಈ ಪ್ರದೇಶದ ಬೆಳೆಗಾರರಿಗೆ ಆಗಿರುವ ಈ ಅನ್ಯಾಯವನ್ನು ಸರಿಪಡಿಸಲು ೧೯೮೦ರ ದಶಕದಲ್ಲಿ ಅನೇಕ ಜನರ ಹೋರಾಟದ ಫಲವಾಗಿ ರಾಷ್ಟ್ರದಲ್ಲಿಯೇ ಮೊದಲನೇ ಬಾರಿಗೆ ವ್ಯವಸಾಯದ ಉತ್ಪನ್ನಗಳಲ್ಲಿ ಒಂದಾದ ಮೈಸೂರು ಬಿತ್ತನೆ ತಳಿ ರೇಷ್ಮೆ ಗೂಡನ್ನು ಬಿತ್ತನೆಗೆ ತೆಗೆದುಕೊಳ್ಳದೇ ಇದ್ದಾಗ 'ಬೋನಸ್' ಕೊಡುವ ಪದ್ಧತಿಯನ್ನು ಜಾರಿಗೆ ತರಲಾಯಿತು. ಅಂದಿನಿಂದ ವಿವಿಧ ಸರ್ಕಾರಗಳು ಬೋನಸ್ ದರವನ್ನು ಪರಿಷ್ಕರಿಸುತ್ತಾ ಬಂದು ೧ ಕೆ.ಜಿ. ಗೂಡಿಗೆ ೨೫ ರೂ. 'ಬೋನಸ್' ಕೊಡುತ್ತಿದ್ದಾರೆ.

ಇತ್ತೀಚಿನ ದಿನಗಳಲ್ಲಿ ಎಲ್ಲಾ ಕ್ಷೇತ್ರಗಳಲ್ಲಿ ಬೆಲೆ ಏರಿಕೆ ಉಂಟಾಗಿದೆ. ಆದರೆ ಈಗ ರಾಜ್ಯದಲ್ಲಿ ಅಧಿಕಾರದಲ್ಲಿರುವ ಜನತಾದಳ ಸರ್ಕಾರ ಎಷ್ಟು ಒತ್ತಾಯಿಸಿದರೂ ರೇಷ್ಮೆ ಬೆಳೆಗಾರರಿಗೆ 'ಬೋನಸ್' ಹೆಚ್ಚಿಸಲು ನಿರಾಕರಿಸಿದೆ. ಅದೇ ರೀತಿ ರೇಷ್ಮೆ ಬಿತ್ತನೆ ಗೂಡಿನ ಕನಿಷ್ಠ ಬೆಲೆಯನ್ನು ೧೫೦ ರೂ. ನಿಂದ ಹೆಚ್ಚಿಗೆ ಮಾಡಲು ನಿರಾಕರಿಸಿದೆ.ಸರ್ಕಾರದ ಈ ರೈತ ವಿರೋಧಿ ಧೋರಣೆಯಿಂದಾಗಿ 'ದೇಶದಲ್ಲಿ ಒಂದು ಕೆ.ಜಿ. ಈರುಳ್ಳಿಯ ಬೆಲೆ ೫೦ ರೂ. ಇರುವಾಗ ೧ ಕೆ.ಜಿ. ಬಿತ್ತನೆ ರೇಷ್ಮೆ ಗೂಡನ್ನು ರೈತ ೩೦ರೂ.ಗೆ ಮಾರಾಟ

ಮಾಡಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ.' ಈ ರಾಷ್ಟ್ರದ ರೇಷ್ಮೆ ಆಮದು ನೀತಿಯಿಂದಾಗಿ ರೇಷ್ಮೆ ಉತ್ಪಾದಕರಿಗೆ ನ್ಯಾಯಬೆಲೆ ಸಿಗುತ್ತಿಲ್ಲ. ಆದ್ದರಿಂದ ಹೊರ ದೇಶದಿಂದ ರೇಷ್ಮೆ ಆಮದು ಮಾಡಿಕೊಳ್ಳುವುದನ್ನು ನಿಲ್ಲಿಸಬೇಕೆಂದು ಕೇಂದ್ರ ಸರ್ಕಾರಕ್ಕೆ ಅನೇಕ ಬಾರಿ ಕೋರಿಕೊಂಡಿದ್ದಾಗ್ಯೂ ಕೇಂದ್ರ ಸರ್ಕಾರ ರೇಷ್ಮೆ ವ್ಯಾಪಾರಿಗಳ ಹಿತ ರಕ್ಷಿಸಲು ರೇಷ್ಮೆ ಆಮದು ಮಾಡಿಕೊಳ್ಳುವುದನ್ನು ನಿಲಿಸಿಲ್ಲ.

ಬೋನಸ್ ದರ ಹೆಚ್ಚಿಸಲು, ರೇಷ್ಮೆ ಗೂಡಿಗೆ ಕನಿಷ್ಠ ಬೆಲೆ ಪರಿಷ್ಕರಿಸಲು, ಅನಿಷ್ಟ ರೇಷ್ಮೆ ಆಮದು ಪದ್ಧತಿಯನ್ನು ರದ್ದು ಮಾಡುವಂತೆ ರಾಜ್ಯ ಮತ್ತು ಕೇಂದ್ರ ಸರ್ಕಾರಗಳನ್ನು ಒತ್ತಾಯಿಸುವುದು ರೇಷ್ಮೆ ಬೆಳೆಗಾರರಿಗೆ ಈಗ ಅನಿವಾರ್ಯವಾಗಿದೆ.

ಆದ್ದರಿಂದ ಈ ವಿಷಯಗಳೂ ಸೇರಿದಂತೆ ಬೆಳೆಗಾರರಿಗೆ ಸಂಬಂಧಿಸಿದ ಎಲ್ಲಾ ಸಮಸ್ಯೆಗಳ ಬಗ್ಗೆ ಚರ್ಚಿಸಿ, ಬೇಡಿಕೆಗಳನ್ನು ಈಡೇರಿಸುವಂತೆ ಸರ್ಕಾರವನ್ನು ಒತ್ತಾಯಿಸಲು ದಿನಾಂಕ ೧೮-೧೧-೯೮ ನೇ ಬುಧವಾರದಂದು ಬೆಳಿಗ್ಗೆ ೧೦ ಗಂಟೆಗೆ ಕುಣಿಗಲ್‌ನ ಕೃಷಿ ಉತ್ಪನ್ನ ಮಾರುಕಟ್ಟೆ ಆವರಣದಲ್ಲಿ ಮೈಸೂರು ಬಿತ್ತನೆ ವಲಯದ ರೇಷ್ಮೆ ಬೆಳೆಗಾರರ ಸಭೆ ಕರೆಯಲಾಗಿದೆ.

ಈ ಸಭೆಯಲ್ಲಿ ಭಾಗವಹಿಸಿ ಬೆಳೆಗಾರರಿಗೆ ಶಕ್ತಿ ತುಂಬಲು ವಿರೋಧ ಪಕ್ಷದ ಅನೇಕ ನಾಯಕರುಗಳನ್ನು ಆಹ್ವಾನಿಸಲಾಗಿದೆ. ಈ ಕೆಳಕಂಡ ಬೇಡಿಕೆಗಳನ್ನು ಈಡೇರಿಸುವಂತೆ ಸರ್ಕಾರಗಳನ್ನು ಒತ್ತಾಯಿಸಲು ಮಾಗಡಿ, ಕುಣಿಗಲ್ ಮತ್ತು ಹೆಬ್ಬೂರು ಪ್ರಾಂತ್ಯದ ರೇಷ್ಮೆ ಬೆಳೆಗಾರರು ಹಾಗೂ ಹಿತೈಷಿಗಳು ಹೆಚ್ಚಿನ ಸಂಖ್ಯೆಯಲ್ಲಿ ಈ ಸಭೆಯಲ್ಲಿ ಭಾಗವಹಿಸಿ ಯಶಸ್ವಿಗೊಳಿಸಬೇಕೆಂದು ಕೋರಿಕೆ.

**ಬೇಡಿಕೆಗಳು**

* ರೇಷ್ಮೆ ಬಿತ್ತನೆ ಗೂಡಿನ 'ಬೋನಸ್' ದರವನ್ನು ರೂ. ೨೫ ರಿಂದ ೫೦ ರೂ.ಗೆ ಹೆಚ್ಚಿಸುವುದು.
* ಬಿತ್ತನೆ ಗೂಡಿನ ಕನಿಷ್ಠ ಬೆಲೆಯನ್ನು ರೂ. ೧೫೦ ರಿಂದ ೨೫೦ ರೂ. ಗಳಿಗೆ ನಿಗದಿಗೊಳಿಸುವುದು.
* ರೈತರ ಬೆಳೆಗಳು ಕೆಡುವುದನ್ನು ತಪ್ಪಿಸಲು ಇಲಾಖೆಯವರು ರೋಗರಹಿತ ಮೊಟ್ಟೆ ಒದಗಿಸುವಂತೆ ಒತ್ತಾಯಿಸುವುದು.

ರಾಷ್ಟ್ರದ ರೇಷ್ಮೆ ಉತ್ಪಾದಕರಿಗೆ ಮಾರಕವಾಗಿರುವ ರೇಷ್ಮೆ ಆಮದು ಪದ್ಧತಿಯನ್ನು ತಕ್ಷಣ ರದ್ದು ಪಡಿಸುವಂತೆ ಕೇಂದ್ರ ಸರ್ಕಾರವನ್ನು ಒತ್ತಾಯಿಸುವುದು.

ಸ್ಥಳ : ಕುಣಿಗಲ್

ತಮ್ಮ ವಿಶ್ವಾಸಿ,
**ವೈ.ಕೆ. ರಾಮಯ್ಯ**
ಮಾಜಿ ಸಚಿವರು

# ಲಿಂಗ ಸೀಮಿತ ತಳಿ : ಎಸ್.ಎಲ್ - ಕೆ.ಎಸ್.ಪಿ.ಎಂ.
# ಒಂದು ಪರಿಚಯ

**ಈ ತಳಿಯ ಅಭಿವೃದ್ಧಿಯ ಉದ್ದೇಶ**

೧. ಮಿಶ್ರ ತಳಿಯ ತಯಾರಿಕೆಗೆ ಅನುಕೂಲವಾಗುವಂತೆ ಗಂಡು ಹೆಣ್ಣುಗಳನ್ನು ಹುಳುವಿನ ಹಂತದಲ್ಲಿಯೇ ನಿಖರವಾಗಿ, ಸುಲಭವಾಗಿ ಪ್ರತ್ಯೇಕಿಸುವುದು.

೨. ನಾಟಿ ತಳಿಯಂತೆಯೇ ಎಲ್ಲಾ ಋತುಮಾನ ಹಾಗೂ ಸಾಕಾಣಿಕಾ ಪರಿಕ್ರಮಗಳಿಗೆ ಹೊಂದಿಕೊಳ್ಳುವ ಗಡುಸತ್ವ ಗುಣವನ್ನು ಹೊಂದಿಕೊಂಡಿರುವುದು.

**ಹಿನ್ನೆಲೆ**

ಮಿಶ್ರ ತಳಿ ಅಥವಾ ಸಂಕರಣ ತಳಿಗಳ ಮೊಟ್ಟೆ ತಯಾರಿಕೆಯಲ್ಲಿ ಚಿಟ್ಟೆಗಳು ಗೂಡಿನಿಂದ ಹೊರಬರುವ ಮುಂಚೆಯೇ ಗಂಡು ಹೆಣ್ಣುಗಳನ್ನು ಬೇರ್ಪಡಿಸುವುದು ಅತ್ಯಗತ್ಯ. ಹೆಣ್ಣು ಮತ್ತು ಗಂಡು ಚಿಟ್ಟೆಗಳನ್ನು ಆರಿಸದೆಯೇ ಹಾಗೆಯೇ ಬಿಟ್ಟರೆ, ಹೊರಬಂದ ಚಿಟ್ಟೆಗಳು ತಮ್ಮ ತಮ್ಮಲ್ಲಿಯೇ ಜೊತೆಗೂಡು, ನಿಜವಾದ ಮಿಶ್ರ ತಳಿ ಅಥವಾ ಸಂಕೀರ್ಣ ತಳಿಗಳಾಗದೆ, ದೋಷಪೂರಿತ ತಳಿಗಳಾಗುವ ಸಂಭವ ಹೆಚ್ಚು. ನಾಟಿ ಅಥವ ಶುದ್ಧ ಮೈಸೂರು ತಳಿಯಲ್ಲಿ, ಬೆಳಗಿನ ಜಾವದಲ್ಲಿ ದೀಪ ಹಾಕಿದ ಸ್ವಲ್ಪ ಸಮಯದ ನಂತರ ಮೊದ ಮೊದಲು ಗಂಡು ಚಿಟ್ಟೆಗಳು ಗೂಡಿನಿಂದ ಹೊರ ಬಂದು ನಂತರ ಹೆಣ್ಣು ಚಿಟ್ಟೆಗಳು ಬರುವುದರಿಂದ ಬಹುತೇಕ ಬಿತ್ತನೆ ಕೋಠಿಗಳಲ್ಲಿ, ಈ ಕ್ರಮವನ್ನು ಅನುಸರಿಸಿ, ಮೊದಲು ಗಂಡು ಚಿಟ್ಟೆಗಳು ಬಂದಾಗಲೆಲ್ಲ ಅವುಗಳನ್ನು ಆರಿಸಿ ಹೊರತೆಗೆದು ತಿರಸ್ಕರಿಸಲಾಗುವುದು. ನಂತರ ಬರುವ ಹೆಣ್ಣು ಚಿಟ್ಟೆಗಳನ್ನು ಆರಿಸಿ ತೆಗೆದು ದ್ವಿತಳಿ ಗಂಡು ಚಿಟ್ಟೆಗಳೊಡನೆ ಸಂಕರಿಸಲಾಗುವುದು. ಹಾಗಿದ್ದರೂ ಕೂಡ ನೂರಕ್ಕೆ ನೂರು ಭಾಗ ಖಚಿತವಾಗಿ ಈ ರೀತಿ ಗಂಡು ಹೆಣ್ಣುಗಳನ್ನು ಪ್ರತ್ಯೇಕಿಸುವುದು ಅಸಾಧ್ಯ. ಬೈವೋಲ್ಟಿನ್ ತಳಿಗಳಲ್ಲಂತೂ ಈ ರೀತಿಯ ಚಿಟ್ಟೆ ಬರುವುದರಲ್ಲಿ ನಿರ್ಧಿಷ್ಟ ವ್ಯತ್ಯಾಸವಿಲ್ಲದಿರುವುದರಿಂದ ಗಂಡು- ಹೆಣ್ಣು ಚಿಟ್ಟೆಗಳನ್ನು ನಿಖರವಾಗಿ ಬೇರ್ಪಡಿಸಲು ಇನ್ನಷ್ಟು ಕಷ್ಟ ಸಾಧ್ಯ.

ಕೆಲವು ಆಧುನಿಕ ಬಿತ್ತನೆ ಕೋಠಿಗಳಲ್ಲಿ ಗಂಡು ಹೆಣ್ಣುಗಳ ಗೂಡಿನ ತೂಕದಲ್ಲಿರುವ ವ್ಯತ್ಯಾಸದ ಆಧಾರದ ಮೇರೆಗೆ "ಎಲೆಕ್ಟ್ರಾನಿಕ್" ತಕ್ಕಡಿಗಳ ಸಹಾಯದಿಂದ ಗಂಡು ಹೆಣ್ಣುಗಳನ್ನು ಬೇರ್ಪಡಿಸಿ ತಮಗೆ ಬೇಕಾದ ಗೂಡುಗಳನ್ನು ಮಾತ್ರ ಇರಿಸಿಕೊಳ್ಳುವ ಪದ್ಧತಿ ಇದೆ. ಆದರೂ ಈ ಕ್ರಮದಿಂದಲೂ ನೂರಕ್ಕೆ ನೂರು ಭಾಗದಷ್ಟು ಗಂಡು- ಹೆಣ್ಣುಗಳನ್ನು ಪ್ರತ್ಯೇಕಿಸುವುದು ಸಾಧ್ಯವಾಗುತ್ತಿಲ್ಲ.

### ತಳಿಯ ಹೆಸರು

ಈ ತಳಿಯನ್ನು ಎಸ್ ಎಲ್ - ಕೆ ಎಸ್ ಪಿ ಎಂ ಎಂದು ಕರೆಯಲಾಗಿದೆ. ಹೆಸರಿನ ವಿವರಣೆ ಈ ರೀತಿ ಇದೆ. ಎಸ್ ಎಲ್= ಸೆಕ್ಸ್ ಲಿಮಿಟೆಡ್, ಕೆ ಎಸ್= ಕೆ ಎಸ್ ಎಸ್ ಆರ್ ಡಿ ಐ, ಪಿ ಎಂ-ಪ್ಯೂರ್ ಮೈಸೂರ್.

### ತಳಿಯ ಅಭಿವೃದ್ಧಿ ವಿಧಾನ

ಈ ತಳಿಯನ್ನು ಎಸ್ ಎಲ್- ಎಕ್ಸ್ ಎಂಬ ಮೂಲ ಲಿಂಗ ಸೀಮಿತ ಬೈವೋಲ್ಟಿನ್ ತಳಿ ಹಾಗೂ ಶುದ್ಧ ಮೈಸೂರು ತಳಿಯನ್ನು ಉಪಯೋಗಿಸಿಕೊಂಡು ಎಫ್ ೨ ಹಂತದ ನಂತರ ನಾಟಿ ತಳಿಯ ಗುಣ ಲಕ್ಷಣಗಳನ್ನೇ ಹೋಲುವ ದಿಸೆಯಲ್ಲಿ ತಳಿ ಅಭಿವೃದ್ಧಿಯ ಪದ್ಧತಿಯನ್ನು ಅನುಸರಿಸಿ ಸುಮಾರು ೧೩ ತಲೆಮಾರುಗಳಲ್ಲಿ ಈ ತಳಿಯನ್ನು ಅಭಿವೃದ್ಧಿಪಡಿಸಲಾಗಿದೆ.

### ಗುಣಲಕ್ಷಣಗಳು

ಎಸ್ ಎಲ್- ಕೆ ಎಸ್ ಪಿ ಎಂ ತಳಿಯ ಶುದ್ಧ ಮೈಸೂರು ಅಥವ ನಾಟಿ ತಳಿಯನ್ನು ಹೋಲುತ್ತಿದ್ದು, ಇದರ ಗುಣ ಲಕ್ಷಣಗಳನ್ನು ಪಟ್ಟಿ ೧ ರಲ್ಲಿ ನೀಡಲಾಗಿದೆ.

ಮೊಟ್ಟೆಗಳು ನಾಟಿ ತಳಿಯಂತೆಯೇ ಇದ್ದು, ಬಿಡಿ ತತ್ತಿಗಳ ಸಂಖ್ಯೆಯಲ್ಲಿ ಯಾವ ವ್ಯತ್ಯಾಸವೂ ಇರುವುದಿಲ್ಲ. ಹುಳುಗಳಲ್ಲಿ ಸುಮಾರು ೫೦ ಭಾಗದಷ್ಟು ಹುಳುಗಳಿಗೆ ಮಚ್ಚೆ ಗುರುತುಗಳಿರುತ್ತವೆ. ಇನ್ನು ಉಳಿದ ೫೦ ಭಾಗದಷ್ಟು ಹುಳುಗಳಿಗೆ ಯಾವುದೇ ಗುರುತುಗಳು ಇರುವುದಿಲ್ಲ. ಗುರುತಿರುವ ಹುಳುಗಳೆಲ್ಲ ಹೆಣ್ಣು ಹುಳುಗಳಾಗಿರುತ್ತವೆ. ಗುರುತಿಲ್ಲದಿರುವ ಹುಳುಗಳೆಲ್ಲ ಗಂಡು ಹುಳುಗಳಾಗಿರುತ್ತವೆ. ಮೂರನೇ ಜ್ವರದಿಂದ ಎದ್ದು ಎರಡನೆಯ ದಿನದ ನಂತರ ಸುಲಭವಾಗಿ ಮತ್ತು ನಿಖರವಾಗಿ ಗಂಡು- ಹೆಣ್ಣು ಹುಳುಗಳನ್ನು ಪ್ರತ್ಯೇಕಿಸಬಹುದಾಗಿದೆ. ನಾಟಿ ತಳಿಗಳಲ್ಲಿ ಗಂಡು ಗೂಡುಗಳು ಬೇಕಿಲ್ಲವಾದ್ದರಿಂದ ಎಲ್ಲಾ ಗುರುತಿಲ್ಲದಿರುವ ಗಂಡು ಹುಳುಗಳನ್ನು ತಿರಸ್ಕರಿಸಬಹುದಾಗಿದೆ. ಹುಳುವಿನ ಹಂತದ ಜೀವಿತಾವಧಿಯೂ ನಾಟಿ ತಳಿಯಂತೆಯೇ ಇರುತ್ತದೆ.

ಗೂಡುಗಳು ಆಕಾರದಲ್ಲಿ ಮತ್ತು ಬಣ್ಣದಲ್ಲಿ ನಾಟಿ ತಳಿಯನ್ನೇ ಹೋಲುತ್ತವೆ. ತಿಳಿ ಹಸಿರು ಬಣ್ಣದ ಕದಿರಿನಾಕಾರಾದ (ಸ್ಪಿಂಡಲ್) ಗೂಡುಗಳನ್ನು ಹೊಂದಿದ್ದು ಹೆಣ್ಣು ಗೂಡಿನ ಸರಾಸರಿ ತೂಕವು ೧.೨೦ ಗ್ರಾಂ ಇದ್ದು, ಗಂಡು ಗೂಡಿನ ಸರಾಸರಿ ತೂಕವು ೧.೦೨ ಗ್ರಾಂ ಇದ್ದು ಒಟ್ಟು ಸರಾಸರಿ ತೂಕವು ೧.೦೬ ಗ್ರಾಂ ಗಳಾಗಿರುತ್ತವೆ. ಸರಾಸರಿ ಗೂಡು ಕವಚದ ಅನುಪಾತವು ಶೇ. ೧೪.೫೨ ರಷ್ಟಿದ್ದು, ಇದು ನಾಟಿ ತಳಿಗಳಿಗಿಂತ ಗಮನಾರ್ಹ ವ್ಯತ್ಯಾಸವಾಗಿರುವುದಿಲ್ಲ. ಸಾಕಣೆಯೂ ನಾಟಿಯಂತೆಯೇ ಸುಲಭವಾಗಿದ್ದು ಗೂಡು ಕಟ್ಟುವ ಹುಳುಗಳ ಅನುಪಾತವು ಶೇ. ೯೬ ರಷ್ಟಿರುತ್ತದೆ.

ಈ ತಳಿಯನ್ನು ಉಪಯೋಗಿಸಿಕೊಂಡು ತಯಾರಿಸಿದ ಮಿಶ್ರ ತಳಿಗಳ ಸಾಕಣೆಯ ಫಲಿತಾಂಶವನ್ನು ಪಟ್ಟಿಯಲ್ಲಿ ನೀಡಲಾಗಿದೆ. ಗೂಡಿನ ತೂಕದಲ್ಲಾಗಲೀ ಗೂಡು ಕವಚದ ಅನುಪಾತದಲ್ಲಾಗಲೀ, ಗೂಡಿನ ಇಳಿವರಿಯಲ್ಲಾಗಲೀ, ಹೊಸ ಮಿಶ್ರ ತಳಿಯಲ್ಲಿ ಮತ್ತು ರೂಢಿಯಲ್ಲಿರುವ ಮಿಶ್ರ ತಳಿಯಲ್ಲಿ ಗಮನಾರ್ಹ ವ್ಯತ್ಯಾಸವಿರುವುದಿಲ್ಲ.

## ಈ ತಳಿಯಿಂದ ರೈತರಿಗೂ ಮೊಟ್ಟೆ ತಯಾರಕರಿಗೂ ಆಗುವ ಅನುಕೂಲ :

ಎಸ್ ಎಲ್ - ಕೆ ಎಸ್ ಪಿ ಎಂ ತಳಿಯ ನಾಟಿ ತಳಿಯಂತೆಯೇ ಇದ್ದು ಲಿಂಗ ಸೀಮಿತ ಗುರುತುಗಳನ್ನು ಹೊಂದಿರುವುದರಿಂದ ರೈತರು ಹುಳುವಿನ ಹಂತದಲ್ಲಿಯೇ ಪ್ರತ್ಯೇಕಿಸಿ, ಹೆಣ್ಣು ಹುಳುಗಳನ್ನು ಮಾತ್ರ ಸಾಕಣೆ ಮಾಡಿ ಈ ಗೂಡುಗಳನ್ನು ಬಿತ್ತನೆಗಾಗಿ ತರಬಹುದು. ಆದರೆ ರೈತರು ೧೦೦ ಮೊಟ್ಟೆ ಸಾಕುವವರಾದರೆ ಅವರು ೨೦೦ಮೊಟ್ಟೆಯನ್ನು ಚಾಕಿ ಕಟ್ಟಬೇಕು. ಮೂರನೇ ಜ್ವರದ ನಂತರ ಗಂಡು ಹೆಣ್ಣುಗಳನ್ನು ಪ್ರತ್ಯೇಕಿಸಿ ೧೦೦ ಮೊಟ್ಟೆ (ಹೆಣ್ಣು ಹುಳ) ಮಾತ್ರ ಸಾಕಣೆ ಮಾಡಬೇಕು. ಬರೀ ಹೆಣ್ಣು ಗೂಡುಗಳನ್ನು ಮಾತ್ರ ಬೆಳೆಸುವುದರಿಂದ ಈ ಗೂಡಿನ ಬೆಲೆಯನ್ನು ರೂಢಿಯಲ್ಲಿರುವ ಗೂಡಿನ ಬೆಲೆಗಿಂತ ತುಲನಾತ್ಮಕವಾಗಿ ಹೆಚ್ಚಳ ಬೆಲೆಯನ್ನು ರೇಷ್ಮೆ ಇಲಾಖೆಯ ಉ ನಿಗದಿಪಡಿಸಿದೆ.

## ಲಿಂಗ ಸೀಮಿತ ತಳಿಯಿಂದ ರೇಷ್ಮೆ ಉದ್ಯಮಕ್ಕೆ ಆಗುವ ಅನುಕೂಲಗಳು :

ಮೊಟ್ಟೆ ತಯಾರಕರು ತಂದ ಎಲ್ಲಾ ಗೂಡುಗಳನ್ನು ಉಪಯೋಗಿಸಿಕೊಂಡು ಮಿಶ್ರ ತಳಿ ಮೊಟ್ಟೆ ತಯಾರಿಸಬಹುದು. ಬಿತ್ತನೆ ಗೂಡು ಖರೀದಿಸಲು ತಗಲುವ ಖರ್ಚು ಮತ್ತು ಕೆಲಸಗಾರರಿಗೆ ತಗಲುವ ಖರ್ಚು ಕಡಿಮೆಯಾಗುವುದು. ಕರ್ನಾಟಕ ರಾಜ್ಯಕ್ಕೆ ವಾರ್ಷಿಕವಾಗಿ ಬೇಕಾಗುವ ೧೮ ಕೋಟಿ ಮಿಶ್ರ ತಳಿ ಮೊಟ್ಟೆಗಳನ್ನು ಉತ್ಪಾದಿಸುವುದರಲ್ಲಿ ಗಂಡು ಹೆಣ್ಣು ಪ್ರತ್ಯೇಕಿಸದೇ ಇದ್ದರೆ ಆಗುವ ಅಂದಾಜು ನಷ್ಟ ಸುಮಾರು ೫ ಕೋಟಿ ರೂಪಾಯಿಗಳನ್ನು ಲಿಂಗ ಸೀಮಿತ ತಳಿಗಳನ್ನು ಉಪಯೋಗಿಸಿದರೆ ತಡೆಗಟ್ಟಬಹುದು.

ಎಸ್ ಎಲ್-ಕೆಎಸ್‌ಪಿಎಂ ಮತ್ತು ಶುದ್ಧ ಮೈಸೂರು ತಳಿಯ ಹಾಗೂ ಅವುಗಳ ಮಿಶ್ರ ತಳಿಗಳ ಸಾಕಣೆಯ ತುಲನಾತ್ಮಕ ವಿವರಣೆಗಳು.

ಕ್ರಸಂ. ತಳಿ ಬಿಡಿ ಮೊಟ್ಟೆ ಚಾಕಿ ಹುಳುವಿನ ಹಂತದ ೧೦,೦೦೦ ಹುಳುಗಳಿಗೆ ಗೂಡಿನ ಕವಚದ  ಗೂಡು ಕವಚದ ಅನುಪಾತ ಇಆರ್‌ಆರ್ ಪ್ಯೂಪ ನೂಲಿನ ಡೀನಿಯರ್

ಸಂಖ್ಯೆ ಶೇಕಡಾಂಶ ಅವಧಿ ಇಳುವರಿ ತೂಕ ತೂಕ ಅನುಪಾತ ದರ ಉದ್ದ

(%) (ದೀಗು) (ಕಿ. ಗ್ರಾಂ) (ಗ್ರಾಂ) (ಸೆಂ. ಗ್ರಾಂ)(%) (%) (%) (ಮೀ)

೧ ಎಸ್ ಎಲ್- ಕೆಪಿಎಂ ಗಂಡು ೯೫೦೦ ೧.೦೨ ೧೬. ೧೫.೬೮ ೯೫.೦೦ ೯೩.೦ ೪೧೦ ೨.೩೩

ಹೆಣ್ಣು ೪೫೪ ೯೮.೬ ೨೫.೧೨ ೧೧.೩೭೫ ೧. ೨೦ ೧೬ ೧೩.೩೩ ೯೭.೦೦ ೯೨.೬ ೪೧೮ ೨.೨೦

ಸರಾಸರಿ ೪೫೪ ೯೮.೬ ೨೫.೧೨ ೧೦. ೪೩೮ ೧.೦೬ ೧೬ ೧೪. ೫೧ ೯೬.೦೦ ೯೨.೮ ೪೧೪ ೨.೨೬

೨ ಶುದ್ಧ ಮೈಸೂರು ೪೫೭ ೯೮.೮ ೨೭.೦೦ ೧೦.೬೨೫ ೧.೧೪ ೧೬ ೧೪.೦೪ ೯೬.೦೦ ೯೩.೨ ೪೦೫ ೨.೨೨

೩ ಎಸ್ ಎಲ್- ಕೆಎಸ್‌ಪಿಎಂ *ಎನ್‌ಬಿಳಿಡಿ೨ ೪೧೪ ೯೭.೯ ೨೫.೦೦ ೧೭. ೬೨೫ ೧.೮೧ ೨೮ ೧೫.೪೭ ೯೨.೫೦ ೯೧.೨ ೮೧೮ ೨.೧೦

೪ ಎಸ್ ಎಲ್ - ಕೆಪಿಎಂ *ಎನ್‌ಪಿ೨ ೪೧೭ ೯೬.೪ ೨೫.೦೦ ೨೧.೬೦೦ ೨.೪೦ ೪೦ ೧೭.೬೬ ೯೪.೨೦ ೯೨.೪ ೮೫೭ ೨.೪೨

೫ ಎಸ್ ಎಲ್- ಕೆಎಸ್‌ಪಿಎಂ* ಕೆ ಎಸ್‌ಒ-೧ ೪೭೨ ೯೮.೨ ೨೫.೦೦ ೧೭.೨೦೦ ೨.೦೩ ೩೧ ೧೫.೨೭ ೯೨.೫೦ ೯೦.೨ ೮೧೭ ೨.೪೭

೬ ಶುದ್ಧ ಮೈಸೂರು *ಎನ್ ಬಿಳ ಡಿ೨ ೪೫೨ ೯೮.೬ ೨೫.೦೦ ೧೬.೩೦೦ ೧.೭೫ ೨೮ ೧೬.೦೦ ೯೩.೫೦ ೯೧.೪ ೮೨೧ ೨.೧೦

❑❑

# ಕೆಲವರ ಹಿತಾಸಕ್ತಿಗಾಗಿ ರೇಷ್ಮೆ ಆಮದು ನೀತಿ: ವೈ.ಕೆ.ಆರ್. ಟೀಕೆ

ಗಂಗಾವಾಹಿನಿ. ದಿನಾಂಕ 12-1-99

ತು.ಜ.12 : ರೇಷ್ಮೆ ಆಮದು ಮಾಡಿಕೊಳ್ಳುವ ನೀತಿಯ ದುಷ್ಪರಿಣಾಮದ ಬಗ್ಗೆ ಅಪಾರ ವಿರೋಧ ವ್ಯಕ್ತವಾಗಿದ್ದರೂ ಕೇಂದ್ರ ಸರ್ಕಾರ ಬೆರಳೆಣಿಕೆಯಷ್ಟಿರುವ ಜನರ ಹಿತಾಸಕ್ತಿ ಕಾಪಾಡುವ ಒಂದೇ ಕಾರಣಕ್ಕಾಗಿ ರೇಷ್ಮೆ ನೂಲು ಮುಕ್ತವಾಗಿ ಆಮದು ಮಾಡಿಕೊಳ್ಳುವ ನೀತಿ ಅನುಸರಿಸುವಲ್ಲಿ ಹಠಮಾರಿತನ ತೋರುತ್ತಿದೆ ಎಂದು ಮಾಜಿ ಸಚಿವ ಹಾಗೂ ಕರ್ನಾಟಕ ರೇಷ್ಮೆ ಬೆಳೆಗಾರರ ಸಂಘದ ಅಧ್ಯಕ್ಷ ವೈ.ಕೆ. ರಾಮಯ್ಯ ಟೀಕಿಸಿದ್ದಾರೆ.

ಈ ಆಮದು ನೀತಿಯಿಂದ ರಾಷ್ಟ್ರದ ರೇಷ್ಮೆ ಉದ್ಯಮ ಸರ್ವನಾಶ ಆಗುವುದೆಂದು ನಂಬಿ ಎಲ್ಲಾ ಪಕ್ಷದ ನಾಯಕರು, ರೇಷ್ಮೆ ಬೆಳೆಗಾರರು, ನೂಲು ಬಿಡಿಸುವವರು, ಮೊಟ್ಟೆ ಉತ್ಪಾದಿಸುವವರು ಮತ್ತು ನೇಕಾರರು ಈ ನೀತಿ ವಿರೋಧಿಸಿದ್ದಾರೆ ಎಂದು ಹೇಳಿದ್ದಾರೆ.

ಭಾರತ ರೇಷ್ಮೆ ಉದ್ಯಮವೆಂದರೆ ಅದು ಕರ್ನಾಟಕ ರೇಷ್ಮೆ ಉದ್ಯಮ. ಇಂತಹ ಉದ್ಯಮ ನಾಶವಾಗಲು ಕೇಂದ್ರದಲ್ಲಿ ವಾಣಿಜ್ಯ ಸಚಿವರಾಗಿರುವ ರಾಮಕೃಷ್ಣ ಹೆಗಡೆಯವರು ಹಾಗೂ ವಾಣಿಜ್ಯ ಕಾರ್ಯದರ್ಶಿಯಾದ ಪಿ.ಪಿ. ಪ್ರಭು ನಾಂದಿ ಆಡಿದ್ದಾರೆ ಎಂಬುದು ಅತ್ಯಂತ ದುರದೃಷ್ಟಕರ ಸಂಗತಿ.

ಈ ಹಿನ್ನೆಲೆಯಲ್ಲಿ ಈ ಉದ್ಯಮ ಪ್ರಗತಿ ಹೊಂದಬೇಕೆಂದು ಪ್ರಾಮಾಣಿಕವಾಗಿ ನಂಬಿ ಬದುಕುತ್ತಿರುವ ನಮಗೆ ಕೇಂದ್ರ ಸರ್ಕಾರದ ಮುಕ್ತ ರೇಷ್ಮೆ ನೂಲು ಆಮದು ನೀತಿಯನ್ನು ಪ್ರತಿಭಟಿಸುವುದು ಅನಿವಾರ್ಯವಾಗಿದೆ.

ಕೇಂದ್ರ ಸರ್ಕಾರ ತನ್ನ ಮುಕ್ತ ರೇಷ್ಮೆ ಆಮದು ನೀತಿಯ ಆಜ್ಞೆಯನ್ನು ವಾಪಸ್ಸು ತೆಗೆದುಕೊಳ್ಳುವವರೆಗೆ ಪ್ರತಿಭಟನೆ ಮುಂದುವರೆಯುತ್ತದೆ.

ಈ ಕಾರ್ಯಕ್ರಮ ಮುಂದಿನ ಚುನಾವಣೆಗಳಿಗೆ ಹೂಡುತ್ತಿರುವ ಬಂಡವಾಳವಲ್ಲ ಅಥವಾ ಯಾರನ್ನಾದರೂ ಮೆಚ್ಚಿಸಲು ಅಥವಾ ದೂಷಿಸಲು ಆಡುತ್ತಿರುವ ರಾಜಕೀಯ ಡೊಂಬರಾಟವೂ ಅಲ್ಲ. ಆದ್ದರಿಂದ ಕೇಂದ್ರ ಸರ್ಕಾರದ ಈ ಅವಿವೇಕದ ತೀರ್ಮಾನವನ್ನು ವಿರೋಧಿಸಲು ಈ ಹೋರಾಟ ರೂಪಿಸಲಾಗಿದೆ ಎಂದು ವೈ.ಕೆ. ರಾಮಯ್ಯ ಹೇಳಿದ್ದಾರೆ.

ಗಂಗಾವಾಹಿನಿ, ದಿನಾಂಕ ೧೨.೧.೧೯೯೯

# ರೇಷ್ಮೆ ಆಮದು ನೀತಿ ವಿರುದ್ಧ ಹೋರಾಟ ನಿಲ್ಲದು - ರಾಮಯ್ಯ

ಬೆಂಗಳೂರು, ಜ. 12- ಕಚ್ಚಾ ರೇಷ್ಮೆ ಆಮದು ನೀತಿಯನ್ನು ಕೇಂದ್ರ ಸರ್ಕಾರ ಹಿಂತೆಗೆದುಕೊಳ್ಳುವವರೆಗೆ ಹೋರಾಟ ನಿಲ್ಲದು ಎಂದು ಕಚ್ಚಾ ರೇಷ್ಮೆ ಆಮದು ವಿರೋಧಿ ಜಂಟಿ ಕ್ರಿಯಾ ಸಮಿತಿಯ ಅಧ್ಯಕ್ಷ ಹಾಗೂ ಮಾಜಿ ಸಚಿವ ವೈ.ಕೆ. ರಾಮಯ್ಯ ಅವರು ಘೋಷಿಸಿದ್ದಾರೆ.

ಪತ್ರಿಕಾಗೋಷ್ಠಿಯಲ್ಲಿಂದು ಮಾತನಾಡಿದ ರಾಮಯ್ಯ ಅವರು, ಕೇಂದ್ರದ ಹೊಸ ರೇಷ್ಮೆ ಆಮದು ನೀತಿಯಿಂದ ದೇಶದೊಳಗೆ ಚೀನಾ ರೇಷ್ಮೆ ಕಳ್ಳಸಾಗಣೆಯನ್ನು ಸಕ್ರಮಗೊಳಿಸಿದಂತೆ ಆಗಿದೆ. ಇದರಿಂದ ಕಚ್ಚಾ ರೇಷ್ಮೆ ಬೆಲೆ ತೀವ್ರವಾಗಿ ಕುಸಿದು ರೇಷ್ಮೆ ಬೆಳೆಗಾರರು ಅಪಾರ ಸಂಕಷ್ಟಕ್ಕೆ ಗುರಿಯಾಗಿದ್ದಾರೆ ಎಂದು ಆಪಾದಿಸಿದರು.

ಕೇಂದ್ರ ವಾಣಿಜ್ಯ ಸಚಿವ ರಾಮಕೃಷ್ಣ ಹೆಗಡೆ ಅವರಿಗೆ ಈ ಪರಿಸ್ಥಿತಿಯ ಬಗ್ಗೆ ಸಂಪೂರ್ಣ ಅರಿವಿದ್ದರೂ ಸಹ, ರೇಷ್ಮೆ ಆಮದು ತಡೆಯಲು ದೃಢ ನಿಲುವು ತಳೆಯಲಿಲ್ಲ ಎಂದು ಅವರು ಆಪಾದಿಸಿದರು.

ರಾಜ್ಯಪಾಲರಿಗೆ ಮನವಿ ಸಲ್ಲಿಸಲು ರಾಜಭವನದತ್ತ ಶಾಂತ ರೀತಿಯಲ್ಲಿ ಮೆರವಣಿಗೆ ಹೋಗುತ್ತಿದ್ದ ರೈತರ ಮೇಲೆ ಪೊಲೀಸರು ವಿನಾಕಾರಣ ಲಾಠಿ ಪ್ರಹಾರ ಮಾಡಿದ್ದನ್ನು ಉಗ್ರವಾಗಿ ಖಂಡಿಸಿದ ಅವರು, ಪೊಲೀಸರ ವರ್ತನೆಯನ್ನು 'ಅತ್ಯಂತ ಅಮಾನವೀಯ' ಎಂದು ಬಣ್ಣಿಸಿದರು.

**ನೀಚ ನಡವಳಿಕೆ:** ಕೇಂದ್ರ ಸಚಿವ ರಾಮಕೃಷ್ಣ ಹೆಗಡೆ ಅವರ ಮನೆ ಮೇಲೆ ಕಿಡಿಗೇಡಿಗಳು ನಡೆಸಿದ ದಾಳಿಯನ್ನು 'ನೀಚ ನಡವಳಿಕೆ' ಎಂದು ಜರೆದ ರಾಮಯ್ಯ ಅವರು, ರೈತರು ಈ ದಾಳಿ ನಡೆಸಿಲ್ಲ ಎಂದು ಪುನರುಚ್ಚರಿಸಿದರು.

ಹೆಗಡೆ ಮನೆ ಮೇಲೆ ದಾಳಿಯಲ್ಲಿ ಸಮಾಜ ವಿರೋಧಿ ಶಕ್ತಿಗಳ ಕೈವಾಡವಿದ್ದು, ಈ ಬಗ್ಗೆ ಸೂಕ್ತ ತನಿಖೆ ಆಗಬೇಕು. ದಾಳಿ ನಡೆಸಿದ ದುಷ್ಕರ್ಮಿಗಳಿಗೆ ಉಗ್ರ ಶಿಕ್ಷೆಯಾಗಬೇಕು ಎಂದು ಅವರು ಒತ್ತಾಯಿಸಿದರು.

ಪೊಲೀಸರು ಮುನ್ನೆಚ್ಚರಿಕೆ ವಹಿಸಿದ್ದರೆ ಈ ದಾಳಿಯನ್ನು ತಡೆಗಟ್ಟಬಹುದಿತ್ತು ಎಂದು ಹೇಳಿದ ಅವರು, ನಿನ್ನೆಯ ಘಟನೆಗಳಿಗೆ ಪೊಲೀಸರ ವೈಫಲ್ಯವೇ ಕಾರಣ ಎಂದು ಆರೋಪಿಸಿದರು.

ಇಲ್ಲಿ ಬೆಂಗಳೂರು ಹತ್ತಿ ಉರಿಯುತ್ತಿದ್ದರೆ ಮುಖ್ಯಮಂತ್ರಿ ಜೆ.ಎಚ್. ಪಟೇಲ್ ಅವರು ಪಕ್ಷದ ಆಂತರಿಕ ಕಚ್ಚಾಟ ಪರಿಹರಿಸಿಕೊಳ್ಳಲು ದೆಹಲಿಗೆ ಹೋಗಿದ್ದಾರೆ. ಅವರಿಗೆ ಜನಸಾಮಾನ್ಯರ ಸಮಸ್ಯೆಗಿಂತ ತಮ್ಮ ಪಕ್ಷದ ಸಮಸ್ಯೆಯೇ ಮುಖ್ಯವಾಗಿದೆ. ಇದು ಖಂಡನೀಯ ಎಂದು ಅವರು ಹೇಳಿದರು.

ರಾಜ್ಯಪಾಲರಿಗೆ ಸಲ್ಲಿಸಿರುವ ಮನವಿಪತ್ರವನ್ನು ಪತ್ರಿಕಾಗೋಷ್ಠಿಯಲ್ಲಿ ಬಿಡುಗಡೆ ಮಾಡಲಾಯಿತು. ಕೇಂದ್ರದ ಕಚ್ಚಾ ರೇಷ್ಮೆ ಆಮದು ನೀತಿಯಿಂದ ಕೋಟ್ಯಂತರ ಮಂದಿ ದೇಶಿಯ ರೇಷ್ಮೆ ಬೆಳೆಗಾರರ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿ ಏರುಪೇರಾಗಲಿದೆ. ಗ್ರಾಮೀಣ ಕೈಗಾರಿಕೆಯೂ ನೆಲ ಕಚ್ಚಲಿದೆ ಎಂದು ಮನವಿಪತ್ರದಲ್ಲಿ ಕಳವಳ ವ್ಯಕ್ತಪಡಿಸಲಾಗಿದೆ.

ಆಮದು ಮತ್ತು ರಫ್ತು ನೀತಿಯಲ್ಲಿ ಈಗಾಗಲೇ ಒದಗಿರುವ ಸೌಲಭ್ಯಗಳಿಂದ ರಫ್ತು ಯೋಗ್ಯ ರೇಷ್ಮೆ ಉತ್ಪನ್ನಗಳನ್ನು ಇಲ್ಲೇ ಉತ್ಪಾದಿಸಬಹುದಾಗಿದೆ. ಇದರಿಂದ ಬೇಡಿಕೆ ಮತ್ತು ಪೂರೈಕೆ ನಡುವಿನ ಅಂತರ ಕಡಿಮೆಯಾಗಲಿದೆ. ಹಾಗಾಗಿ ರೇಷ್ಮೆ ಆಮದಿನ ಅವಶ್ಯಕತೆ ಇಲ್ಲ ಎಂದು ಪತ್ರದಲ್ಲಿ ವಿಶ್ಲೇಷಿಸಲಾಗಿದೆ.

ಸಂಯುಕ್ತ ಕರ್ನಾಟಕ, ದಿನಾಂಕ ೧೩.೧.೧೯೯೯





ಕರ್ನಾಟಕದ ರಾಜಕಾರಣದಲ್ಲಿ ಶ್ರೀ ವೈ ಕೆ ರಾಮಯ್ಯ ಒಂದು ಅಪರೂಪದ ಹೆಸರು. ಹಳ್ಳಿಗಾಡಿನ ಬದುಕು ಸಂಪೂರ್ಣವಾಗಿ ಹಸನಾಗಬೇಕೆಂಬ ನಿರಂತರ ಆಶಯವನ್ನು ಇಟ್ಟುಕೊಂಡು ಅಂತರಂಗ ಶುದ್ಧಿಯಿಂದ, ಕಳೆದ ಮೂರು ದಶಕಗಳಿಂದಲೂ ಇವರು ಶ್ರಮಿಸುತ್ತಿದ್ದಾರೆ. ತಮ್ಮ ತತ್ತ್ವನಿಷ್ಠೆ, ನಿಷ್ಠುರ ನಡೆ-ನುಡಿ ಹಾಗೂ ನಿರ್ಭೀತಿಯ ರಾಜಕಾರಣಕ್ಕೆ ಮತ್ತೊಂದು ಹೆಸರೇ ಆಗಿರುವ ಎಲೆಕಡಕಲು ಕಂಬೇಗೌಡ ರಾಮಯ್ಯನವರು ಕಡುಬಡವರ, ಶ್ರಮಜೀವಿಗಳ, ರೈತರ ಹಾಗೂ ಅವಕಾಶವಿಹೀನರೆಲ್ಲರ ನೇರ ಪ್ರತಿನಿಧಿಯಾಗಿದ್ದಾರೆ.

ರಾಮಯ್ಯನವರು ಸಾಮಾಜಿಕ ಕಾರ್ಯಕರ್ತ, ಹೋರಾಟಗಾರ, ಶಾಸಕ ಮತ್ತು ಸಚಿವರಾಗಿ ಬೇರೆ ಬೇರೆ ಹಂತಗಳಲ್ಲಿ ರೇಷ್ಮೆ ಬೆಳೆಗಾರರ ಸಕಲ ಕಷ್ಟ-ಕೋಟಲೆಗಳನ್ನು ಇನ್ನಿಲ್ಲದಂತೆ ಅರಿತವರಾಗಿದ್ದಾರೆ. ಆ ಅರಿವಿನ ಎಲ್ಲ ವಿವರಗಳು, ಸಮಸ್ಯೆಗಳು, ಪರಿಹಾರಗಳು ಮತ್ತು ಈ ಸಂಬಂಧದ ಹೋರಾಟಗಳ ಚಿತ್ರಣಗಳನ್ನು *ಹೊನ್ನ ಚಂದ್ರಿಕೆ* ಕೃತಿಯಲ್ಲಿ ಕಾಣಬಹುದಾಗಿದೆ.

*ಪ್ರೊ. ಕಾಳೇಗೌಡ ನಾಗವಾರ*